ಮನೋರಂಜನ ಪ್ರಕಾಶನ ಸಮಿತಿ, ಪ್ರಕಟಣೆ.

# ಎನ್ಕೆ—ಏಕಾಂಕಗಳು

(ಏಕಾಂಕಗಳ ಸಂಕಲನ)



ಶ್ರೀ ಎನ್ಕೆ ಕುಲಕರ್ಣಿ ಎಂ. ಎ, ಬಿ.ಟಿ.,

ನವ್ಹಂಬರ—೧೯೪೭

ಮನೋರಂಜನ ಪ್ರಕಾಶನ ಸಮಿತಿ, ಧಾರವಾಡ

# ಮುನ್ನುಡಿ

ಅಣ್ಣಾ ಎನ್ಕೆಯವರ ಏನಕೇ ಏಕಾಂಕಗಳಿಗೆ ಮೊದಲುನುಡಿ ಬರೆಯುವ ಭಾರ ನನ್ನದಾಗಿದೆ. ಎನ್ಕೆಯವರ ಪರಿಚಯವಿಲ್ಲದ ಕನ್ನಡಿಗನಿಲ್ಲವೆಂದು ಧಾರಾಳವಾಗಿ ಹೇಳಬಹುದು. ಅವರು ಮೊದಲು ತಮ್ಮ ಲೇಖನಿಯನ್ನೆತ್ತಿದ್ದು ಏಕಾಂಕ ಬರೆಯುವದಕ್ಕಾಗಿಯೇ! "ಇಲೆಕ್ಶನ್" ಎಂಬ ಮೊದಲನೇ ಏಕಾಂಕ ಬರೆದು ಅವರು ನಾಮಾಂಕಿತ ಏಕಾಂಕ ನಾಟಕಕಾರರಾಗಿದ್ದಾರೆ. "ನಡುಮನೆಯಲ್ಲಿ" ಯ ಹೆಂಗಸರನ್ನು ಪಡಸಾಲೆಗೆ ತರಲು "ಬೆಳ್ಳಿಯ ಹಬ್ಬ" ನೆರವೇರಿಸಿದರು. "ಮುಂಗಾಲು ಪುಟಿಗೆ" ಯಿಂದ ಹರಟೆಗಾರರೆಂಬ ಹೆಸರುಗಳಿಸಿ "ಸಾವಿನುಡಿ" ಯ ಅಂಚಿಗೆ ನಿಂತು ಜೀವನದ ಕಹಿಸಿಹಿಗಳನ್ನನುಭವಿಸಿ, ಈಗ ಮುಂಬಯಿಯ ಕನ್ನಡ ಬಾನುಲಿಯ ಕೇಂದ್ರಾಧಿಪತಿಗಳಾಗಿ ಎರಡು ಕೋಟಿ ಕನ್ನಡಿಗರಿಗೆ ರಸದೂಟವನ್ನು ನೀಡುತ್ತಿದ್ದಾರೆ. ಹಳ್ಳಿಯ ಬಂಧುಗಳ ಆಪ್ತಮಿತ್ರರಾಗಿದ್ದಾರೆ.

"ಚಂದ್ರಹಾಸ" ಎಂಬ ಪಂಪಾ ಪಿಕ್ಚರ್ಸದವರ ಚಿತ್ರಕ್ಕೆ ಕತೆ-ಸಂವಾದಗಳನ್ನು ಬರೆದು ಕೊಟ್ಟಿದ್ದಾರೆ. ಅಲ್ಲದೇ "ರೇಡಿಯೋ ಕವನಗಳು" ಎಂಬ ಇವರ ಚಿಕ್ಕ ಕವನಸಂಗ್ರಹವೂ ಬೇಗನೇ ಹೊರಡಲಿದೆ. ಗಿಡಗಿಡ ಹಾರಾಡುವ ಗಿಳಿಗೂ ಕನ್ನಡ ನುಡಿಸುವ ಹಂಬಲ ಇವರಿಗಿದೆ!

ಇದರು ಬರೀ ನಾಟಕಕಾರರಲ್ಲನೆ ನಟರೂ ಆಗಿದ್ದಾರೆ. ಗದುಗಿನಲ್ಲಿ ಶಾಂತಳ ಪಾತ್ರ ವಹಿಸಿದುದೇ ಇದಕ್ಕೆ ನಿದರ್ಶನ.

ಹೀಗೆ ನಾಟಕವಾಡಿ, ಹರಟೆಹೊಡೆದು, ಕಾದಂಬರಿಕಾರರಾಗಿ ಕವಿಗಳಾಗಿ ಇನ್ನಾವ ಕ್ಷೇತ್ರದಲ್ಲಿ ಕಾಲಿಡುವರೋ ಗೊತ್ತಿಲ್ಲ. "ಹೊಸಜಲ ಹೊಸ ನೆಲ ಹೊಸಜನ" ಎನ್ನುತ್ತ 'ಮುಸಾಫಿರಿ'ಯಾಗಬೇಕೆಂಬ ಇವರ ಹಂಬಲ ಕೊನರುವದೇನೋ ಯಾರು ಬಲ್ಲರು?

ನಾಡಗುಡಿಯನೇರಿಸುವಾಗಲೇ, ಇವರು ತಮ್ಮ ಸಾಹಿತ್ಯಗುಡಿಯನ್ನೂ ಏರಿಸಿ, ಕನ್ನಡ ಸಾಹಿತ್ಯ—ಬಾನಿನಲ್ಲಿ ಹಾರಾಡುವಂತೆ ಮಾಡಿದ್ದಾರೆ.

ಏಕಾಂಕಗಳ ತಂತ್ರ ಸ್ವಲ್ಪ ಬಿಗಿಯಾದುದು. ಅದು ಸಣ್ಣ ಕತೆಯಷ್ಟು ಸುಲಭವಲ್ಲ. ಏಕಾಂಕಗಳಲ್ಲಿ ಸಂಭಾಷಣೆಗಳ ಮುಖಾಂತರವೇ ಕತೆಯ ಓಟ ಪಾತ್ರ ಪರಿಪೋಷಣೆಯಾಗಬೇಕು. ಕಂಪನಿಯ ನಾಟಕಗಳಿಗೂ, ಸಾಮಾಜಿಕ ಏಕಾಂಕಗಳಿಗೂ ದಕ್ಷಿಣ ಉತ್ತರ ಧ್ರುವದಷ್ಟು ಅಂತರ. ಕಂಪನಿಯ ನಾಟಕಗಳಲ್ಲಿ ಕಲಾಮಯತೆ ಇಲ್ಲ. ಈ ನಾಟಕಗಳಲ್ಲಿ ಮಾತಿನ ಆಡಂಬರ, ವೇಷ ಭೂಷಣಗಳ ಝುಗಝುಗಾಟವನ್ನೇ ನೋಡಬೇಕು. ಈ ಆಡಂಬರದಲ್ಲಿ ಕತೆಯ ಕಣ್ಣು ಕುರುಡಾಗಿ ಬಿಟ್ಟಿತು. ವಾಸ್ತವಿಕತೆ ಸ್ವಾಭಾವಿಕತೆಗೆ, ಇಂಬಿಲ್ಲದಾಯಿತು; ನಾಟಕ ಹಾಗೂ ಜನಜೀವನಕ್ಕೆ ಸಂಬಂಧವಿಲ್ಲದಾಯಿತು.

ಈ ಸ್ಥಿತಿಯನ್ನು ಕಂಡು ಕನ್ನಡ "ಕೈ" ಮರಗಿತು. ಸಾಮಾಜಿಕ ನಾಟಕಗಳನ್ನು ಬರೆಯಬೇಕು, ಆಡಬೇಕು ಸಮಾಜದ ಟೊಳ್ಳುಗಟ್ಟಿಯನ್ನು ಸಮಾಜವನ್ನು ಹಿಂಸಿಸದೆ, ಸಮಾಜದ ಮುಂದೆ ಇಡಬೇಕೆಂದು ಟೊಂಕಕಟ್ಟಿ ನಿಂತರು ಕೈಲಾಸಂ. ಕನ್ನಡ ಸಾಹಿತ್ಯದ ಕೈಲಾಸದಂತಿದ್ದ ದಿ|| "ಕೈ" ಯವರು "ಏಕಾಂಕ ಏಕೈಕ ವೀರ" ರಾಗಿ ಹೋದರು. ಏನ್ಕೆಯವರೂ "ಏಕಾಂಕ ವೀರ"ರಲ್ಲೊಬ್ಬರೂ ಏಕಾಂಕದ ಬಿಗಿಯಾದ ತಂತ್ರವನ್ನೇ ತಮ್ಮ ಮಂತ್ರ ಶಕ್ತಿಯಿಂದ ತಮ್ಮದನ್ನಾಗಿ ಮಾಡಿಕೊಂಡು ಏಕಾಂಕ ವೀರರಾಗಿದ್ದಾರೆ.

ಸ್ವಾಭಾವಿಕತೆ, ವಾಸ್ತವತೆ ಒಪ್ಪ ಪಡೆದಷ್ಟೂ ಕತೆಗೆ ಪೂರ್ಣತೆ ಬರುವದೆಂಬ ಮತ ಎನ್ಕೆಯವರದು. ಇವರ ಏಕಾಂಕಗಳಲ್ಲೆಲ್ಲ ನಾವು ಕಾಣುವದು ಈ ವಾಸ್ತವತೆಯನ್ನೇ. ವಾಸ್ತವತೆಯ ದರ್ಶನ ಇವರ ಏಕಾಂಕಗಳಲ್ಲಿ ನಿಚ್ಚಳದಾಗಿ ಮೂಡಿದೆ. ಜನಜೀವನದ ಕನ್ನಡಿಯೇ ಇವರ ಏಕಾಂಕಗಳು. "ಏಕಾಂಕ ವೀರ" ನೆನಿಸಿಕೊಳ್ಳಬೇಕೆಂದು ಇವರು ಪ್ರಯಾಸಪಟ್ಟು, ಏಕಾಂಕಗಳನ್ನು ಬರೆದಿಲ್ಲ. ತಾವು ಕಂಡುಂಡ ಬಾಳನ್ನೇ, ಏಕಾಂಕಗಳಲ್ಲಿ ತಮ್ಮದೇ ಆದ ಶೈಲಿಯಲ್ಲಿ ಚಿತ್ರಿಸಿದ್ದಾರೆ. ಏಕಾಂಕದಲ್ಲಿ ಬರುವ ವ್ಯಕ್ತಿಗಳು ಸಮಾಜದಲ್ಲಿ ಕಂಡುಬರುವ ವ್ಯಕ್ತಿಗಳೇ ಆಗಿವೆ. ಕ್ಷುಲ್ಲಕ ಪಾತ್ರಕ್ಕೂ ಜೀವಕಳೆ ಕಟ್ಟುವ ಕೈಚಳಕ ಇವರಿಗಿದೆ. ಅಲ್ಲದೆ ರಂಗಭೂಮಿಯಲ್ಲಿಯೂ ಇವರ ಸೂಕ್ಷ್ಮದೃಷ್ಟಿ ನಿದರ್ಶನಕ್ಕೆ ಬರುವದು. "ಸಾಹಿತಿಯ ಶ್ರಾದ್ಧ," "ದಿವಾಳಿಯ ದಶಮಗ್ರಹ" ಹಾಗೂ "ಅಹಲ್ಯಾ ಕಲ್ಯಾಣ"ದಲ್ಲಿಯ ರಂಗಸೂಚನೆಯನು ಗಮನಿಸಬೇಕು.

ಪಾತ್ರಸೃಷ್ಟಿ, ದೃಶ್ಯರಚನೆ, ಕಾಲವಾನಗಳ ದೃಷ್ಟಿಯಿಂದ ಏಕಾಂಕದಲ್ಲಿ ಒಳ್ಳೇ ಹಿಡಿತಬೇಕು. ಒಟ್ಟಿನ ಪರಿಣಾಮದಲ್ಲಿ ಏಕರೂಪಕತೆ ಬೇಕು. ಈ ಪರಿಣಾಮದಲ್ಲಿಯ ಏಕರೂಪತೆಯನ್ನು ನಾವು " ನಾರೀಪ್ರಚಾರ " " ಸತಿ-ವ್ರತ ಶಿರೋಮಣಿ " ಯಲ್ಲಿ ಕಾಣುತ್ತೇವೆ

" ಮದುವೆಯಾಗದ ಹೆಣ್ಣಿಗಿಂತ, ಮದುವೆಯಾಗದ ಹೆಣ್ಣು ಪಡೆದ ತಂದೆ-ತಾಯಿಗಳ ಗೋಳು ಒಂದು ಮಹಾ ಸಮಸ್ಯೆ" ಎಂಬ ಮಾತು "ಅಹಲ್ಯಾ ಕಲ್ಯಾಣ" ಹಾಗೂ " ನಾರೀ ಪ್ರಚಾರ "ದಲ್ಲಿ ನಿದರ್ಶನಕ್ಕೆ ಬರುತ್ತದೆ. " ಅಹಲ್ಯಾ ಕಲ್ಯಾಣ "ದ ದುರ್ಗಾಬಾಯಿ ಅನ್ವರ್ಥಕ ಅಭಿದಾನವುಳ್ಳವಳೆಂದು ಹೇಳಬಹುದು. ವಧುವಾಗಬೇಕಾಗಿರುವ ಅವಳ ಮಗಳು ಅಹಲ್ಯೆಗೆ ಏಕಕಾಲಕ್ಕೆ ಮೂವರು ವರಸ್ತರರ ದಾಳಿಯನ್ನು ಸಹಿಸಬೇಕಾಗಿದೆ.

ಹೆಣ್ಣಿನ ಜೀವನವನ್ನು ಒಳಹೊಕ್ಕು ನೋಡುವ ಸೂಕ್ಷ್ಮದೃಷ್ಟಿ ಎನ್ಕೆಯರಿಗಿದೆ. ಅದಕ್ಕೆ ಅವರ ಸುತ್ತಲಿನ ಪರಿಸರವೇ ಕಾರಣವೆಂದು ಹೇಳಬಹುದು. ಹೆಂಗುಸರ ಬಾಯಲ್ಲಿ ಬರುವ ಮಾತುಗಳು ಯಥಾವತ್ತಾಗಿ ಇವರ ಲೇಖನಿಯಲ್ಲಿಳಿಯುವವು. " ದೇವರು ಈ ಹೆಂಗುಸರಿಗೆ ಮೈಯೊಳಗೆ ಸಿಟ್ಟು, ಕಣ್ಣೊಳಗೆ ನೀರು ಇವೇ ಎರಡು ದಯಪಾಲಿಸಿದನೇನೋ " ಎಂದು ಹೇಳುವಲ್ಲಿ ಇವರ ಸೂಕ್ಷ್ಮ ಅವಲೋಕನ ವ್ಯಕ್ತವಾಗುವದು.

" ಮಾವ ಅಂದರ ಕುಬೇರ ಅಲ್ಲ. ಬಾಯಿಸತ್ತ ಮಾವನಲ್ಲ. ೨೦ನೇ ಶತಮಾನದ ಮಾನವನಾದ ಮಾವ. " ಎಂಬ ಮಾತನ್ನು ಮಾವನ ಪರವಾಗಿ ದಿವಾಳಿಯ ದಶಮಗ್ರಹದಲ್ಲಿ ಹೇಳಿದ್ದಾರೆ.

" ಪುರಾಣದ ಪೂರ್ವರಂಗ "ದಲ್ಲಿ ಹಿರಿಯ ಹೆಂಗುಸರ ಹರಟೆಯ ಸ್ವರೂಪ ಎಂಥದೆಂಬುದು ಗೊತ್ತಾಗುವದು.

" ನಾರೀಪ್ರಚಾರ "ದಲ್ಲಿ ಕಾವು ಏರಿ ಆವೇಶದಿಂದ ಮಾತನಾಡುವ ಕಾವೇರಿ, ಹೆಂಗುಸರು ಅವಿವಾಹಿತರಾಗಿಯೇ ಉಳಿಯಬೇಕೆಂದು ವಚನ ಕೊಟ್ಟ ಕಾವೇರಿ, ಕೊನೆಗೆ ಎಲ್ಲರಿಗಿಂತಲೂ ಮೊದಲು ವಿವಾಹಬದ್ಧಳಾಗುವಳು. ಇಂದಿನ ಮರಾಠಿ ಕಲಿತ ಶಿಕ್ಷಕಿಯರಲ್ಲಿ ಕನ್ನಡದ ಬಗ್ಗೆ ಇರುವ ಅನಾದರೂ ಅನಾಸ್ಥೆಗಳ ವಾಸ್ತವ ಚಿತ್ರವನ್ನು ನಾವು ಈ ನಾರೀ ಪ್ರಚಾರದಲ್ಲಿ ನೋಡಬಹುದಾಗಿದೆ.

" ಎ. ಆರ್. ಪಿ. ಪ್ರಹಸನ " , " ಟಲಿಫೋನ ಟಾಕೀಜ " ಇವು ನಾಟ್ಯಛಟದ ರೂಪದಲ್ಲಿವೆ. ಅವುಗಳನ್ನು ಏಕಾಂಕಗಳಲ್ಲಿ ಏಕೆ ಸೇರಿಸಿದರೋ ತಿಳಿಯದು. ಎ. ಆರ್. ಪಿ. ಪ್ರಹಸನದಲ್ಲಿ ವಿಮಾನ ದಾಳಿಗಿಂತ ಹೆಂಡತಿಯು ಆಕ್ರೋಶ ಆರ್ಭಟಿಯ ದಾಳಿ ಭೀಕರತರವಾದುದೆಂಬ ಸತ್ಯವನ್ನರುಹಿದ್ದಾರೆ.

" ಸತಿವೃತ ಶಿರೋಮಣಿ " ವಿಚಾರವನ್ನು ಕೆರಳಿಸುವ ಏಕಾಂಕ. ಹೆಣ್ಣು-ಗಂಡಿನ ವ್ಯವಸಾಯದಲ್ಲಿ ಸ್ಥಾನಪಲ್ಲಟನ ಮಾಡಿದರೆ, ಆಗುವ ಅನಾಹುತ, ಪರಮೇಶ್ವರಯ್ಯನ ಸಮತೂಕವೃತ್ತಿ, ಗಂಡನ ಸಾತಿವ್ರತ್ಯ, ಹೆಂಡತಿಯು ತಿರಸ್ಕಾರ ಇವೆಲ್ಲವುಗಳ ಚಿತ್ರಣ ಪ್ರಶಂಶನೀಯವಾಗಿದೆ. ಗಂಡ ತನ್ನ ಹೆಂಡತಿಯನ್ನು ಹೇಗೆ ನಡೆಸಿಕೊಳ್ಳುವನೆಂಬುದು ತನಗೇ ತಿಳಿಯದು. ಈ " ಸತೀವೃತ ಶಿರೋಮಣಿ " ಕನ್ನಡಿಯಲ್ಲಿ ಗಂಡನಾದವನು ತನ್ನ ಪ್ರತಿಬಿಂಬ ನೋಡಲಿ!

ಹೆಣ್ಣು ಹೆತ್ತವರ ಪಾಡು, " ಅಹಲ್ಯಾ ಕಲ್ಯಾಣ " ದಲ್ಲಿ ಚಿತ್ರಿತವಾಗಿದೆ. ತಾಯಿಗಾಗಿ ವಿದ್ಯೆ ಕಲಿಯುವ ನಟನೆ ಮಾಡುವ ಮಾದರಿ ಅಹಲ್ಯೆ. "ಸಾಹಿತಿಯ ಶ್ರಾದ್ಧ " ಇದೊಂದು ಉತ್ತಮ ಏಕಾಂಕ. " ನಾಟಕಕಾರನ ಯಶ ಓದುಗಿರನ್ನು ಗುಂಗುಹಿಡಿಸುವ ಗುಣದಲ್ಲಿದೆ " ಎಂಬ ಮಾತಿನ ಸತ್ಯತೆಯನ್ನು ನಾವಿಲ್ಲಿ ಕಾಣಬಹುದಾಗಿದೆ. ಸಾಹಿತಿಯ ಒಂದೊಂದು ಮಾತೂ ಮೊನೆಯಾಗಿದೆ. ಬರೆದದ್ದೆಲ್ಲವೂ ಮುದ್ರಣವಾಗಬೇಕೆಂಬ ತರುಣರ ಹವ್ಯಾಸ. ಸಾಹಿತಿ ಎನಿಸಿಗೊಳ್ಳಬೇಕೆಂಬ ತರುಣರ ಹಿರಿಯ ಹಂಬಲ, ಸಾಹಿತಿ " ಸಾಯಿತಿ " ಎಂಬ ನಿರ್ಧಾರಕ್ಕೆ ಬಂದ ನುರಿತ ಹಿರಿಯ ಸಾಹಿತಿಯ ಅನುಭವಜನ್ಯ ವಿಚಾರಗಳು. ಇವೆಲ್ಲಾ ಪ್ರಶಂಶನೀಯವಾಗಿದೆ. ಈ ಏಕಾಂಕ ಓದುವದರಿಂದ ಓದುಗ ಭಾವ ನಿರ್ಭರತೆಯಿಂದ ಭಾವಸಮಾಧಿಯನ್ನು ಕಾಣುವನು ನಾಟಕಕಾರನಿಗೆ ಓದುಗನಿಂದ ಇದಕ್ಕಿಂತಲೂ ಇನ್ನಾವ ಹೆಚ್ಚಿನ ಬಹುಮಾನ ಬೇಕು ?

" ಹಿನ್ನಡೆದ ವೀರನು " ಪ್ರೇಮಾಲಾಪನೆಗಳಲ್ಲಿ ಬಹಳ ಮುನ್ನಡೆದಿದ್ದಾನೆ ಎಂದು ಕಂಡುಬರುವ ಯು ಟಿ.ಸಿ. ಪರಿಷತ್ತು ' ಇದೂ ಒಂದು ಉತ್ತಮ ಏಕಾಂಕ. ಉಡುಪಿಯ ಟೀ ಕ್ಲಬ್ಬುಗಳಿಂದಲೂ,ಕರ್ನಾಟಕ ಏಕೀಕರಣ, ಕನ್ನಡಭಾಷಾ ಶುದ್ಧೀಕರಣ ಹೇಗೆ ಸಾಧ್ಯವಿದೆಯೆಂಬ ಮಾತನ್ನು ನಾವಿಲ್ಲಿ ಮನಗಾಣುವೆವು ಇಂಗ್ಲಂಡಿನಲ್ಲಿ ಸಾಹಿತ್ಯ ನಿರ್ಮಾಣವಾದುದು ಹೋಟ್ಲನಲ್ಲಿಯೇ ಅಲ್ಲವೇ? ಅಂದ ಮೇಲೆ ಭಾರತೀಯ ಹೋಟ್ಲುಗಳಲ್ಲಿಯೂ ಸುಧಾರಣೆಯಾಗಬೇಡವೇ ?

"ಕ್ರಾಂತಿಪಟ" ಕನ್ನಡ ವಾಕ್ಪಟಗಳ ಭವಿಷ್ಯ ಸಾರುವ ಏಕಾಂಕ. ತಲೆ ಬರಹದಲ್ಲಿಯ ಜೋರು ಏಕಾಂಕದಲ್ಲಿ ಇಳಿದಿಲ್ಲ. ನಾಟಕಕಾರನಿಗೆ ಹೇಳಬೇಕಾದ ಅಂಶ ಏಕಾಂಕದಲ್ಲಿ ಸ್ಫುಟವಾಗಿ ಮೂಡಿಲ್ಲ.

'ಇಲೆಕ್ಶನ್' ಇವರ ಮೊದಲನೇ ಏಕಾಂಕವಾಗಿದ್ದರೂ ಉತ್ತಮ ಏಕಾಂಕ. ಕಾಲೇಜ ಜೀವನದ ಯಥಾರ್ಥ ಚಿತ್ರಣ ಇಲ್ಲಿದೆ. ಕಾಲೇಜ ಇಲೆಕ್ಶನ್‌ಗಳ ಸಂಪೂರ್ಣ ಪರಿಚಯ ಒದುಗರಿಗೆ ಆಗುವದು.

ಕೊನೆಯದಾಗಿ "ನಳೋಪಾಖ್ಯಾನ" ಏಕಾಂಕ. ಮನೆಮನೆಯಲ್ಲಿಯೂ ಕಾಣುವ ದೃಶ್ಯ ಇದು. ಓದುಗರನ್ನು ಹಾಸ್ಯಗಡಲಿನಲ್ಲಿ ತೇಲಿಸಿ ಬಿಡುವದು. ಕೊನೆಗೆ ಅಡಿಗೆಯ ಮನೆಯ ಸೂತ್ರಗಳನ್ನು ಅರ್ಧಾಂಗಿಯೇ ಒಪ್ಪಿಸಿಕೊಳ್ಳುವಳು. ಲೆಕ್ಕಣಿಕೆಯ ವೀರ ಊದುಗೊಳವೆ ಹಿಡಿಯಲಾರ. ಆದರೆ ಊದುಗೊಳವೆ ಸೌಟು ಹಿಡಿಯುವದನ್ನು ಗಂಡಸು ಕಲಿಯಬೇಕು. ಸೌಟು ಹಿಡಿಯದೆ ಅಶನಕ್ಕೆ ಗತಿಯಿಲ್ಲ.

ಹೀಗೆ ಎನ್ಕೆಯವರ ಏಕಾಂಕಗಳೆಲ್ಲ ಹಾಸ್ಯಮಯವಾಗಿವೆ. ತಿಳಿಯಾದ ನಿರ್ದುಷ್ಟ ಹಾಸ್ಯ ಏಕಾಂಕಗಳ ತುಂಬೆಲ್ಲ ಹೆಣೆದುಕೊಂಡಿದೆ. ಇದುವೆ ಅವರ ಏಕಾಂಕಗಳ ಗುಣ, ತಮ್ಮದೇ ಆದ ವಿಶಿಷ್ಟ ಶೈಲಿ ಇವರದಾಗಿದೆ. ಮಾತಾಡುವ ಭಾಷೆಯನ್ನೆ ನಾಟಕವಾಡುವ ಭಾಷೆಯನ್ನಾಗಿ ತಿಳಿನಿದ್ದು ಹಿತಕರವಾಗಿದೆ. ನಾಟಕದ ಅಂಶವು ಜನಸಾಮಾನ್ಯರಲ್ಲಿ ಬಿಂಬಿಸಬೇಕಾದರೆ ಅವರ ಭಾಷೆಯಲ್ಲಿಯೇ ನಾಟಕವಾಡಬೇಕಲ್ಲವೇ ?

ನಾಟಕದ ತಲೆಬರಹಗಳಲ್ಲಿಯೂ ವೈಶಿಷ್ಟ್ಯವಿದೆ. ನಾವಿನ್ಯತೆಯಿದೆ. ಪತಿವ್ರತ ಶಿರೋಮಣಿ, ಸಾಹಿತಿಯ ಶ್ರಾದ್ಧ, ನಾರೀಪ್ರಚಾರ, ಅಹಲ್ಯಾ ಕಲ್ಯಾಣ. ಇ. ಇ. ಅಲ್ಲದೇ ಸಿನೇಮಾ ಪ್ರಭಾವವೂ ಹೆಚ್ಚಾಗಿ ಅಲ್ಲಲ್ಲಿ ಕಂಡು ಬರುವದು. ಇನ್ನು ಮಹಿಳೆಯರ ಮನೋಗತಿಯ ಬಗ್ಗೆ ಇಂದಿನ ಮಹಿಳೆಯರ ಮನೋಗತಿಯು ಹೇಗಿದೆ ಹೇಗಿರಬೇಕು ಎಂದು ಇಲ್ಲಿ ಪ್ರಸ್ತಾಪಿಸಿದರೆ ಅಪ್ರಸ್ತುತವಾಗಲಿಕ್ಕಿಲ್ಲವಷ್ಟೇ !

ಇಂದಿನದು ಕಂಟ್ರೋಲ ಕಾಲ. ಎಲ್ಲೆಲ್ಲಿಯೂ ಕೂಳಿನ ಕಾಳಗ ನಡೆದಿದೆ. ಕೂಳಿನ ಕೂಗು ಕೇಳುತ್ತಿದೆ. ಅರಿಕೇಸರಿಯ ಆಸ್ಥಾನದಲ್ಲಿ ತಿಂದುಂಡ

ಪಂಪ "ಆರಂಕುಶವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ" ಎಂದು ಹೇಳಿದ. ಈ ಕಂಟ್ರೋಲ ಯುಗದಲ್ಲಿ ಅವನಿದ್ದರೆ, ಬನವಾಶಿ ದೇಶವನ್ನು ನೆನೆಯುವದು ಗೊತ್ತಾಗುತ್ತಿತ್ತು. ನಮಗಿಂದು "ಆರಂಕುಶವಿಟ್ಟೊಡಂ ನೆನೆವುದೆಮ್ಮ ಮನಂ ಒಡಲಿಕೆಗನ್ನಮಂ" ಎಂದು ಅನ್ನಬೇಕಾಗಿದೆ. ಅನ್ನವಿಲ್ಲದ ತಲೆಯಿಂದ ಯಾವ ಕೆಲ್ಸ ತಾನೇ ಸಾಧ್ಯವಾದೀತು? ಕವಿರತ್ನ ಸಾರಸ್ವತ ಭಾಂಡಾರದ ಮುದ್ರೆಯನ್ನೊಡೆಯಬೇಕಾಗಿದೆ. ಹಸಿದು ಕಂಗಾಲಾದವರಿಗೆ ಭಾಂಡಾರದ ಅನ್ನವನ್ನು ತೂರಿ ತೂರಿ ಕೊಡಬೇಕಾಗಿದೆ ಆದರೆ ಭಾಂಡಾರದ ಕೀಲಿಕೈ ಎಲ್ಲಿದೆ ಗೊತ್ತೋ? ಯೋಗ್ಯ ಶಿಕ್ಷಣ, ವಿದ್ಯಾಸಂಪಾದನೆಯೇ ಆ ಕೀಲಕೈ. ಯೋಗ್ಯ ಶಿಕ್ಷಣದಿಂದ ಆಹಾರ ದೊರಕಿಸುವ ಕಲೆ ಕಲಿಯಬೇಕಾಗಿದೆ. ದೇಹಕ್ಕೆ ಅನ್ನ ಬೇಕಾಗುವಂತೆ ಬುದ್ಧಿಗೂ ಅನ್ನಬೇಕು ಆಹಾರಬೇಕು.

ಈ ಬುದ್ಧಿಯ ಆಹಾರ ಇಂದಿನ ಹೆಂಗಸರಿಗೂ ಬೇಕೆಂದು ಸ್ವತಂತ್ರ ಭಾರತದಲ್ಲಿಯ ಮಹಿಳೆಯರಿಗೆ ಒಂದು ಸ್ಥಾನವಿದೆ. ಕರ್ತವ್ಯವಿದೆ. ಅವರು ಕುರುಡರಾದರೆ ಭಾರತ ಮುಂದೆ ಸಾಗದು "ಸ್ವಾತಂತ್ರ್ಯ" ಎಂಬುದನ್ನು ನಾವಿಂದು ಬರೀ ಶಬ್ದದಲ್ಲಿ ಕಾಣುತ್ತೇವೆ ಸ್ವಾತಂತ್ರ್ಯವೆಂದರೇನು? ಜನಸಾಮಾನ್ಯರಿಗೆ ಹೊಟ್ಟೆತುಂಬ ಅನ್ನ, ಮೈತುಂಬ ಬಟ್ಟೆ, ಉದಾತ್ತ ಜೀವನ ಸಾಗಿಸಲು ಶಿಕ್ಷಣಸಂಸ್ಕಾರ ಇವಷ್ಟಾದರೂ ಬೇಡವೇ?

ಒಂದು ರಾಷ್ಟ್ರದ ಉನ್ನತಿಯನ್ನು ಅಳೆಯುವ ಅಳೆಗೋಲು ಯಾವುದು ನಿಮಗೆ ಗೊತ್ತೇ? ಖನೀಜ ಸಂಪತ್ತನ್ನುವಿರಾ? ಅಲ್ಲ. ಕಾರಖಾನೆಗಳೇ? ಅಲ್ಲ. ಪಟ್ಟಣಗಳೇ? ಅಲ್ಲ. ಹಾಗಾದರೆ ಇನ್ನೇನು? ಒಂದು ರಾಷ್ಟ್ರದ ಉನ್ನತಿಯನ್ನು ಅಳೆಯುವ ಅಳೆಗೋಲು ಆ ರಾಷ್ಟ್ರದ ಸ್ತ್ರೀಯರ ಸಾಮಾಜಿಕ ಹಾಗೂ ರಾಜಕೀಯ ಸ್ಥಾನಮಾನ ಹಾಗೂ ಶಿಕ್ಷಣವನ್ನವಲಂಬಿಸಿದೆ. ಜಗತ್ತಿನ ಅರ್ಧಭಾಗವನ್ನು ವ್ಯಾಪಿಸಿದ ಸ್ತ್ರೀಯರನ್ನು ಕಡೆಗಣಿಸಿ, ಪುರುಷರು ಮುಂದೋಡಲು ನುಗ್ಗಿದರೆ, ಅವರಿಗೆ ಪ್ರಗತಿಯಿಲ್ಲ, ಶಿಕ್ಷಣವಿಲ್ಲದ ಹೆಂಗಸರು ಅವರಿಗೆ ಕಾಲ್ತೊಡಕಾಗುವರು. ಅವರ ಪ್ರಗತಿ ಕುಂಠಿತವಾಗುವದು. ಹೆಂಗುಸರನ್ನು ಹಿಂದೂಡಿ ಮುಂದೋಡುವೆನೆಂಬ ಹಟ ಸಾಧಿಸಲಿಕ್ಕಿಲ್ಲ.

ಹೆಂಗುಸು ಬರೀ ಪುರುಷನ ಭೋಗವಸ್ತುವಲ್ಲ, ತ್ಯಾಜ್ಯವೆಂದು ಕಡೆ ಗಣಿಸಿ ಬೀಸಾಡುವ ವಸ್ತುವೂ ಅಲ್ಲ, ಅಲಸ್ಯ ಮಾಡಿ ಒಗೆಯುವ ಆಟಿಗೆ ಯಲ್ಲ, ಅವಳಿಗೆ ದೇವತೆಯೆಂದು ಬರೀ ಪೂಜೆ ಸಲ್ಲಿಸಬೇಕಾಗಿಲ್ಲ, ಅಬಲೆ ಯೆಂದು ಕಾರುಣ್ಯಕ್ಕೀಡಾಗಬೇಕಾಗಿಲ್ಲ. ಅವಳೂ ಒಬ್ಬ ವ್ಯಕ್ತಿ. ಪುರುಷರ ನೋವು ನಲಿವುಗಳಲ್ಲಿ ಸಹಭಾಗಿಯಾಗಿ ರಾಷ್ಟ್ರದ ಏಳ್ಗೆಗೆ ಕೈಭಾರ ಹಚ್ಚು ವಳು, ಪುರುಷನ ಸುಖದುಃಖಗಳ ನೆರಳಿನಲ್ಲಿ ನಿಂತು ಅವನ ಬಾಳಿಗೆ ಬೆಳ ಕನ್ನು ನೀಡುವಳು.

ನಮ್ಮ ಇಂದಿನ ಭಾರತದ ಮಹಿಳಾಲೋಕ ನೋಡಿದರೆ ನಮಗೇನು ಕಂಡುಬರುವದು ? ಜನಸಾಮಾನ್ಯ ಮಹಿಳೆಯರಿಗೆ ಹೊರಜಗತ್ತಿನ ಸಂಪರ್ಕ ವಿಲ್ಲ. ಮನೋವೈಶಾಲ್ಯವಿಲ್ಲ. ಇದು ಯಾರ ತಪ್ಪು ? ಹೆಣ್ಣಾಗಿ ಹುಟ್ಟಿದ್ದು ಅವರ ತಪ್ಪೇ ? ಅವರಿಗೆ ಯೋಗ್ಯ ಶಿಕ್ಷಣದ ಏರ್ಪಾಡು ಮಾಡದ ಅವರ ರಾಷ್ಟ್ರದ ತಪ್ಪು. ಮುಂದೋಡುವ ಮಹಿಳೆಯರನ್ನು ಯೋಗ್ಯ ಮಾರ್ಗ ದರ್ಶನ ಕೊಡದೆ, ಸುಮ್ಮನೆ ಹಿಂದೆ ಜಗ್ಗುವ ವಿಘ್ನಸಂತೋಷಿಗಳಾದ ಪುರು ಷರ ತಪ್ಪು. ಸೀತಾ—ಸಾವಿತ್ರಿಯರ ಕತೆಗಳು ನಮ್ಮ ನೀತಿಯ ನೆಲೆಗಟ್ಟು ಭದ್ರವಾಗಲು ನಿರಂತರವಾಗಿ ಮಾರ್ಗದರ್ಶನ ಕೊಡಲಿ. ಅವರ ತ್ಯಾಗದ ದೀವಟಿಗೆಯಿಂದ ನಮ್ಮ ಕತ್ತಲೆಯ ಮಾರ್ಗ ಬೆಳಕನ್ನು ಪಡೆಯಲಿ ಅವರ ಕತೆಗಳು ಹೆಂಗಸಿನ ಪ್ರಗತಿಯನ್ನು ಅಡ್ಡಗಟ್ಟದಿರಲಿ. ಹೆಂಗಸಿನ ದೌರ್ಬಲ್ಯ ಮುಚ್ಚುವದಕ್ಕೆ ಆ ಕತೆಗಳ ಹೊದಿಕೆ ಬೇಡ !

ಸಮಾನಹಕ್ಕೆಂಬ ಹುಚ್ಚುಹೊಳೆಯಲ್ಲಿ ಹೆಂಗುಸು ಕೊಚ್ಚಿಕೊಂಡು ಹೋಗುವದು ಬೇಡ. ಸ್ತ್ರೀ-ಪುರುಷರಲ್ಲಿ ಹುಚ್ಚುಸ್ಪರ್ಧೆ ಬೇಡ. ಪರಸ್ಪರರಲ್ಲಿ ಹಿತಕರವಾದ ಸಾಮರಸ್ಯವಿರಲಿ. ಗಂಡುಸನ್ನು ಕಂಡು ಹೆಂಗುಸು ಮೂರು ಮಾರು ಜಿಗಿಯುವದು ಬೇಡ. ಹೆಂಗುಸನ್ನು ಕಂಡು ಗಂಡುಸು ಮೂಗು ಮುರಿಯುವದು ಬೇಡ. ಸ್ವಾಭಾವಿಕವಾಗಿಯೇ ಸ್ತ್ರೀ-ಪುರುಷರಿಗೆ ಕೆಲವು ವಿಶಿಷ್ಟ ಗುಣಗಳಿವೆ. ಆ ಗುಣಗಳ ವಿನಿಮಯವಾಗಲಿ ಹೆಂಗುಸು ಸ್ವಾಭಾವಿಕ ವಾಗಿಯೇ ದಯಾಶೀಲಳು; ಭಾವನಾಪ್ರಧಾನಳು. ಗಂಡುಸು ಕಾರುಣ್ಯದ ಮೂರ್ತಿ; ಬುದ್ಧಿಪ್ರಧಾನ. ಅದಕ್ಕಾಗಿಯೇ ಗಂಡುಸು ಭಾವ, ದಯಾ ಸಂಪತ್ತನ್ನು ಹೆಂಗುಸಿಂದ ಪಡೆಯಲಿ. ಬುದ್ಧಿಯ ಪ್ರಖರತೆ, ಕಠೋರತೆ

ಯನ್ನು ಹೆಂಗುಸು ಗಂಡುಸಿಂದ ಪಡೆಯಲಿ. ಹೆಂಗುಸಿಂದಲೇ ಗಂಡುಸು ಸಂಸ್ಕೃತಿ ಸಂಸ್ಕಾರಗಳನ್ನು ಪಡೆದು ಗಣ್ಯಜೀವಿಯಾಗಿ ಬಾಳಲಿ! ಪರಸ್ಪರ ರಲ್ಲಿಯೂ ಯೋಗ್ಯವಾದ ಕೊಡಕೊಳ್ಳುವ ವ್ಯವಹಾರ ನಾಗಲಿ!

ವಿಜಯಲಕ್ಷ್ಮಿ ಪಂಡಿತರು ಹೇಳಿದಂತ, ಹೆಂಗುಸಿಗೆ ದಯಾಶೀಲ ಹೃದಯ ರಚನಾತ್ಮಕ ಬುದ್ಧಿ ಇದೆ. ಹೆಂಗುಸಿನ ದಯೆಯ ಸಂಪತ್ತನ್ನೂ ರಚನಾತ್ಮಕ ಬುದ್ಧಿಯನ್ನೂ, ಗಂಡುಸು ರಾಷ್ಟ್ರದ ಉದ್ಧಾರಕ್ಕಾಗಿ ಉಪಯೋಗ ಮಾಡಿಕೊಳ್ಳಲಿ. ಪರಸ್ಪರರಲ್ಲಿಯೂ ಸಮತೂಕವಿರಲಿ. ಸಾಮರಸ್ಯವಿರಲಿ "ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನ ಚ ದಯಃ" ಎನ್ನುವಂತಾಗಲಿ. ಹೆಂಗುಸಿನ ಬುದ್ಧಿಗೆ ಸಂಸ್ಕಾರ ಕೊಡುವ ಕೆಲಸ ಭರದಿಂದ ಸಾಗಲಿ. ಅರ್ಧ ಜನಾಂಗವನ್ನು ಅಜ್ಞಾನದಲ್ಲಿಟ್ಟು ಭಾರತೀಯರು ಎಂದಿಗೂ ಬಾಳಲಾರರು. ಅಂಥ ಅಜ್ಞಾನದ ಬಾಳು ಬೀಳು ಬಾಳು, ಹಾಳು ಬಾಳಾದೀತು!

ಈ ಬೆಳಕಿನಲ್ಲಿ ನಾಟಕಕಾರರು ಏಕಾಂಕಗಳನ್ನು ಬರಯಲಿ. ಇಂದಿನದು ಸಂಧಿಕಾಲ ಎಲ್ಲೆಲ್ಲಿಯೂ ವಿಚಾರಗಳ ತಾಕಲಾಟ ನಡೆದಿದೆ. ಮಹಿಳೆಯರ ಮನೋಗತಿ, ವಿಚಾರಗಳ ಕೋಲಾಹಲ ಚಿತ್ರಿಸಲು ಮಹಿಳೆಯರೂ, ಮಹನೀಯರೂ ತಮ್ಮ ಲೇಖನಿಗಳನ್ನೆತ್ತಲಿ. ಹೆಂಗುಸರ ಸಮಸ್ಯೆಗಳನ್ನು ಅಭ್ಯಾಸ ಮಾಡಿದ ಮಹನೀಯರೂ ಏಕಾಂಕಗಳನ್ನು ಬರೆದು ವಿಚಾರ ದೋಹನ ಮಂಡಿಸಲಿ! ಮಹಿಳೆಯರೂ ತಮ್ಮ ವಿಚಾರಗಳನು ನಿರ್ಭೀತಿಯಿಂದ ನಿರ್ದಾಕ್ಷಿಣ್ಯವಾಗಿ ಮಂಡಿಸಲಿ. ಬೇರೆಯವರ ವಿಚಾರಗಳನ್ನು ಯೋಗ್ಯವಾಗಿ ಖಂಡಿಸಲಿ!

ಎನ್ಕೆಯವರ ಏಕಾಂಕಗಳಲ್ಲಿ ೧೦—೧೫ ವರುಷಗಳ ಹಿಂದಿನ ಮಹಿಳೆಯರ ಜೀವನ ಮಾತ್ರ ಚಿತ್ರಿತವಾಗಿದೆ ಇಂದಿನ ಮಹಿಳೆಯರ ಜೀವನ ಒಳಹೊಕ್ಕು ನೋಡುವ ಸೂಕ್ಷ್ಮದೃಷ್ಟಿ ಅವರಿಗೆ ಬರಲಿ. "ಪುರಾಣದ ಪೂರ್ವರಂಗ" "ದಿವಾಳಿಯ ದಶಮಗ್ರಹ," "ನಾರೀಪ್ರಚಾರ" ಇವುಗಳಲ್ಲೆಲ್ಲಾ ಹಿಂದಿನ ಹಳೆಯ ವಿಚಾರಗಳ ಚಿತ್ರಣವಾಗಿದೆ. ಇಂದಿನ ಸ್ತ್ರೀ ಜೀವನವನ್ನೂ ಹೊಸ ಬೆಳಕಿನಲ್ಲಿ ಹೊಸ ದೃಷ್ಟಿಯಿಂದ ನೋಡುವ ಕಣ್ಣು ಅವರಿಗೆ ಬರಲಿ. ಕಾಲ ಸರಿದಂತೆ ಹಿರಿಕಿರಿ ಮಹಿಳೆಯರ ಮನೋಗತಿಯಲ್ಲಿಯೂ ಬಹಳ ಬದಲಾವಣೆ

ಯಾಗಿವೆ. ಆ ಬದಲಾವಣೆ ಲೇಖನಿಗಳಲ್ಲಿಳಿಯಲಿ! ಕಾಗದಗಳಲ್ಲಿ ಮೂಡಲಿ! ಹಿಂದಿನ ಹಳೇ ಜೀವನ ಚಿತ್ರಿಸುವುದು ಬೇಡ. ನಮಗೆ ಹಳೆರಾಗ ಬೇಡ. ಹೊಸ ಬೆಳಕು ನೀಡುವ ಹೊಸ ರಾಗ ಬೇಕು. ಸಾಹಿತಿಯ ಶ್ರಾದ್ಧ, ಸತಿವ್ರತ ಶಿರೋಮಣಿ, ಯು. ಟಿ. ಸಿ ಪರಿಷತ್ತು ಇವು ಮಾತ್ರ ಅವರ ಮೇಲ್ಪಟ್ಟದ ಏಕಾಂಕಗಳು. ಅಣ್ಣ ಎನ್ಕೆಯವರಿಗೆ ಭಾವಗಳನ್ನು ಅರಳಿಸುವ ಕೆರಳಿಸುವ ಶಕ್ತಿ ಇದೆ. ಆ ಶಕ್ತಿ ಮೇಲ್ಪಟ್ಟದ ಏಕಾಂಕಗಳನ್ನು ಚಿತ್ರಿಸುವಲ್ಲಿ ವಿನಿಯೋಗವಾಗಲಿ! ಇಂದಿನ ಮಹಿಳೆಯರ ಮದುವೆಯ ಸಮಸ್ಯೆ, ವಿಚಾರಗಳಲ್ಲಿಯ ಕ್ರಾಂತಿ, ಸಮಾಜದಲ್ಲಿಯ ಸ್ಥಾನ ಇವುಗಳನ್ನು ಕುರಿತು ಹೊಸ ಏಕಾಂಕಗಳನ್ನು ಅಣ್ಣ ಎನ್ಕೆ ಹೊಸೆಯಲಿ. ಹಳೆಯ ವಿಷಯಗಳಿಗೆ ಅಂಟಿಕೊಳ್ಳುವದು ಬೇಡ. ಪ್ರಾಸದ ಬೆನ್ನುಹತ್ತಿ ಹಾಸ್ಯ ಹುಟ್ಟಿಸಲು ಹೊರಟು ಕೆಲವೆಡೆ ಹಾಸ್ಯ ಹದಗೆಟ್ಟಿದೆ. ಆ ಹಾಸ್ಯವನ್ನು ಎನ್ಕೆ ಹದಕ್ಕೆ ತರಲಿ! ಕೆಲವೇ ನಾಟಕಗಳಲ್ಲಿ ಭಾವನಿರ್ಭರತೆ ಸಾಧಿಸಿದೆ. ಅಭಾವ ನಿರ್ಭರತೆ ಭಾವಸಮಾಧಿಯ ಗುಣ ಎಲ್ಲ ಏಕಾಂಕಗಳಲ್ಲಿಯೂ ಸಾಧಿಸುವಂತಾಗಲಿ. ಸಮಾಜಕ್ಕೆ ಬರೀ ವಾಸ್ತವಿಕತೆಯ ದರ್ಶನ ಬೇಡ. ಆ ವಾಸ್ತವತೆ ಆದರ್ಶಗಳು ಜೊತೆ ಜೊತೆಯಾಗಿ ಬರಲಿ. ಸಮಾಜದ ಮುಂದೆ ಬರೀ ಸಮಸ್ಯೆಯನ್ನಿಡುವುದು ಬೇಡ. ಸಮಸ್ಯೆ ಬಿಡಿಸುವ ವಿಧಾನವನ್ನೂ ನಾಟಕಕಾರನು ತೋರಿಸಲಿ. ಆದರ್ಶ ವಾಸ್ತವತೆಗಳ ಸಂಗಮವೇ ಉತ್ತಮ ಏಕಾಂಕದ ಒರೆಗಲ್ಲು. ಇಂಥ ಅನೇಕ ನಾಟಕಗಳನ್ನು ಎನ್ಕೆಯವರು ಬರೆಯಲಿ! ಹರಟೆ ಹೊಡೆಯಲಿ, ಕವನಗಳನ್ನು ಹೇಳಲಿ, ಅವರ ಉತ್ತರೋತ್ತರ ಅಭಿವೃದ್ಧಿಯಾಗಲಿ! ಇಷ್ಟೆಲ್ಲ ಮಾಡಲು ದೇವರು ಅವರಿಗೆ ದೀರ್ಘಾಯುಷ್ಯವನ್ನು ದಯಪಾಲಿಸಲಿ.

ಇನ್ನೊಂದು ಮಾತು. ಮುಖಚಿತ್ರ ಮೇಲೆ ಸರಸತಿಯ ತಲೆಯ ಮೇಲೆ ಎನ್ಕೆಯವರ ಭಾವಚಿತ್ರವಿದೆ. ಸರಸತಿಯ ತಲೆಯ ಮೇಲೆ ನಿಂತಿರುವೆನೆಂಬ ಹೆಮ್ಮೆ ಅವರಿಗೆ ಬೇಡ. ಆ ಹೆಮ್ಮೆ ಅವರ ಕರ್ತವ್ಯ ಚ್ಯುತಿಮಾಡದಿರಲಿ! ಸರಸತಿ ಎಷ್ಟಾದರೂ ತಾಯಿ. ವಾತ್ಸಲ್ಯ ಉಕ್ಕಿಬಂದು, ಮಮತೆಯಿಂದ ಮುದ್ದುಮಗನನ್ನು ತಲೆಯಮೇಲೆ ಕೂಡ್ರಿಸಿಕೊಂಡಿದ್ದಾಳೆ. ಅದು ಅವಳ ವಾತ್ಸಲ್ಯ ಸೌಜನ್ಯ ಈ ವಾತ್ಸಲ್ಯ ಮಗನ ಹೆಮ್ಮೆಗೆ ಕಾರಣವಾಗಬಾರದು. ವಾಣಿಯ ಕೃಪಾಪ್ರಸಾದ ನಿರಂತರವೂ ಅವರಿಗೆ ಲಭಿಸಲಿ!

ಅಣ್ಣ ಎನ್ಕೆ, ಮುನ್ನುಡಿ ಬರೆಯಲು ಹೇಳಿದರು ಬರೆದಿದ್ದೇನೆ. ಎನ್ಕೆ ಏಕಾಂಕಗಳಿಗೆ ಇದು ಮುನ್ನುಡಿಯಾಗಿದ್ದರೂ ನನ್ನ ತೊದಲ್ನುಡಿ ಇದು. ಸಹೃದಯರು ಲೋಪದೋಷಗಳನ್ನು ಮನ್ನಿಸಬೇಕು. ಮಹಿಳೆಯರ ಮನೋಗತಿಯನ್ನು ವ್ಯಕ್ತಮಾಡಲು ಮುನ್ನುಡಿಯ ಭಾರಹೋರಿಸಿ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದಕ್ಕಾಗಿ ಅಣ್ಣ ಎನ್ಕೆಯವರಿಗೆ ನಾನು ಅತ್ಯಂತ ಆಭಾರಿಯಾಗಿರುವೆ.

ವಿಜಯದಶಮಿ,
ಸರ್ವಜಿತ್ ಸಂವತ್ಸರ ೧೮೬೯
ವಿಜಾಪುರ

**ಜೆ. ಎನ್. ಇಂದಿರಾ**

# ನನ್ನ ಏಕಾಂಕಗಳು

ಇದರಲ್ಲಿ ಎಷ್ಟೋ ಏಕಾಂಕಗಳು ಈ ಮೊದಲೆ ಪ್ರಕಟವಾಗಿ ರಂಗ ಭೂಮಿಯ ಮೇಲೂ ಬೆಳಕ್ಕಿಗೆ ಬಂದಿವೆ. ಬಹಳ ಏಕಾಂಕಗಳು ಶಾಲೆ ಕಾಲೇಜ-ಗಳ ವಾರ್ಷಿಕೋತ್ಸವದ ನಿಮಿತ್ತಾಗಿಯೊ, ಇನ್ನಾವುದೊ ವಿಶೇಷೋತ್ಸವಕ್ಕಾಗಿಯೊ ಸಂದರ್ಭೋಚಿತವಾಗಿ ಬರೆಯಲ್ಪಟ್ಟಿವೆ. 'ದಿಪಾಳಿಯ ದಶಮಗ್ರಹ' ಜಯಂತಿಯ ದೀಪಾವಳಿಯ ಸಂಚಿಕೆಗಾಗಿಯೇ ಬರೆಯಲ್ಪಟ್ಟಿತು, ಜನಜೀವನದಲ್ಲಿ ಕಂಡುಬರುವ ಜಾಮಾತೃಗಳ ಒಂದು ಪ್ರಾತಿನಿಧಿಕ ಚಿತ್ರವಾಗಿ ಮೂಡಿ ಬಂತು; ಅನೇಕ ರಂಗಭೂಮಿಗಳಮೇಲೆ ಸ್ವಾಗತವನ್ನೂ ಪಡೆಯಿತು. ಜೀವನದ ಉಜ್ವಲ ಸಮಸ್ಯೆಗಳನ್ನು ತೀಕ್ಷ್ಣತೆಯಿಂದ ಗಂಭೀರತೆಯಿಂದ ಬಿಡಿಸುವ ಯತ್ನ ಇಲ್ಲಿ ಕಂಡು ಬರಲಿಕ್ಕಿಲ್ಲ. ಹಾಸ್ಯವೇ ಇಲ್ಲಿಯ ಏಕಾಂಕಗಳ ಜೀವಾಳ. 'ಸಾಹಿತಿಯ ಶ್ರಾದ್ಧ'ದಲ್ಲಿ ಎರಡನೆಯ ದೃಶ್ಯ ಗಂಭೀರವಾಗಿದ್ದರೂ ನಗೆಯು ಲಹರಿಯಲ್ಲಿ ತೇಲಿಹೋಗುತ್ತದೆ ಆ ಗಾಂಭೀರ್ಯ.

ನಾಟ್ಯಭೂಮಿಯ ಪುನರ್‍ರಚನೆಯಾಗಬೇಕಾದ ಕಾಲವಿದು. ಆದರೆ ಅಂತಹ ಮಂತ್ರ ತಂತ್ರ ಈ ಏಕಾಂಕಗಳಲ್ಲಿದೆಯೆಂಬ ಹೆಗ್ಗಳಿಕೆ ಈ ನಾಟಕಕಾರನಲ್ಲಿಲ್ಲ. ಒಂದೊಂದು ಏಕಾಂಕ ಒಂದೊಂದು ರಸದ ಲಹರಿ ಮಾತ್ರ. ಸ್ವಲ್ಪ ಹುಡುಗಾಟ ಮಾಡಿ ನಗಿಸಿ, ನಲಿಸಿ ಮೋಜು ಮಾಡಿ— ಆಮೇಲೆ ಸಹಜವಾಗಿ ನಾವು ಏಕೆ ನಕ್ಕೆವು, ಎಂದು ಸಭಿಕರು ನಾಟ್ಯಮಂದಿರದಿಂದ ಹೊರಬೀಳುವಾಗ ತಮಗೇ ತಾವು ಪ್ರಶ್ನೆ ಮಾಡಿಕೊಂಡರೆ ಸಾಕು. ಒಳ್ಳೇ ಆವೇಶದಿಂದ, ಸ್ಫೂರ್ತಿಯಿಂದ, ಪ್ರತಿಭೆಯಿಂದ ಜೀವನದ ಬಣ್ಣವನ್ನೂ ಬಯಲನ್ನೂ, ಸಂಸಾರವನ್ನೂ, ಶೂನ್ಯವನ್ನೂ ಚಿತ್ರಿಸುವ ಕಲೆಯ ಇಂದ್ರಜಾಲ, ಪಂಚವ

## ಕಾಣಿಕೆ

ಬಾಳಿನ ಕಹಿಯನ್ನೆ ಸಿಹಿಮಾಡಿಕೊಂಡು ನನ್ನ ನಾಟ್ಯ
ಸೃಷ್ಟಿಗೆ ನಿರಂತರ ಸ್ಫೂರ್ತಿಯಾಗಿ ನಡುವೇ
ನನ್ನನ್ನು ಕೈಬಿಟ್ಟು ಕಣ್ಮರೆಯಾದ–

ನನ್ನ ಅರ್ಧಾಂಗಿ

# ಇಂದಿರೆಗೆ

ನನ್ನ ಇಂದಿನ ಮುಂದಿನ ಎಲ್ಲ ಕೃತಿಗಳೂ ಅರ್ಪಿತ.

–ಎನ್ಕೆ

# ದಿವಾಳಿಯ ದಶಮಗ್ರಹ



**ಪಾತ್ರಗಳು:**

**ಹುಚ್ಚರಾಯ:**— ಯತ್ನಕ್ಕಿಂತ ದೈವಕ್ಕೆ, ಧರ್ಮಕ್ಕಿಂತ ಪತ್ನಿಗೆ ಅಧೀನನಾದ, ಅರುವತ್ತು ವರುಷಕ್ಕೆ ಸಮೀಪಿಸಿದ ಪೆನ್ಶನ್‌ದಾರ ಸಬ್‌ರಜಿಸ್ಟ್ರರ್

**ಲಕ್ಷ್ಮೀಬಾಯಿ:**— ಹುಚ್ಚರಾಯನ ಎರಡನೆಯ ಧರ್ಮಪತ್ನಿ—ಸುಮಾರು ನಾಲ್ವತ್ತು ವರುಷದವಳು.

**ವತ್ಸಲಾ:**— ರಾಯರ ಅಚ್ಚೆಯ ಚಿಕ್ಕಮಗಳು.

**ಶಕುಂತಲಾ:**— ರಾಯರ ಇನ್ನೊಬ್ಬ ಮಗಳು.

**ಅಳಿಯದೇವರು:**—ರಾಯರ ಕಿರಿಯ ಅಳಿಯ.

**ಗುಂಡೂ:**— ರಾಯರ ಒಬ್ಬನೇ ಮಗ—ಅಲ್ಪವಯಸ್ಸಿನ ಹೊಸ್ತಿಲ ಮೇಲೆ ನಿಂತಂತೆ—೧೭ ವರುಷ ವಯಸ್ಸು.



[ರಾಯರ—ಕಾನುದಾರರಿಗೆ ತಕ್ಕಂತೆ ಅಚ್ಚುಕಟ್ಟಾದ—ಮನೆಯ ನಡುಮನೆಯಲ್ಲಿ, ರಾಯರ ವಿಚಾರಭರದ ಏರಾಟ ಹೆಚ್ಚಾದಂತೆ, **ಭರಭರಾಟೆಯಿಂದ ಸತಪಥಹಾಕುತ್ತಿರುವರು.** ಕೆಲನಿಮಿಷ ರಂಗಭೂಮಿ ಸ್ತಬ್ಧವಾಗಿದ್ದು ರಾಯರ ಹೆಜ್ಜೆಯ ಸಪ್ಪಳದ ಹೊರತು ಬೇರೆ ಏನೂ ಕೇಳಬರುವುದಿಲ್ಲ. ಆಮೇಲೆ ಲಕ್ಷ್ಮೀಬಾಯಿ ಒಂದು ಕೈಯಲ್ಲಿ ಉರಳೇಗಡ್ಡೆಗಳನ್ನೂ ಇನ್ನೊಂದು ಕೈಯಲ್ಲಿ ಈಳಿಗೆಯನ್ನೂ ಹಿಡಿದುಕೊಂಡು ಪ್ರವೇಶಿಸಿ, ಸಲ್ಲೆ ಹೆಚ್ಚತೊಡಗುವಳು. ರಾಯರು ಲಕ್ಷ್ಯವಿಲ್ಲದೆ ಶತಪಥ ನಡಿಸುವುದನ್ನು ನೋಡಿ—]

**ಲಕ್ಷ್ಮಿಂಬಾಯಿ**:—ಹೊರಗೆ ಮಳಿ ಇಲ್ಲಾ, ಛಳಿ ಇಲ್ಲಾ; ಹೋಗ ಬೇಕು ತಿರುಗಾಡಲಿಕ್ಕೆ; ಪೆನ್‌ಶನ್ ಆದರ ತಿರುಗಾಡಲಿಕ್ಕೆ ಸುದ್ದಾ ಹೋಗ ಬಾರದೇನೋ! ಹೊತ್ತು ಮುಳುಗಿದರೂ ಮನಿಯೊಳಗs—

**ಹುಚ್ಚರಾಯ**:—ಇನ್ನು ಮನೀ ಬಿಟ್ಟು ಹೊರಗೆ ಜೀಳೋದು ಅಂದರ ಒಮ್ಮೆ. ನಾನೂ ಅದೇ ಹಾದಿ ನೋಡತೇನಿ!

**ಲಕ್ಷ್ಮಿಂಬಾಯಿ**:—ಥಣ್ಣಗs ನಾನೇ ಎಲ್ಲಿಯಾದರೂ ತೀರ್ಥಯಾತ್ರೆಗೆ ಹೊರಟುಬಿಡತೇನಿ.

**ಹುಚ್ಚರಾಯ**:—ನೀನು ಯಾಕ....ನಾನೇ ಎಲ್ಲಿಯಾದರೂ ದೇಶಾಂತ ರಕ್ಕೆ ಹೋಗಿಬಿಡತೇನಿ. ನೀನು ಮನೆಯಲ್ಲಿಯೆ ಇರು, ಹೆಣ್ಣುಮಕ್ಕಳಿಗೆಲ್ಲಾ ಅಳಿಯತನ ಮಾಡಿಸಿಗೋತs!

**ಲಕ್ಷ್ಮಿಂಬಾಯಿ**:—ಯಾಕಮ, ಸುಮ್ಮನೆ ನಾನೇ ಹೋಗಿ ಬಿಡತೇನಿ; ನೀವೇ ಇರ್ರಿ ಸುಖದಿಂದ, ತಿಂಗಳಾ ಒಬ್ಬರ ಖರ್ಚು ಕಡಿಮಿ ಆಯಿತು ಅಂತ. (**ಸಿಟ್ಟಿನಿಂದ ಹಲ್ಲು ಹೆಚ್ಚುತ್ತ**) ಮುಖ್ಯ ನನ್ನ ನಸೀಬ ಖೊಟ್ಟಿ ಅದ, ಅದಕ್ಕೆ ಯಾರೇನು ಮಾಡೋದು! ಅದಕ್ಕನೇ ಎರಡನೇ ಸಂಬಂಧ ಅಂದರ, ಕಸಕ್ಕಿಂತ ಕಡೀ ಅಂಬೋದು. ಮೊದಲನೆಯವಳ ಹೆಣ್ಣುಮಕ್ಕಳಿಗೆ ಮಾತ್ರ ಒಬ್ಬೊಬ್ಬ ರಿಗೆ ಐದೈದು ವರ್ಷ ಅಳಿಯತನ ಮಾಡಿಸಿದಿರಿ. (**ಕಣ್ಣೀರೊರಸಿಕೊಳ್ಳುತ್ತ**) ಈಗ ಇರುವಾಕಿ ಒಬ್ಬ ಕಡೆಯ ಮಗಳಿಗೆ, ಒಂದು ವರುಷ ಅಳಿಯತನ ಮಾಡಿಸಲಿಕ್ಕೆ ಮೈಮೇಲೆ ಮುಗಿಲು ಕಡಿದುಕೊಂಡು ಬಿದ್ದಹಾಂಗ ಮಾಡತೀರಿ. ಆಗಲಿ, ಅದಕ್ಕೇನು ಮಾಡೋದು!

**ಹುಚ್ಚರಾಯ**:—ಹೂನs ಹೂನs ಹೂಂ, ಹೂಂ. ಹೂಂ! ಒಮ್ಮೆ ಹೂಂ ಅಂತಂದರ ಅಲ್ಲೇನದು? ಮತ್ತೂ ಮತ್ತೂ ಅದೇ ಮಾತು, ಅದೇ ಕಥಿ.

**ಲಕ್ಷ್ಮಿಂಬಾಯಿ**:—ಅದೇ; ಇಷ್ಟೊಂದು ಕಣ್ಣೀರು ಕಪಾಳಕ ಬಂದ ವಸ್ಯಾಲೆ, ನಿರ್ವಾಹವಿಲ್ಲದೆ ಅನ್ನೋದು ಹೂಂ ಅಂತ—ಹೆಂಡತಿಯ ಹೆಸರು ತಗೊಂಡ ಹಾಂಗ! ಇಂಥಾ ಪರಿಯಿಂದ ಹೂಂ ಅನಿಸಿಗೊಂಡರ ಆಗೋದಾರs ಏನು?

**ಹುಚ್ಚರಾಯ:**—ಇಲ್ಲs ಮಾರಾಯಳ, ಅಗದೀ ಹೃತ್ಪೂರ್ವಕವಾಗಿ ಹೇಳತೀನಿ.. ಹೂಂ! ಆಯಿತಿಲ್ಲೋ? ಹೂಂ! ಇನ್ನಾರೆ ಸುಮ್ಮನಾಗತೀಯಿಲ್ಲೊ?

**ಲಕ್ಷ್ಮುಂಬಾಯಿ:**—ಹೂಂ–ಹಾಂಗೇ ಸೈ....ಸುಸೂತ್ರ ಒಳಗೇ ಪಲ್ಯಾ ಹೆಚ್ಚಿಗೋತs ಕೂಡತೀನಿ; ಮಾತಾಡಿದರ ಮೈವ್ಯಾಲ ಬರತಿದ್ದರ—

**ಹುಚ್ಚರಾಯ:**—(ನಿರಾಶೆಯಿಂದ ಕೈಚೆಲ್ಲಿ) ಇನ್ನ ಯಾವ ರೀತಿ ನಿನ್ನ ಸಮಾಧಾನ ಮಾಡಬೇಕೋ ತಿಳಿಯದಂತೆ ಆಗೇದ. ಮುಪ್ಪಿನ ಕಾಲಕ್ಕ ಮೂರು ಮಂದಿ ಹೆಂಡರ ಕೈಯೊಳಗಿಂದs ಆ ದಶರಥಾ ಹ್ಯಾಂಗಾದರೂ ಪಾರಾದನೋ ಮಾರಾಯಾ!

**ಲಕ್ಷ್ಮುಂಬಾಯಿ:**—ನಿಮ್ಮ ಹಾಂಗ ಅಂವಾ ಅಳೀತನಾ ಮಾಡಿಸಲಿಕ್ಕೆ ಒಲ್ಲೆ ಅಂತಿದ್ದಿಲ್ಲಾ!

**ಹುಚ್ಚರಾಯ:**—ಅಂತೇ ಇದ್ದ ಮಕ್ಕಳ್ನ ಅಡವಿಗೆ ಕಳಿಸೋ ಹೊತ್ತು ಬಂತು ಅವನಿಗೆ.

**ಲಕ್ಷ್ಮುಂಬಾಯಿ:**—ಹೆಂಡತಿನ್ನ ಕಂಡರ ವರಾ ವರಾ ಅಂತ ಕುಣದಾಡತಿದ್ದನಂತ ಆ ಮಾರಾಯಾ!

**ಹುಚ್ಚರಾಯ:**—ಏನs ಮಾರಾಯಳ, ನಿನ್ನಂಥಾಕಿ, ಒಬ್ಬಳಿದ್ದರ ಹೇಳತಿದ್ದೆ ಅಂವಗ.

**ಲಕ್ಷ್ಮುಂಬಾಯಿ:**—ನನ್ನಂಥಾಕಿ ಇದ್ದರ ಅವನ ಪುಣ್ಯಾ! ನಿಮಗೇ ಸಿಗಬೇಕಾಗಿತ್ತು ಆ ಕೈಕಯಿಯಾ ಅಂಥಾಕಿ, ಉರಿಸಿ ಒಲೀ ತುಂಬಿಸಲಿಕ್ಕೆ!

**ಹುಚ್ಚರಾಯ:**—(ಒಮ್ಮೆಲೆ ಖೊಳ್ಳನೆ ನಗುತ್ತ) ಇಕಾ, ಹೀಂಗ ಬೇಕಾದಷ್ಟು ಮಾತಾಡು. ಆದರ ಸಿಟ್ಟಿಗೆ ಬರಬ್ಯಾಡಾ. ಅಲ್ಲಾ, ಸುಳ್ಳೇ ನೀನೂ ಮನಸ್ಸಿಗೆ ತಾಪ ಮಾಡಿಕೋತೀ; ನನಗೂ ತಾಪ ಕೊಡತೀ!

**ಲಕ್ಷ್ಮುಂಬಾಯಿ:**—ಆಗಲಿ, ಹಾಂಗಾದರ ಅಷ್ಟು ನಾ ತಾಸ್ರ ಕೊಡತಿದ್ದರ....ಒಳಗೇ ಹೋಗಿ ಪಲ್ಯಾ ಹೆಚ್ಚಿಗೋತೀನಿ!

**ಹುಚ್ಚರಾಯ:**—ಚೇಳಿನ ಕೊಂಡಿ!,...ಅಲ್ಲs ಪಲ್ಯಾ ಯಾವುದು ಮಾಡತೀದೀ?

**ಲಕ್ಷ್ಮಿಂಬಾಯಿ:**— ಏನು ಬಾಳ ಮನಿತುಂಬಾ ಪಲ್ಯಾ ತಂದು ಹಾಕೀರಿ....ಹೇಳೋ ಹಾಂಗಿಲ್ಲಾ. ತಿರಗಾಮುರಗಾ ಒಂದು ಉಳ್ಳಾಗಡ್ಡಿ, ಒಂದು ಚವಳಿಕಾಯಿ!

**ಹುಚ್ಚರಾಯ:**—ಹಾಂಗಾದರ ಚವಳೀಕಾಯಿಾ ಪಲ್ಯಾ ಮಾಡ ಬೇಕು ?

**ಲಕ್ಷ್ಮಿಂಬಾಯಿ:**—ಮನಿಯೊಳಗ ಕೂತವರು ಆರಿಸಿ ಕೊಟ್ಟರ ಮಾಡ ತೀನಿ. ಆದರ ನೀವ್ಯಾಕ ನೆರವು ಆದೀರಿ ಹೆಂಗಸರಿಗೆ—

**ಹುಚ್ಚರಾಯ:**—ನನ್ನ ಕರ್ಮ! ಮತ್ತ ಮನಿಗೆ ಬಂದ ಹೆಣ್ಣು ಮಕ್ಕಳೂ ಅಂದರ....ಬೇಗಂ ಸಾಹೇಬರೇನು? ಅವರು ಒಂದೂ ಕೆಲಸಾ ಮಾಡ ಬಾರದೇನು ತೌರಮನಿಯೊಳಗ ?

**ಲಕ್ಷ್ಮಿಂಬಾಯಿ:**—ಯಾಕಷ್ಟು ಆಡಿಕೊಳ್ಳೋದು ನನ್ನ ಹೆಣ್ಣುಮಕ್ಕ ಳಿಗೆ ? (ದುಃಖ ತುಂಬಿ) ಪಾಪಾ, ಅತ್ತೀಮನಿಯೊಳಗ ಮೈಮುರಿ ದುಡಿದೂ, ಮತ್ತೂ ಇಲ್ಲಿಯೂ ದುಡೀ ಅಂತೀರಲ್ಲ; ಎಂತಹ ಕುಟಿಕ ಮನಸ್ಸು ನಿಮ್ಮದು?

**ಹುಚ್ಚರಾಯ:**—ನೀನು ಕಲಿಸಿ ಇಟ್ಟ ಅಭ್ಯಾಸ ಇದೆಲ್ಲಾ! (ಒಳಗಿನಿಂದ ವತ್ಸಲೆ ಪ್ರವೇಶಿಸುವಳು)

**ವತ್ಸಲಾ:**—ಅವ್ವಾ, ಇವೊತ್ತು ನಿನ್ನ ಜರದ ಸೀರೀ ಉಟ್ಟುಕೊಳ್ಳ ಲೇನು ?

**ಲಕ್ಷ್ಮಿಂಬಾಯಿ:**—ಹೂಂ. ಉಟ್ಟುಕೊ; ಆದರ ಜೋಕೆ ಆಂ! ಎಲ್ಲಿ ಯಾದರೂ ಕೊಕ್ಕಿಗೆ ಸಿಕ್ಕೀತು. ನೀ ಜೋಕಿಂದ ಉಟ್ಟುಕೊಂಡರ ನಿನಗೇ ಕೊಡತೀನಿ ಆ ಸೀರೀ !

**ಹುಚ್ಚರಾಯ:**—ಹೂಂ, ನಿನಗೇ ಕೊಡತಾಳೆ..ಈ ಮನೀನೂ ನಿನ್ನ ಹೆಸರಿಗೆ ಬರೆದು ಕೊಡತಾಳೆ!

**ವತ್ಸಲಾ:**—(ಸಿಡುಕಿನಿಂದ) ಅವ್ವಾ, ನೋಡಿದೇನವ್ವಾ ? ಒಂದು ಸೀರಿ ಕೊಡತೀನಿ ಅಂದರ ಇಷ್ಟು ಗಡತರ ಮೈಮೇಲೆ ಬರತಾನ; ನೇಕಿಗೆ ಮಾತ್ರ ಕಂಟಮಟಾ ವಸ್ತಾ ಮಾಡಿಸಿ ಕೊಟ್ಟಾ. ಹಾಂಗ ನೋಡಿದರ ನನಗ ಒಂದು ಬೆಂಡೋಲೀ ಸುದ್ಧಾ ಇನ್ನೂ ಕೊಟ್ಟಿಲ್ಲಾ !

**ಲಕ್ಷ್ಮುಂಬಾಯಿ**:—ನಿನ್ನ ತೌಡು ಹಾಕಿ ಕೊಂಡಾರವಾ; ಅವರಿಗೆ ಅಚ್ಛೀದ ಮಕ್ಕಳು ಅಂದರೆ ಅವರೇ !

**ವತ್ಸಲಾ**:—ನಾನು ಮಾತ್ರ ತುಚ್ಛದ ಮಗಳು....ಅಂತೇ ಕಳವೂಟದಲ್ಲಿ ನೆಟಗೊಂಡು ಕೂತರೆ, ಇವರಿಗೆ ಒಂದು ಫೋನೋಗ್ರಾಫ್ ಸುದ್ಧಾ ಕೊಡಿಸಲಿಲ್ಲಾ !

**ಲಕ್ಷ್ಮುಂಬಾಯಿ**:—ನನ್ನ ಖೊಟ್ಟಿ ನಶೀಬಾ. ಯಾವ ಕಾಲ್ಗುಣದ ಮೇಲೆ ಹುಟ್ಟಿದೆಯೊ ಏನೊ !....ಕಡಿಯ ಅಳಿಯ ಅಂದರ ಹನ್ನೆರಡು ತಿಂಗಳೂ ಮನಿಯಲ್ಲಿಯೆ ಇಟ್ಟುಕೊಂಡು ಅಳಿಯತನ ಮಾಡತಾರೆ. ಮನಿಯಲ್ಲಿ ಅಳಿಯಂದಿರು ಮಕ್ಕಳೂ ಅಂತಿದ್ದರೆ, ಎಲ್ಲಾ ಛಂದ !

**ಹುಚ್ಚರಾಯ**:—ಈ ಅಳಿಯಂದಿರಿಗೆ ಮಾಡಿಮಾಡಿಯೇ ನನ್ನ ತಲಿ ಬೆಳ್ಳಗಾಯಿತು ! ಪೆನ್‌ಶನ್ ಆದಮೇಲೆ ಆದರೂ, ತಲಿಯ ಮೇಲೆ ಒಂದೆರಡು ಎಳಿ ಚಂಡಿಕೆ ಉಳಿಯಲೀ ಅಂತ ನಮ್ಮ ಇಚ್ಛಾ !

**ಲಕ್ಷ್ಮುಂಬಾಯಿ**:— ಹೌದು, ಈಗೇ ಸುರುವಾಗೇದೇನೋ ಈ ವೈರಾಗ್ಯ !

**ಹುಚ್ಚರಾಯ**:—ಅಲ್ಲs, ಆವಾಗ ಸಿಗತಿತ್ತು ಹ್ಯಾಂಗ....ಮೇಲೆ ಮುಷ್ಟೀ ಫಂಡು ? ಈಗೇನದ ಮುಂಗೈಗೆ ಚಂಡು ? ಪೆನ್‌ಶನ್ ಆದ ಕಾಮದಾರರು ಅಂದರ, ಓದಿಬಿಟ್ಟ ವರ್ತಮಾನಪತ್ರ ಇದ್ದಹಾಂಗ. ಕಂಡರ ಸಾವಿರ ಸರ್ತೆ ಸಲಾಮು ಹೊಡೆಯೊ ಸಿಪಾಯರು, ಈಗ ಕಣ್ಣೆತ್ತಿ ಕೂಡಾ ನೋಡೋದಿಲ್ಲ. ನಾವೇ ಕೈಮುಗಿದರೂ, ತಿರುಗಿ ಆದರೂ ಕೈ ಮುಗೀತಾರೊ ಇಲ್ಲೋ ಸಂಶಯ.

**ಲಕ್ಷ್ಮುಂಬಾಯಿ**:—ಸಾಕು ಹೋಗ್ರಿ, ಬರೇ ನಿಮ್ಮ ರಗಳೀ ರಾಮಾಯಣನೇ ಆಯಿತು....ಅಲ್ಲಾ ನಾಳೀ ನೀರತುಂಬೋ ಹಬ್ಬಾ; ಬೀಗರಿಗೆ ಪತ್ರಾನಾದರೂ ಹಾಕೀರೊ ಇಲ್ಲೊ ?

**ಹುಚ್ಚರಾಯ**:—ಹಾಕೀನಿ ಮಾರಾಯಳs, ಹಾಕೀನಿ. ನಿನ್ನ ಮುಂದ ಯಾರ ಆಟ ನಡೀತsದ ?

**ಲಕ್ಷ್ಮುಂಬಾಯಿ**:—ಪತ್ರಾ ಹಾಕಿದ್ದರ ಮತ್ತ ಇವೊತ್ತೇ ಬರೋದು; **ಟೇಸನ್ನಕಾದರೂ ಹೋಗತೀರೊ?**

**ಹುಚ್ಚುರಾಯ**:—ತಪಾಸಣೆಗೆ ಬರೋ ಮೇಲಧಿಕಾರಿಗಳಿಗಿಂತಾ ಮಿಗಿಲಾದರು ಬಿಡು, ಈ ಅಳಿಯಂದಿರಂಬುವವರು! ನಾನು ಸಬ್‌ರಜಿಸ್ಟರ್ ಇದ್ದಾಗ ಸುದ್ಧಾ ಒಬ್ಬ ಆಫೀಸರ್ ಜನರಿಗೂ ಜೀ ಅಂತಿದ್ದಿಲ್ಲಾ....ಅದೂ ಹೋಗಲಿ, ಇಷ್ಟು ಮಾಡಿಸಿಕೊಂಡರೂ ಒಬ್ಬ ಅಳಿಯಂದಿರೂ ನಮ್ಮ ಸಿಫಾರಸು ಮಾಡೋದಿಲ್ಲಾ. ಈ ಅಳಿಯಂದಿರ ಮರ್ಜೀ ಹಿಡಿಯೋದಂದರ ಅಗದೀ 'ಥ್ಯಾಂಕಲೆಸ್ ಟಾಸ್ಕ್' ನೋಡು. ಬಾಗಿಲಿಗೆ ಆನಿಸುವ ಅಗಳಿಗೆ ಅಳಿಯ ಅಂದಕೂಡಲೆ, ಅದೂ ಕೂಡಾ ಸೆಟೆದು ನಿಲ್ಲತ್ತsದಂತೆ!

**ವತ್ಸಲಾ**:—ಹೌದಪಾ, ನೀಯೇನು ಅಳಿಯನಾಗಿದ್ದಿರಲಿಲ್ಲವೇನು?

**ಹುಚ್ಚುರಾಯ**:—ಕೇಳು ಆಕಿನ್ನ!

**ಲಕ್ಷ್ಮಂಬಾಯಿ**:—ಏನು ಕೇಳೋದು ನನ್ನ. ಎಲ್ಲಾ ನನ್ನ ಉಪಗಾರಕ್ಕೇ ಮಾಡೋಹಾಂಗ ಮಾಡತಾರ, ನನಗೊಬ್ಬಳಿಗೇ ಮಕ್ಕಳು—ಅಳಿಯಂದಿರು, ತಮಗಲ್ಲೇನೊ!....ವಚ್ಚಾ; ನೀ ಸುಸೂತ್ರ ನಿಮ್ಮ ಮನೀಗೆ ಹೋಗಿ ಬಿಡವ್ವಾ—ಇವರ ಕಡಿಂದs ನೀವು ಅಳಿಯತನ ಮಾಡಿಸಿಗೊಳ್ಳೊದೂ ಬ್ಯಾಡಾ; ಅನಿಸಿಗೊಳ್ಳೊದೂ ಬ್ಯಾಡಾ! (ವತ್ಸಲೆ ಒಳಗೆ ಹೋಗುವಳು ಲಕ್ಷ್ಮಂಬಾಯಿಯು ಸಿಟ್ಟಿನಿಂದ ದುಡುದುಡನೆ ಒಳಗೆ ಹೋಗುವಾಗ, ಹುಚ್ಚುರಾಯನು ಅವಳನ್ನು ಅಡ್ಡ ತರುವ)

**ಹುಚ್ಚುರಾಯ**:—ಹೌದs—ಬಂತೇ ಸಿಟ್ಟು, ತಡೆ ಇಲ್ಲದ! ದೇವರು ಈ ಹೆಂಗಸರಿಗೆ ಮೈಯೊಳಗೆ ಸಿಟ್ಟು, ಕಣ್ಣೊಳಗೆ ನೀರು ಇವೇ ಎರಡು ದಯಪಾಲಿಸಿದನೋ ಏನೋ!....ಅಲ್ಲs ಕೂಡ ಬಾ ಇಲ್ಲೆ. (ಅವಳನ್ನು ಕೈ ಹಿಡಿದು ಕೂಡಿಸಿ)ಒಟ್ಟು ನಿನ್ನ ವಾಸನಾನಾರೇ ಏನದs ಹೇಳಿ ಬಿಡು ಒಂಧಪಾ. ಕೊರಳೊಳಗ ತಾಳಾ ಹಾಕಿ, ದಾಸಕೂಟದ ಮೆಂಬರ್ ಆಗೋತನಕಾ ಸರ್ತಿ.... ನೀನು ಹೇಳಿದಂತೇ ಹೆಜ್ಜೀ ಹಾಕತೀನಿ.

**ವತ್ಸಲಾ**:—(ಗಾಬರಿಗೊಂಡು ಧಾವಿಸುತ್ತ, ಒಂದು ತಾರಿನ ಪಾಕೀಟನ್ನೂ ಜೊತೆಗೆ ಸಹಿಯ ಫಾರ್ಮನ್ನೂ ಹಿಡಿದುಕೊಂಡು ಪ್ರವೇಶಿಸಿದಳು.) ಅಪ್ಪಾ, ಇದು ನೋಡು ತಾರು. ಹೊರಗೆ ಪೋಸ್ಟಮನ್ ತಂದುಕೊಟ್ಟ!

**ಹುಚ್ಚುರಾಯ**:—(ಫಾರ್ಮಿನ ಮೇಲೆ ಸಹಿ ಮಾಡುವನು.)

**ಲಕ್ಷ್ಮಂಬಾಯಿ**:— (ಚಡಪಡಿಕೆಯಿಂದ ಮುಳುಗುವ ಹಡಗದಂತೆ ಹೊಯ್ದಾಡುತ್ತ) ತಾರು ಯಾಕ ಬಂದಿದ್ದೀತs ನಮ್ಮವ್ವಾ ಸುದ್ದಿ! ಥೂ, ನಮ್ಮವ್ವಾ, ಹಬ್ಬದಾಗ ಇದೇನೂ ಅಂತೀನಿ ಅವಲಕ್ಷಣ! (ಗಂಡನಿಗೆ ಆತುರತೆ ಯಿಂದ) ಮೇಲೆ ಕ್ಷೇಮಸಮಾಚಾರ ಅದsನೊ ಇಲ್ಲೊ? ಎಲ್ಲಿಂದ ಬಂದದs ತಾರು? ಸೇಕೂ ಅವರು ನೆಟ್ಟಗಿದ್ದಾರಂತ ಹೌದಲ್ಲೊ? ಹೀಂಗ್ಯಾಕ ಸುಮ್ಮನೆ ನಿಂತಿರಿ? ಹೇಳಬಾರದರೇ ಭಡಾನೆ!

**ಹುಚ್ಚರಾಯ**:—ವತ್ಸಲಾ, ಭಡಾನೇ ಇದನ್ನ ಹೊರಗ ಪೋಸ್ಟಮನ್ನ ನಿಗೆ ಕೊಟ್ಟು ಬಾ. (ನಗುತ್ತ ಲಕ್ಷ್ಮಂಬಾಯಿಗೆ) ತಾರೂ ಅಂದರ ಅನಾಹು ತನೇ ಇರಬೇಕೂ ಅಂತ ಈ ಹೆಂಗಸರ ಹಟ!

**ಲಕ್ಷ್ಮಂಬಾಯಿ**:—ಎಲ್ಲಿಯ ಹಟಾ ಬರತsದ ಮಣ್ಣಾಗ? ಕ್ಷೇಮ ಸಮಾಚಾರ ಅದsನೊ ಇಲ್ಲೋ ಹೇಳಬಾರದರೇ ಭಡಾನೆ?

**ಹುಚ್ಚರಾಯ**:—ನಮ್ಮ ಕ್ಷೇಮಸಮಾಚಾರ ತಗೊಳ್ಳಲಿಕ್ಕನೇ ಬರುವ ರಿದ್ದಾರೆ. ಐದನೆಯ ಬಾಣಂತಿತನಕ್ಕೆ ನಿನ್ನ ಹಿರಿಯ ಮಗಳು ಇಂದೇ ಬರುವವಳಂತ!

**ಲಕ್ಷ್ಮಂಬಾಯಿ**:—(ನಗುತ್ತ) ಅಯ್ಯಯ್ಯ! ಎಂದ? (ಉಲ್ಲಾಸದಿಂದ ಮುಖ ಅರಳುವುದು) ಆಕಿ ಒಬ್ಬಾಕಿ ಇಲ್ಲಾ ಅಂತ ಚಡಪಡಿಕಿ ಆಗಿತ್ತು!

**ಹುಚ್ಚರಾಯ**:—ಹೌದು, ದುಷ್ಕಾಲ ಒಂದೇ ಆಗಿತ್ತೂ ಅಂತ ನನಗೂ ಚಡಪಡಿಕಿ ಆಗಿತ್ತು. ಆಯಿತು, ಅದಕ್ಕ ಕುಂದಣಾ ಕೂಡಿಸಿದ ಹಾಂಗ, ಅಧಿಕ ಮಾಸ ಒಂದೂ ಆದಂತಾಯಿತೂ ಅಂತ ಸಮಾಧಾನ ಅನಿಸಿತು ನೋಡು!....ಸರಕಾರ ಈ ವಿಷಯಕ್ಕ ಯಾಕ ಕಿವಿಮುಚ್ಚಿಕೊಂಡು ಕೂತsದ ಅಂತೇನಿ. ಕಾರಕೂನರು ಲಂಚಾ ತಿನಬಾರದೂ ಅಂತ ಕಾಯಿದೆ ಮಾಡೋ ಸರಕಾರ, ಅಳಿಯಂದಿರು ಮಾವಂದಿರ ಸುಲಿಗೀ ಮಾಡಬಾರದೂ ಅಂತ ಮಾತ್ರ ಕಾಯಿದೆ ಮಾಡಬಾರದೇನೊ! ಅದ್ಯಾಕ ಮಾಡಬಾರದೂ ಅಂತೀನಿ!.... ಹುಶ್, ಏನು ಮಾಡಲಿ, ನನ್ನ ನಶೀಬ! ಸರಕಾರದ ಮಾತು ಒತ್ತಟ್ಟಿಗಿರಲಿ; ಹದಿನೆಂಟು ಮಂದಿ ಹೆಣ್ಣುಮಕ್ಕಳನ ನನ್ನ ಒಂದೇ ಒಂದು ಹೊಟ್ಟೆಯಿಂದ ಹುಟ್ಟಿಸಿದ ಆ ಬ್ರಹ್ಮನಿಗಾದರೂ ತಲೀ ಅದsನೊ ಇಲ್ಲೋ ಅಂತೀನಿ....ತಲಿ ಗೊಂದೊಂದು ವಿಚಾರ ಮಾಡಿಯೆ ಈ ಹಿಂಡು ಜನರನ್ನ ನನ್ನ ಕೊರಳಿಗೆ

ಕಟ್ಟಿದನೊ ಯಾರಿಗೆ ಗೊತ್ತು?. .ಅಥವಾ ಹದಿನೆಂಟು ಮಂದಿ ಹೆಣ್ಣುಮಕ್ಕಳನ ಹಡೆಯಬೇಕಾದರೆ ನನ್ನ ತಲೀನs ಕೆಟ್ಟಿತ್ತೋ ಏನೋ!

**ಲಕ್ಷ್ಮಿಂಬಾಯಿ**:—ಹದಿನೆಂಟು ಹೆಣ್ಣುಮಕ್ಕಳೋ ಏನು ಐವತ್ತೋ? ಹುಟ್ಟಿದ ಹೆಣ್ಣುಮಕ್ಕಳ ಸಂಖ್ಯೆ ಕೂಡ ತಿಳಿಯದಷ್ಟು ತಲೀಕೆಟ್ಟು ಹೋಯಿತೋ ಏನು?....ವತ್ಸಲಾ, ಒಳಗೆ ಬಾ. ಹೆಂಗಸರಿಗೆ ಅಡಿಗಿಯ ಮನಿಯೆ ಸೌಖ್ಯ. (ಎನ್ನುತ್ತ ತಾನೊಬ್ಬಳೆ ಹೋಗುವಳು.)

**ಹುಚ್ಚುರಾಯ**:—ಹದಿನೆಂಟು ಇಲ್ಲಾ....ಒಂಬತ್ತು!

**ವತ್ಸಲಾ**:—ಅಪ್ಪಾ, ನಮ್ಮಂಥವರು ಹುಟ್ಟಿ ನಿನಗೆ ಇಷ್ಟೊಂದು ಕಷ್ಟ. ಮದುವೆಯಾಗುವ ಮೊದಲು ಹಡೆದವರಿಗಷ್ಟೇ ಭಾರ; ಮದುವೆಯಾದ ಮೇಲೆ, ಮದುವೆಯಾದವರಿಗೆ ಹಡೆದವರಿಗೆ ಕೂಡಿಯೆ ಭಾರ!

**ಹುಚ್ಚುರಾಯ**:—ಹಡೆದ ಮೇಲಂತೂ ಹೊರಸಿಗೂ ಭಾರ!

**ವತ್ಸಲಾ**:—ಅಪ್ಪಾ ನನ್ನ ಮದಿವೀ ಮಾಡೋದರ ಬದಲಾಗಿ, ನನಗೆ ಉಚ್ಚಶಿಕ್ಷಣ ಕೊಟ್ಟಿದ್ದರ—

**ಹುಚ್ಚುರಾಯ**:—ಇಷ್ಟೊತ್ತಿಗೆ ತ್ರಿಶಂಕುವಿನ ಸ್ವರ್ಗ ಸಿಗುತಿತ್ತು. ಯಾಕಂದರೆ ಬೆಳೆದ ಹುಡಿಗಿನ್ನ ಮನೆಯಲ್ಲಿಟ್ಟುಕೊಂಡಾನs ಅಂತ ಬ್ರಾಹ್ಮಣ ಸಮಾಜದವರು ನನ್ನನ್ನ ಭೂಮಿಾ ಬಿಟ್ಟು ಮೇಲಕ್ಕೆ ಏರಿಸಿ ಬಿಡುತ್ತಿದ್ದರು. ಮೇಲೆ ಹೋದ ಮೇಲೆ, ಎಲ್ಲ ಹೆಣ್ಣುಮಕ್ಕಳ ಮದುವೆ ಮಾಡದೆ ವಾಸನಾ ಹಿಡಿದು ಬಂದೀನೀ ಅಂತ ಕೆಳಗೆ ಅಟ್ಟಿಬಿಡುತ್ತಿದ್ದರು.

**ವತ್ಸಲಾ**:—ನಾನು ಕಲಿತಿದ್ದರೆ, ನನ್ನ ಒಬ್ಬಳ ಹೊಟ್ಟೆಯನ್ನಾದರೂ ತುಂಬಿಕೊಂಡು, ಯಾವುದಾದರೊಂದು ಶಾಲೆಯ ಮಾಸ್ತರಿಣಿ ಆಗಿರುತ್ತಿದ್ದೆ! ಕಲಿತ ಗಂಡಸರು ಕೆಲಸವಿಲ್ಲದೆ ಕೂಡುವ ಹಾಂಗ, ಕಲಿತ ಹೆಂಗಸರು ಮಾತ್ರ ಕೈಯಲ್ಲಿ ಕೆಲಸವಿಲ್ಲದೆ ಮನೆಯಲ್ಲಿ ಕೂಡುವ ಪ್ರಸಂಗ ಇಲ್ಲ!

**ಹುಚ್ಚುರಾಯ**:—ನಿನಗೆ ಹಾಗೆ ಕಲಿಸಿದ್ದೇ ಅಂದರೆ ಸಬ್‌ರಜಿಸ್ಟ್ರರರ ಮಗಳು ಬಹಳ ಕಲಿತಳೂ ಅಂತ—

**ವತ್ಸಲಾ**:—ನಿಜವಾಗಿನೂ ನಿಮಗೆ ಮರ್ಯಾದೆ ಸಿಗುತ್ತಿತ್ತು!

**ಹುಚ್ಚುರಾಯ**:—ಇಲ್ಲಾ, ನನ್ನ ನೆತ್ತೀ ಕುಕ್ಕಿಬಿಡುತ್ತಿತ್ತು....ಈ ಹಾಳಿಯ ಹದ್ದಿನಂತಹ ಹಳೆಯ ಸಮಾಜ!

**ವತ್ಸಲಾ:**—ಹೆಂಗಸಿನ ಗೋಳು ಅಂದರೆ—

**ಹುಚ್ಚರಾಯ:**—ಹೆಣ್ಣು ಹಡೆದವರ ಗೋಳು ನೆನೆದರೆ, ತಲೆ ಕೆಟ್ಟು ಕಾದುಕಾದು ಸಿಡಿದು, ಸಾವಿರ ಹೋಳು ಆಗುವಷ್ಟು ಸಂತಾಪ ಆಗತsದ! ಮಗ ಹುಟ್ಟಿದರೆ ಮನೆ ಉದ್ಧಾರ; ಮಗಳು ಹುಟ್ಟಿದಳೂ ಅಂದರ ಮನೆಯ ಸರ್ವಸ್ವವೂ ಭಸ್ಮ! ಮದುವೆ ಆಗುವವರೆಗೂ ಅಲ್ಪವಯಿಸಾ ಅಂತ' ಇವರ್ನ ಸಂರಕ್ಷಣೆಮಾಡಬೇಕು. ಮದುವೆಯಾದ ಮೇಲೆ, ಮಗಳೂ ಅಳಿಯ ಇಬ್ಬರೂ ಅಲ್ಪವಯಿಸಾ ಅಂತ.ಮನೆಯಲ್ಲಿಟ್ಟುಕೊಂಡು ಸಂರಕ್ಷಣೆಮಾಡಬೇಕು! ತಂದೆ ಸಂರಕ್ಷಣೆಮಾಡಿದಾ ಅಂತ ಉಪಕಾರ ಹಿಡಿತಾರೇನು ಈ ಹೆಣ್ಣುಮಕ್ಕಳು? 'ನಿಮ್ಮ ಹೆಸರು ಬೇಡಾ' ಅಂತ ಮತ್ತೊಂದು ಹೆಸರು, ಅಡ್ಡಹೆಸರು ಇಟ್ಟು ಕೊಂಡು ಹೋಗತಾರೆ ಇಷ್ಟಾದರೂ ನಮಗೆ ಕಾಳಜೀ ತಪ್ಪಿತೂ ಅಂತ ಇಲ್ಲಾ. ಪರಿಷ್ಠ ಅಧಿಕಾರಿಗಳ ಮರ್ಜೀ ಕಾಯುವಂತೆ,ಈ ಅರಿಷ್ಟ ಅಳಿಯಂದಿರ ಕೈ ಕಾಲು ತೊಳೆದು, ಎರಡೆರಡೂ ಕೈಯಿಂದ ಸುರಿಯಬೇಕು ಅವರ ಪಾದತೀರ್ಥ. ಮೇಲೆ ಮತ್ತೆ ಅಳಿಯ ದೇವರಂತೆ! ಯುಗಕ್ಕೊಮ್ಮೆ ಅವತರಿಸುವ ಆ ಪರ ಮಾತ್ಮಾ ಈ ಕಲಿಯುಗದೊಳಗ ಅಳಿಯಂದಿರ ಅವತಾರ ಧರಿಸಿ ಭೂಮಿಗಿಳಿ ದದ್ದೆ ಖರೇ ಆದರೆ, ಬೇಗನೆ ಅವನನ್ನ ಸ್ವರ್ಗಕ್ಕಟ್ಟೋದೆ ಗುಣಾ ಕಾಣಿಸತsದ.

**ವತ್ಸಲಾ:**—(ಕಣ್ಣೀರು ಒರಸಿಕೊಳ್ಳುತ್ತ) ಅಪ್ಪಾ, ನನಗ ಬೇಕಾದಷ್ಟು ಕೆಡಕು ಮಾತಾಡು, ಅವ್ವ ಒಳಗೆ ಹೋದಳೂ ಅಂತ, ಮಾಡಿಕೊಂಡವರನ್ನ ಆಡಿಕೊಳ್ಳಬ್ಯಾಡಾ! ನನ್ನ ಕೆಟ್ಟ ನಸೀಬದ ಕಾಲಾಗ, ಅವರು ಯಾಕೆ ಅನಿಸಿ ಕೊಳ್ಳಬೇಕು..ಸುಳ್ಳನುಳ್ಳೇ?........ಭೂಮಿಯ ಮೇಲೆ ಹೆಣ್ಣಾಗಿ ಹುಟ್ಟಿದ ನನ್ನದೇ ದೊಡ್ಡ ಅಪರಾಧ ಆಗೇದ!

**ಹುಚ್ಚರಾಯ:**—ಅರ್ಥಾತ್ ನಿನ್ನ ಹಡೆದ ನನ್ನದೇ ಮಹಾ ಅಪರಾಧ. ನಾನು ಮದುವೆಯಾಗುವ ಮೊದಲೇ ಯಾವ ಸ್ವಾಮಿಗಳೂ ಕಾಯಿ ಕೊಡುವ ವರು ಇದ್ದಿದ್ದಿಲ್ಲ....ತಣ್ಣಗೆ ಇನ್ನು ಮೇಲೆ ಆದರೂ ಕಾಯಿ ಸಿಗತsದೇನೊ ನೋಡತೀನೀ!.. (ಸ್ವಗತ) ಇನ್ನೆಲ್ಲಿಯ ಕಾಯಿ; ನನಗೆ! ಸಿಗೋದು ನನ್ನ ಕರ್ಮಫಲ! (ಒಳಗಿನಿಂದ ಲಕ್ಷ್ಮಂಬಾಯಿ ಪ್ರವೇಶಿಸುವುದಕ್ಕೂ ವಿರುದ್ಧದಿಕ್ಕಿನಿಂದ ಗೋಂತಲೆ ಪ್ರವೇಶಿಸುವುದಕ್ಕೂ ವೇಳವಾಗುವುದು. ಲಕ್ಷ್ಮಂಬಾಯಿ ನೋಡಿದವಳೆ ಸಂಭ್ರಮದಿಂದ ಬಾಯಿತೆರೆಯುವಳು ಹುಚ್ಚರಾಯ ಬೆಪ್ಪಾಗಿ ನಿಲ್ಲುವನು.)

**ಲಕ್ಷ್ಮೀಬಾಯಿ**:—ಅಯ್ಯಯ್ಯ ! ಯಾವಾಗ ಬಂದೀ ? ಛಲೋ ಆಯಿತು ಬಿಡು ನಮ್ಮವ್ವಾ, ಎಲ್ಲಾರೂ ಹಬ್ಬಕ್ಕ ಕೂಡಿಧಾಂಗ ಆಯಿತು! ನಿಮ್ಮಕ್ಕನೂ ಒಬ್ಬಾಕಿ ಅನಾಯಸs ಹಡಿಯಲಿಕ್ಕೆ ಬರುವಾಕಿ ಇದ್ದಾಳ !

**ಶಕುಂತಲಾ**:—ಅವ್ವಾ, ಹೊರಗೆ ಟಾಂಗಾದಂವ ನಿಂತಾನ, ಅವನಿಗೊಂದು ಚಾರಣೇ ಕೊಡಬೇಕಾಗಿತ್ತು !

**ಲಕ್ಷ್ಮೀಬಾಯಿ**:—(ಹುಚ್ಚರಾಯನಿಗೆ) ಕೇಳಿಸಲಿಲ್ಲೇನು ?

**ಹುಚ್ಚರಾಯ**:—(ಪುಟದುಬಿದ್ದವನಂತೆ) ಆಂ ?

**ಲಕ್ಷ್ಮೀಬಾಯಿ**:—ಟೊಂಕದೊಳಗೆ ಚಾರಣೇ ಅವ ಏನು?

**ಹುಚ್ಚರಾಯ**:—ಚಿಲ್ಲರೆ ಇಲ್ಲಾ, ನೂರು ರೂಪಾಯಿಾ ನೋಟು ಅದs !

**ಲಕ್ಷ್ಮೀಬಾಯಿ**:—(ಸಿಡುಕಿನಿಂದ) ನೂರು ರೂಪಾಯಿಾದೊ, ಮೂರು ರೂಪಾಯಿಾದೊ ! ವತ್ಸಲಾ, ಒಳಗ ನನ್ನ ಟ್ರಂಕಿನೊಳಗ ನಾಲ್ಕಾಣೆ ಅವs ನೋಡು, ಕೊಡುಹೋಗು ! (ಕೊರಳೊಳಗಿನ ಕೀಲಿಕೈಸರ ಕೊಡುವಳು.)

**ಹುಚ್ಚರಾಯ**:—( ಕೀಸರಿಟ್ಟು ಶಕುಂತಲೆಗೆ ) ತಾವು ಯಾಕ ಬಂದಿದ್ದೀರಿ ?

**ಶಕುಂತಲೆ**:—ಏನೋಪಾ, ಈ ಸಾರೆ ಖರ್ಚು ಬಹಳ ಬಂದಿತಂತ; ಅವಕ್ಕೇ ಒಂದು ತಿಂಗಳು ಪುಸೀ ತೆಗೆದುಬಿಟ್ಟರು !

**ಹುಚ್ಚರಾಯ**:—ಅದರ ಜೊತೆಗೆ ಮೂರು ಅಕ್ಷರಗಳನ್ನೂ ತೆಗೆದು ಬಿಟ್ಟರೇನು ?—

**ಲಕ್ಷ್ಮೀಬಾಯಿ**:—ನೀವೂ ?

**ಹುಚ್ಚರಾಯ**:—ನೀ ಬಂದೆಯಿಲ್ಲೊ ಅಡ್ಡ ?

**ಗುಂಡೂ**:—(ಆರ್ಭಟದಿಂದ) ಅಪ್ಪಾ, ಇವೊತ್ತಿನಿಂದ ನಾನು ಪೇಟಿಯೊಳಗ ಸಾಮಾನು ತಗೊಂಡು ಬರಲಿಕ್ಕೆ ಹೋಗೋದೇ ಇಲ್ಲಾ!

**ಹುಚ್ಚರಾಯ**:—ಯಾಕೋ ? ನಿನಗೇನಾಯಿತು, ಅಂಗಡಿಕಾರರಿಗೇನಾಯಿತು ?

**ಗುಂಡೂ**:—ದೀಪಾವಳಿ ಬಂದದೆ. ಎಲ್ಲರೂ ಹಿಂದಿನ ಬಾಕೀ ಚುಕ್ತಾ ಮಾಡಿ, ಮುಂದಿನ ಸಾಮಾನು ಒಯ್ಯಿರಿ—ಅಂತಾರ.

**ಹುಚ್ಚರಾಯ**:—ಸದ್ಯಕ್ಕೆ ಕಿರಾಣಿ ಮತ್ತು ಕಾಳಿನ ಸಾಮಾನು ಅದು.... ತಗೊಂಡು ಬಾ!

**ಗುಂಡೂ**:—ಅವರಂತೂ ಮೊದಲ ಕೊಡೋದಿಲ್ಲಾ ಅಂತಾರ!

**ಹುಚ್ಚರಾಯ**:—ಏನಾದರೂ ಸ್ವಲ್ಪ ಸಮಾಧಾನ ಹೇಳಿ ತಗೊಂಡು ಬಾರೋ!

**ಗುಂಡೂ**:—ನೀನೇ ಹೋಗು ಬೇಕಾದರ. ಮೊದಲು ತಲೀ ಕೆಟ್ಟು ಉದ್ರೀ ಮಾಡೋದು; ಆ ವ್ಯಾಲೆ ಗೋಳಾಡೂದು! ಹಿಂದಕ ಎಲ್ಲಾ ನಿನಗ ಮರ್ಯಾದೀ ಕೊಟ್ಟ ಹಾಂಗ ಈಗ ಕೊಡೋದಿಲ್ಲಾ ಅಂಬೋದು ನಿನಗ ಗೊತ್ತೇ ಇಲ್ಲ. ನೋಡಿದಲ್ಲೆಲ್ಲಾ ಬರೇ ಉದ್ರಿ-ಉದ್ರಿ! ಆಸ್ತಿ ಅಂದರ ನಿಮ್ಮಪ್ಪ ಬರೇ ಉದ್ರೀನೇ ಮಾಡ್ಯಾನೇನೋ ಅಂತ ಕೇಳತಾರ ಎಲ್ಲಾರೂ!

**ಹುಚ್ಚರಾಯ**:—ಮಕ್ಕಳು! ಐದುಸಾವಿರ ರೂಪಾಯಿಗೆ ಲಾಯಿಫ್-ಇನ್ಸ್ಯುರನ್ಸ್ ಇಳಿಸೀನಿ ಅಂಬೋದು ಅವರಿಗೇನು ಗೊತ್ತು?

**ಗುಂಡೂ**:—ಐವತ್ತು ಸಾವಿರ ಗಳಿಸಿದರೂ ನಮ್ಮ ಪಾಲಿಗೆ ಮಾತ್ರ ಐದುಸಾವಿರ ಲಾಯಿಫ್ ಇನ್ಸ್ಯುರನ್ಸ್ ಮಾತ್ರ!

**ಹುಚ್ಚರಾಯ**:—ಅದ್ಯಾಕೋ, ಅದರ ಜೊತೆಗೆ—

**ಗುಂಡೂ**:—ಅದರ ಜೊತೆಗೆ ಹತ್ತು ಸಾವಿರ ರೂಪಾಯಿ ಸಾಲ. ಬರೇ ಹೆಣ್ಣು ಮಕ್ಕಳಿಗೆ ಮಾಡೋದರೊಳಗ, ಇದ್ದ ಒಬ್ಬ ಗಂಡಸ ಮಗನ್ನ ಕಸದೊಳಗಿನ ಕರದ ಹಾಂಗ ಮರೆತುಬಿಟ್ಟಿ!

**ಹುಚ್ಚರಾಯ**:—ಎಷ್ಟು ಮಾತಾಡತೀಯೊ ಗುಂಡ್ಯಾ, ಹದಿನೆಂಟು ವರುಷಕ್ಕೆ ಇನ್ನೂ ಒಂದು ವರುಷ ಕಡಿಮಿ ಅದ!

**ಗುಂಡೂ**:—ಅಂತೇ ಈಗಲಾದರೂ ಸ್ವಲ್ಪ ಎಚ್ಚರ ತೊಗೋತೀನಿ!

**ಲಕ್ಷ್ಮಂಬಾಯಿ**:—ಯಾಕೋ ನಾಲಿಗಿ ಬಹಳ ಉದ್ದ ಹೋಗಲಿಕ್ಕೆ ಹತ್ತಿತು? ಮತ್ತೊಂದು ಓದು ಇಲ್ಲಾ, ಬರಹ ಇಲ್ಲಾ. ಹಿರಿಯರಿಗೆ ಬೇಕಾದ ಹಾಂಗ ತಿರುಗಿ ಮಾತಾಡೋದೊಂದು ಕಲತೀದಿ. ಹಬ್ಬಾ ಹುಣ್ಣಿವಿಗೆ—ಮನೆಯೆಂದ ಮೇಲೆ—ನಾಲ್ಕು ಮಂದೀ ಮಕ್ಕಳೂ ಬರುವವರೇ. ನನ್ನ ಜೀವ ಮಾನ ಇರೋತನಕಾ ಬರತಾರ; ನಾಳೆ ನಾನೇ ಹೋದೆನಂದರ, ನಿನ್ನ ಮನಿಯ ಹೊಸ್ತಿಲದೊಳಗ ಕಾಲು ಸಹಾ ಹಾಕೋದಿಲ್ಲಾ....ಯಾರೂ!

**ಗುಂಡೂ**:—ನೀನs?

**ಲಕ್ಷ್ಮಂಬಾಯಿ**:—ಸಾಕು, ಬಾಯಿಮುಚ್ಚು; ರೊಕ್ಕ ಕೊಡುವವರು ಕೊಡತಾರ, ಒಂದಿಷ್ಟು ಈಡಾಗಿ ಸಾಮಾನು ತರಲಿಕ್ಕೆ ಏನಾಗತsದೊ ನಿನಗ ಧಾಡಿ?

**ಹುಚ್ಚರಾಯ**:—ಉದ್ದರೀ ಅನ್ನಲಿಕ್ಕೆ ಎಷ್ಟಾದರೂ ಅದsನೊ?

**ಗುಂಡೂ**:—ಎಷ್ಟೆಂಪರೇನು? ಕಿರಾಣಿಯದು ಎಪ್ಪತ್ತು ರೂಪಾಯಿ; ಕಾಳಿನಂಗಡೀದು ನೂರಾಹತ್ತು; ಸ್ಟೇಶನರಿ ಐವತ್ತಾರು; ಕಾಪಡ ದುಕಾನದ್ದು ನೂರಾಎಂಭತ್ತೈದು: ಸಿಂಪಿಗೇರವನದು ಇಪ್ಪತ್ತೈದು; ಹಾಲು-ಮಸರಿನವರದು ಹದಿನೆಂಟು: ಹೇರ್‌ಕಟಿಂಗ್ ಸಲೂನಿನದು ಐದುರೂಪಾಯಿ—

**ಹುಚ್ಚರಾಯ**:— ಅಯೋಗ್ಯಾ ಬಾಯಿಮುಚ್ಚು! ಹೇರ್‌ಕಟಿಂಗ್ ಉದ್ರೀ ನಿನ್ನದೊ ನನ್ನದೊ?....ನಾಲ್ಕು ವರುಷ ಆಯಿತು, ಒಂದು ಮ್ಯಾಟ್ರಿಕ್ ಆಗೋಣ ಆಗವೊಲ್ಲದು....ಮತ್ತೆ ಮಾತಾಡಲಿಕ್ಕೆ ಬರತಾನ. ಹೆಂಗಸರ ಮದುವೆ ಆಯಿತು, ಗಂಡು ಹುಡುಗರಿಗೆ ಹದಿನೆಂಟು ವಯಸ್ಸಾಯಿತು ಅಂದರ, ಹಡದವರ ಜವಾಬುದಾರೀ ತಪ್ಪಿತು. ನಾನು ಆಸ್ತೀ ಮಾಡಿಟ್ಟೇ ಹೋಗಬೇಕೂ ಅಂತ ಕಾಯದೆ ಇಲ್ಲಾ!

**ಗುಂಡೂ**:—ಮತ್ತ ಸಾಲಾ?

**ಹುಚ್ಚರಾಯ**:—ಮುಂದಿನ ವರುಷ ಇನ್ಶೂರನ್ಸ್ ಡ್ಯೂ ಆಗತsದ. ಎಲ್ಲಾರ ಸಾಲಾ ಮುಟ್ಟಿಸಿ, ಈ ಸಂಸಾರದಿಂದ ಒಮ್ಮೆ ಪರ್ಲು ಹರಕೊಂಡು ಬಿಡತೀನಿ!

**ಶಕುಂತಲೆ**:—ಅವ್ವಾ, ಸುಸೂತ್ರ ನಾನು ತಿರುಗಿ ಹೋಗಿ ಬಿಡತೀನಿ. ನಾನೇನೊ ಉಮೇದದಿಂದ ಬಂದಿದ್ದೆ; ಆದರೆ ಬಂದ ಕೂಡಲೆ ಮಂಗಳಾರತೀನೆ ಆಯಿತು!

**ಲಕ್ಷ್ಮಂಬಾಯಿ**:—ಅವರ ಮಾತು ತೊಗೊಂಡು ಎನು ಮಾಡತಿದಿ? ಇತ್ತೀತ್ತಲಾಗ ಅವರ ತಲೀ ಸ್ವಲ್ಪ ನಾದುರಸ್ತ ಆಗೇದ; ಪೆನ್‌ಶನ್ ಆದಾಗಿನಿಂದs!

**ಹುಚ್ಚರಾಯ**:—ಅಲ್ಲಾ ನನ್ನ ಹೆಣ್ಣುಮಕ್ಕಳನ ಧರ್ಮಾರ್ಥ ಕೊಟ್ಟನೀ ಅಂತ ತಿಳಕೊಂಡಾರೋ ಏನು ಈ ಅಳಿಯಂದಿರೆಂಬುವವರು?

ಒಬ್ಬೊಬ್ಬರಿಗೆ ಎರಡೆರಡು ಮೂರು ಮೂರು ಸಾವಿರ ವರದಕ್ಷಿಣಿ ಕೊಟ್ಟೊ, ಇಷ್ಟು ಕಾಡಿಸೋದು ಅಂದರ! ಧರ್ಮಪತ್ನಿ ಅಂದರ ಧರ್ಮಾರ್ಥ ಗೃಹಿಣೀ ಅಂತ ತಿಳಿದಾರ. ಧರ್ಮಪತ್ನಿಯ ತವರಮನೆ ಅಂದರ ಧರ್ಮಾರ್ಥ ಬೋರ್ಡಿಂಗ, ಲಾಜಿಂಗ್ ಅಂತ ಇವರ ಉದಾತ್ತ ಕಲ್ಪನೆ! ಧರ್ಮೇಚ ಅರ್ಥೇಚ. ಮಾವನ್ನ ಭದ್ರಮಾಡತೀನಿ—ಅಂತ ಅಗ್ನಿ ಸಾಕ್ಷಿ ಆಣೀಮಾಡಿದ ಹಾಂಗ ಕಾಣತsದ!

**ಲಕ್ಷ್ಮಂಬಾಯಿ**:—ಇವೊತ್ತು ಸಂಜೆಗೇ ಬಂದು ಕೂತಾರು; ಮೊದಲು ಸಾಮಾನು ತರಿಸೊ ವ್ಯವಸ್ಥಾ ಮಾಡಿರಿ!

**ಹುಚ್ಚರಾಯ**:—ನನ್ನ ತಲೀ ಅಂತೂ ಕೆಟ್ಟೇ ಹೋಗೇದ! ಇದಕ್ಕೆ ನಿನ್ನ ಸಮ್ಮತಿ ಕೂಡಾ ಸಿಕ್ಕsದ!

**ಲಕ್ಷ್ಮಂಬಾಯಿ**:—ಹೋಗೊ ಗುಂಡ್ಯಾ, ಮೊದಲು ಸಾಮಾನು ತಗೊಂಡು ಬಾ!

**ಗಂಡೂ**:—ಅಳಿಯಂದಿರಿಗೆ ದೀಪಾವಳಿ; ಮಾವಯ್ಯಗೆ ಮಾತ್ರ ದಿವಾಳಿ!

**ಹುಚ್ಚರಾಯ**:—ಇಂತಹ ಜಾಮಾತರು ಗಂಟುಬಿದ್ದಮೇಲೆ.

**ಗುಂಡೂ**:—ಒಬ್ಬರಲ್ಲದ ಹಾಂಗ ಒಂಬತ್ತು ಮಂದಿ—ಒಂಬತ್ತು ಗ್ರಹಗಳ ಹಾಂಗ!

**ಹುಚ್ಚರಾಯ**:—ಒಂದು ನವಗ್ರಹ ಯಂತ್ರಾ ಮಾಡಿಸತೇನಿ. ಅದನ್ನ ನೋಡಿದ ಕೂಡಲೆ ಒಂದೊಂದs ಗ್ರಹಾ ಸಿಡಿದು ಹೋಗಿರಬೇಕು!

**ಗುಂಡೂ**:—ಬೀಗರು ಬರುವ ಮೊದಲೇ, ಮನೀ ಬದಲೀ ಮಾಡಿ ಬಿಡೋದು ಒಳ್ಳೇ ತಂತ್ರ ಕಾಣಿಸತsದ!

**ಶಕುಂತಲೆ**:—ಬಂದವಳು ನಾನೊಬ್ಬಳೇ. ಅವರೇನೂ ಬರೋದಿಲ್ಲಾ, ಅಷ್ಟು ಯಾಕೆ ಆಡಿಕೊಳ್ಳೋದು? ಮದುವೆಯಾಗಿ ಮೂರುವರುಷ ಆದರೂ ಒಂದು ಜೋಡು ಬೆಂಡೋಲಿಯ ಹೊರತಾಗಿ ಮತ್ತೇನೂ ಕಾಣಲಿಲ್ಲ. ಅದೇ ವಚ್ಚಿಗೆ ಮಾತ್ರ ಎರಡೆರಡು ಜೋಡು ಬಿಲ್ವಾರ ಮಾಡಿಸಲಿಕ್ಕೆ ಬಂತು!

**ವತ್ಸಲಾ**:—ಹೌದವ್ವಾ, ನಿನ್ನ ಹಾಂಗ ನನಗ ವಜ್ರದ ಮೂಗುಬಟ್ಟು ಕೊಟ್ಟಾರೇನು? ನಿನ್ನ ಹಾಂಗ ನನಗ ಬನಾರಸಿನ ಪತ್ತಲಾ ಕೊಟ್ಟಾರೇನು?

**ಹುಚ್ಚರಾಯ:**—ಆ ವಜ್ರದ ಮೂಗುಬಟ್ಟು ತಾ, ಅರೆದು ಕೊಂಡಾದರೂ ಕುಡೀತೀನಿ....ಅಥವಾ ಇಂದೇ ಬನಾರಸ ಯಾತ್ರೆಗೆ ಹೊರಟು ಬಿಡತೀನಿ ಕೈಯೊಳಗ ತಾಳಾ ತೊಗೊಂಡು !

**ಗುಂಡೂ:**—(ಯಾರವರು?. ಎಂದು ಒಳಗೆ ಹೋಗಿ, ಒಂದು ಪತ್ರ ತೆಗೆದುಕೊಂಡು ಬರುವನು ) ಇದು ನೋಡು ಅಪ್ಪಾ, ಕಿರ್ಲೋಸ್ಕರವಾಡಿಯಿಂದ ಹಿರಿಯ ಅಳಿಯಂದಿರು ಬರುವವರಂತ !

**ಹುಚ್ಚರಾಯ:**—(ಗಾಬರಿಗೊಂಡು ಸಿಡುಕಿನಿಂದ) ಹೂಂ! 'ಸುಸ್ವಾಗತಮ್' ಅಂತ ಖಂಬಾ ನಿಲ್ಲಿಸು ಮನಿಯ ಮುಂದ.

**ಗುಂಡೂ:**—ಏನ್ caution ಅಂತ ಹಚ್ಚಲ್ಯೊ? ಬರೋ ಕಾರಣಾ ಆದರೂ ನೋಡಿದಿಯಾ? ಏನೋ, ಆಪಲ್ಯಾ ಚೈಸೀ ಪ್ರಮಾಣೇ—ಸ್ವೇಚ್ಛಾ ಪ್ರವಾಸದ ತಿಕೀಟು ತೊಗೊಂಡು ಬರುವವರಿದ್ದಾರಂತೆ !

**ಹುಚ್ಚರಾಯ:**—ಹೂಂ, ಇಲ್ಲಿ ಊಟಾ ಮಾಡಲಿಕ್ಕೆ ಇಚ್ಛಾ ಭೋಜನಾ, ತಿರುಗಾಡಲಿಕ್ಕೆ ಸ್ವೇಚ್ಛಾಪ್ರವಾಸ. ( ಚಿಕ್ಕ ಅಳಿಯನು ಬಳ್ಳೇ ಜಂಭರದಿಂದ ಬರುವನು. ಹಮಾಲನು ಗಾಡ್ಡ ಎತ್ತರ ಸಾಮಾನು ತಂದು ಇಟ್ಟು ಹೋಗುವನು. ಅಳಿಯ ಆವನಿಗೆ ರೊಕ್ಕ ಕೊಟ್ಟು ಕಳಿಸುವನು ಹೆಣ್ಣುಮಕ್ಕಳೆಲ್ಲಾ ಒಳಗೆ ಹೋಗುವರು )

**ಅಳಿಯ:**—(ಹೆಂಡತಿ ನೋಡುತ್ತ ಒಳಗೆ ಹೋಗುತ್ತಿರಲು, ಅವಳು ಬರಬೇಕೆಂಬ ಕುತೂಹಲದಿಂದ ಖೇಕರಿಸುತ್ತ ನಿಲ್ಲುವನು. ಗುಂಡೂ ಈ ಸಂಜ್ಞೆ ನೋಡಿ ಒಳಗೆ ಹೋಗುವನು ಮಾವಯ್ಯ ಕ್ಷಣ ಹೊತ್ತು ಸುಮ್ಮನೆ ನಿಲ್ಲುವನು ಅಳಿಯನೂ ಸುಮ್ಮನೆ ನಿಲ್ಲುವನು )

**ಹುಚ್ಚರಾಯ:**—(ಎಷ್ಟೋ ಹೊತ್ತಾದ ಮೇಲೆ) ಓ-ಓ-ಒಯೊ! ಬಂದಿರೇನು; ಹ-ಹ-ಹ-ಸಂತೋಷ (ಕೆಟ್ಟ ಮೋರೆ ಮಾಡಿ) ಬಹಾಳಾ ಸಂತೋಷ.... ಬಹಾಳಾ ಸಂತೋಷ!.... (ಎನ್ನುತ್ತ ಅಡುಗೆಯ ಮನೆಯ ಹಾದಿ ಹಿಡಿಯುವನು ) ವತ್ಸಲಾಬಾಯಿಾ, ಕೈಕಾಲು ತೊಳಕೊಳ್ಳಲಿಕ್ಕೆ ನೀರು ಕೊಡವ್ವಾ! (ಹೋಗುವನು.)

**ವತ್ಸಲಾ:**—(ಪ್ರವೇಶಿಸಿ, ನಾಚಿ ಒಂದು ಮೂಲೆಗೆ ನಿಲ್ಲುವಳು.)

**ಅಳಿಯ:**—( ಬಳ್ಳಿಯ ದರ್ಪದಿಂದ ) ಇವೊತ್ತು ಯಾರು ಬರತಾರಂಬೋದು ಗೊತ್ತಿತ್ತೋ ಇಲ್ಲೋ ?

**ವತ್ಸಲಾ**:—ಹೂಂ ! (ಮತ್ತೆ ಮೌನ)

**ಅಳಿಯ**:—ನಾನು ಗಾಡೀಗೆ ಬರತೀನಿ ಅಂಬೋದು ಗೊತ್ತಿತ್ತೋ ಇಲ್ಲೋ ?

**ವತ್ಸಲಾ**:—ಗೊತ್ತಿತ್ತು !

**ಅಳಿಯ**:—ಗಾಡಿ ಎಷ್ಟೊತ್ತಿಗೆ ಬರತದ ಅಂಬೋದು ಗೊತ್ತಿತ್ತೋ ಇಲ್ಲೋ ?

**ವತ್ಸಲಾ**:—ಏನದೂ ಸುತ್ತು ಸುತ್ತಾಡಿ ಕೇಳೋದು ? ಯಾರು ಬರಬೇಕು ಸ್ಟೇಶನ್ನಿಗೆ ?

**ಅಳಿಯ**:—ಯಾಕೆ, ನಿಮ್ಮಪ್ಪನ (ಒಳಗೆ ಲಕ್ಷ್ಯ ಹೋಗಿ ಎಚ್ಚರ ಬಂದಂತಾಗಿ, ಧ್ವನಿ ಸ್ವಲ್ಪ ಸಣ್ಣಾಗಿ ಮಾಡಿ) ನಿಮ್ಮಪ್ಪನ ಕಾಲು ಕುಂಟುಬಿದ್ದಿದ್ದವೇನು ?

**ವತ್ಸಲಾ**:—ನಮ್ಮಪ್ಪನ್ನ ಆಡಿಕೊಳ್ಳೋದು ನಿಮಗೇನು ಕಾರಣಿಲ್ಲಾ !

**ಅಳಿಯ**:—ಹೂಂ! ಅಂವರ? ನಾಯಾರು ಅಂಬೋದು ಗೊತ್ತದನೋ ಇಲ್ಲೋ ನಿಮ್ಮಪ್ಪಗ ?

**ವತ್ಸಲಾ**:—ಎಲ್ಲಾ ಗೊತ್ತದs; ನೀವು ಸುಳ್ಳೇ ಅವನ ತಲೀ ಕೆಡಿಸಬೇಡ್ರಿ !

**ಅಳಿಯ**:—ನನಗಿಂತಾ ನಿಮ್ಮಪ್ಪನೇ ಹೆಚ್ಚೇನು ನಿನಗೆ? ಅಲ್ಲಾ, ನಾನು ಒಳಗೆ ಬರುತ್ತಲೇ ಒಂದು ನಮಸ್ಕಾರ ಕೂಡಾ ಮಾಡಲಿಲ್ಲಾ. ಇದು Public insult ಅಂತ ನಾನು ಯಾಕೆ ತಿಳಕೊಳ್ಳಬಾರದು ? ಕಾಯಿದೇಶೀರ್ ನಿಮ್ಮಪ್ಪನ ಮೇಲೆ ಖಟ್ಲೆ ಹಾಕಲಿಕ್ಕೆ ಬರತದೆ. ಇವೊತ್ತು ಸಂಜೆಯ ಮುಂದೆ ನನ್ನ ಎಂಟು ಹತ್ತು ಫ್ರೆಂಡ್ಸ್ ಬರುವವರು ಇದ್ದಾರೆ ಮತ್ತೆ ! (ವತ್ಸಲೆ ಆಶ್ಚರ್ಯದಿಂದ ಗಾಬರಿಯಾಗಿ-'ಅಂ?' ಎನ್ನುವಳು) ಅವರಿಗೂ ಇದೇ ರೀತಿಯ ಅಪಮಾನ ಆದರೆ, ನಾನು ರೀತೀಪ್ರಕಾರ ಸ್ಟೆಪ್ಸ್ ತಗೋಬೇಕಾಗತದ—ಅಂತ ಹೇಳು ! ಅವರಲ್ಲಿ ಒಬ್ಬಿಬ್ಬರು ಕ್ರಿಶ್ಚನ್ಸ್, ಒಬ್ಬಿಬ್ಬರು ಮಹಮಡನ್ಸ್ ಇದ್ದಾರೆ; ಮತ್ತ ಮಹಮಡನ್ಸ್ ಅಂತ ಪಾಕಿಸ್ತಾನ ಮಾಡೋ ಕಾರಣಿಲ್ಲಾ. ನನ್ನೆಲ್ಲರಿಗೂ ಕೂಡಿಯೇ ಊಟಕ್ಕೆ ಹಾಕಬೇಕು. ನಡುವೆ ಒಂದು ದಿವಸ non-vegetarian food ಸಹ ಮಾಡಬೇಕಾಗಬಹುದು. ಮೊದಲೇ ಈಗಳೇ ವಾರ್ನಿಂಗ್ ಕೊಟ್ಟಿರತೇನೆ. ಹಿಂದಗಡೆ ನಾಲ್ಕುಮಂದಿ

ಯೊಳಗ ನೀನು ಏನಾದರೂ ಕಂಯ್‌ಕುಂಯ್ ಮಾಡಿದರೆ ನೋಡು ಮತ್ತ!

**ವತ್ಸಲಾ**:—ನಮ್ಮಪ್ಪ ಅಂದರ ಏನಂತ ಮಾಡೀರಿ ನೀವು?

**ಅಳಿಯ**:— Damn it; ಮಾವನಂದ್ರೇನು? ಅಳಿಯದೇವರ most obediently—

**ವತ್ಸಲಾ**:—ಸಾಕು, ಮಾವನ ಮನೆ ಅಂದರೇನು ಖಾನಾವಳೀ ಅಲ್ಲಾ!

**ಅಳಿಯ**:—ಆಂ! ಇದೇನು ಮೈಮೇಲೆ ಎಚ್ಚರಾದರೂ ಅದsನೊ ಇಲ್ಲೊ?

**ವತ್ಸಲಾ**:—ಮೊದಲೇ ಎಚ್ಚರ ತಗೊಳ್ಳಿರಿ!

**ಅಳಿಯ**:—ಇದು ನೋಡು, ಮೊದಲೇ ಎಚ್ಚರ ಕೊಟ್ಟಿರತೀನಿ! ಕಳವೂಟದೊಳಗಿನ ಗ್ರಾಮಫೋನು ಈಗಲಾರೂ ಕೊಡು ಅನ್ನು! ಬೇಕಾದರೆ ಅಳಿಯತನಮ್ದ ಕಳವೂಟಮ್ದ ಕೂಡಿಯೇ ಒಂದು ರೇಡಿಯೋ ಕೊಟ್ಟುಬಿಡೂ ಅನ್ನು. (**ಸುತ್ತಲೂ ನೋಡಿ**—) ಇದೇನಿದು ವ್ಯವಸ್ಥೆ? ಶಿಸ್ತಾಗಿ ಒಂದು ಫರ್‌ನೀಚರ್ ಸುದ್ಧಾ ಇಲ್ಲಾ. ಇದೇನು ಜಮಖಾನಿ, ಇದೇನು ಹರಕು ಲೋಡು? ನಮ್ಮ ಫ್ರೆಂಡ್ಸ್ ಬಂದರೆ ನಿಮ್ಮಪ್ಪನ ಶಿಸ್ತು ನೋಡಿ, ನನ್ನ ಕಿಮ್ಮತ್ತು ಕಟ್ಟ್ಯಾರು.

**ವತ್ಸಲಾ**:—ಇಲ್ಲಿ ಯಾರೂ ಬರೋ ಕಾರಣಾನೇ ಇಲ್ಲಾ!

**ಅಳಿಯ**:—Hold your tongue! ಹೆಂಗಸರು ತೌರಮನಿಗೆ ಬಂದಕೂಡಲೆ, ಇಲಿ ಗೂಡಿನೊಳಗೆ ಸೇರಿದಂತೆ ಆಗತsದಲ್ಲs? ಹೆಚ್ಚೂ ಕಡಿಮೆ ಮಾತಾಡಿದ್ದೀ ಆದರೆ, ರೀತಿಪ್ರಕಾರ ಸ್ಟೆಪ್ಸ್‌ತಗೊಂಡೇ ಬಿಡತೀನಿ ನೋಡು!

(**ಹುಚ್ಚರಾಯನು ಸಿಟ್ಟಿಗೆದ್ದು ಬರುವನು. ಅವನ ಕೈಹಿಡಿದು ಜಗ್ಗುತ್ತ ಲಕ್ಷ್ಮಿಬಾಯಿ ಬರುವಳು.**)

**ಹುಚ್ಚರಾಯ**:—ನೀವು steps ಇಳಿದೇ ಬಿಡ್ರೀ ಅಂತೀನಿ, ಹೊಸ್ತಿಲ ಕೆಳಗ. ನಮ್ಮ ಮನೀ ಅಂದರ ನಿರುದ್ಯೋಗಿ ಅಳಿಯಂದಿರ ಧರ್ಮಾರ್ಥ ವಿಶ್ರಾಂತಿಗೃಹ ಅಲ್ಲ!

**ಅಳಿಯ**:—ನಿಮ್ಮ ಮಗಳ್ನ ನನಗೆ ಕೊಟ್ಟೀರಿ. ನೆನಪು ಅದsನೊ ಇಲ್ಲೊ?

**ಹುಚ್ಚರಾಯ**:— ಎಲ್ಲಾ ನೆನಪು ಅದ! ನೀವೂ ನೆನಪು ಇಡಿರಿ ನಾನು ನಿಮ್ಮ ಮಾವಾ, ಒಬ್ಬ ಮಾನವಾ—ಅಂಬೋದನ್ನ!....ಜಗತ್ತಿನೊಳಗ revolution ಇಲ್ಲದೆ evolution ಆಗೋದಿಲ್ಲ!, ಹಿಂದಿನ ಬಾಯಿಸತ್ತ ಮಾವ ನಾನಲ್ಲ. ಮಗಳನ್ನು ಹಡೆದರೂ ಮಾನವನಾದ ಮಾವ ನಾನು!

**ಅಳಿಯ**:—ನಾನು ಅಳಿಯದೇವರು!

**ಹುಚ್ಚರಾಯ**:— ನೀವು ದಶಮಗ್ರಹ. ನಿಮ್ಮಂತಹ ಗ್ರಹಗಳು ಕೂಡಿಯೆ ನಮ್ಮ ಮನೆ ಈ ವ್ಯವಸ್ಥೆಗೆ ಬಂದಿತು. ನಿಮ್ಮ ಅಳಿಯತನ ನಿಮ್ಮ ಗೆಳೆಯರ ಮನೆಯಲ್ಲಿಯೆ ಆಗಲಿ! ದಿನಾ ಒಂದು ಪಕ್ವಾನ ಆಗಲಿ; ದಿನಾ ಒಂದು ಪಾಕಿಸ್ತಾನ ಆಗಲಿ. ಒಂದು ದಿನ ಬೇಕಾದರೆ ನಾನೂ ಬರತೇನೆ ಮಾಸಲೆ ನೋಡಲಿಕ್ಕೆ!

**ಲಕ್ಷ್ಮಂಬಾಯಿ**:—ಹುಚ್ಚs ಹಿಡೀತೋ ಏನೋ ಇವರಿಗೆ! ನಿನ್ನೆ ನಿಂದಲೂ ತಲೆಗೆ ಸ್ವಲ್ಪ ತ್ರಾಸ ಆದ ಹಾಗೆ ಮಾಡಲಿಕ್ಕೆ ಹತ್ತ್ಯಾರ! ಯಾವಾಗ ಲಾದರೂ ಒಮ್ಮೊಮ್ಮೆ ಹೀಗೆ ನನ್ನ ಕೂಡಿದ ಹಾಗೆ ಮಾಡತಾರ. ಇವರಿಗೆ ಅದೊಂದು ರೋಗವೇ ಅದೆ....ತಾವು ಏನೂ ತಪ್ಪು ತಿಳಿದುಕೊಳ್ಳಬಾರದು!

**ಹುಚ್ಚರಾಯ**:—ನನ್ನ ತಲೀ ನನ್ನ ಹೆಗಲಮೇಲೆಯೆ ಅದೆ!

**ಅಳಿಯ**:—ನಿಮ್ಮ ಮಗಳ್ನ ನಿಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಬಿಡಿರಿ ಹಾಗಾದರೆ; ನಾನು ಹೊರಡತೇನೆ.

**ಹುಚ್ಚರಾಯ**:—(ನಗುತ್ತ) ಹ—ಹ—ಹ! ನನ್ನ ಹೆಗಲ ಮೇಲೆ ನನ್ನ ತಲೆಯ ಭಾರ! ತಲೆಯ ಮೇಲೆ ನನ್ನ ಮಗಳ ಭಾರ. ಇಷ್ಟೇ ಹೌದಲ್ಲೋ ಶಿಕ್ಷೆ? ಈ ಶಿಕ್ಷೆ ನೀವು ಮೊದಲೇ ಕೊಟ್ಟುಬಿಟ್ಟಿದ್ದರೆ ನಾನಿನ್ನೂ ಎಷ್ಟೋ ಮಾಡ್ತು ಉಳಿಸುತ್ತಿದ್ದೆ!....ನಾನು ಹಡೆದ ಮಗಳು. ನನ್ನ ಮನೆಯಲ್ಲಿಯೆ ಇರಲಿ. ಅವಳಿಗೆ ಶಿಕ್ಷಣ ಕೊಡುವೆ, ಅವಳಿಗೆ ಉಚ್ಚಶಿಕ್ಷಣ ಕೊಡುವೆ. ತನ್ನ ಹೊಟ್ಟೆ ಯನ್ನು ತಾನೇ ತುಂಬಿಕೊಳ್ಳಲಿ. ಜಗತ್ತು ಮುಂದೆ ಬರಬೇಕಾದರೆ ಪ್ರತಿ ಭಟನೆ, ಪ್ರತಿಕ್ರಾಂತಿ ಬೇಕೇಬೇಕು!

**ಅಳಿಯ**:—ಅದಕ್ಕ ಒಪ್ಪಿಗೆಯಿದೆ ನಮ್ಮ?

**ಲಕ್ಷ್ಮಂಬಾಯಿ**.—(ಕಣ್ಣೀರು ಒರಸಿಕೊಳ್ಳುತ್ತ ಪ್ರಶ್ನೆ) ಕಟ್ಟಿ ಕೊಳ್ರಿ. ನನ್ನ ಮಗಳಿಗೆ ವನವಾಸ ತರಬೇಡ್ರಿ!

**ಹಚ್ಚರಾಯ**:—(ಯಾವುದನ್ನೂ ಲಕ್ಷ್ಯಕ್ಕೆ ತರದೆ) ಅವಳ ಅಪ್ಪನ ಒಪ್ಪಿಗೆ ಯದೆ. ನೀವು ಮುಂದೆ ಸಾಗಿರಿ !

**ಲಕ್ಷ್ಮಂಬಾಯಿ**:—ನಡುನೀರಿನಲ್ಲಿ ಮುಳುಗಿಸಿ ಹೋಗಬೇಡ್ರಿ. ಅವರಿಗೆ ಹುಚ್ಚು ಹಿಡಿದದೆ. ನನ್ನ ಮೋರೆ ನೋಡಿರಿ, ಮಗಳ ಮೋರೆ ನೋಡಿರಿ!

**ಹುಚ್ಚರಾಯ**:—ಹ–ಹ! ನನ್ನ ಮೋರೆ ಸ್ವಲ್ಪ ನೆಟ್ಟಗೆ ನೋಡಿರಿ. ನಾನು ಹುಚ್ಚರಾಯ—ಅಂತ ಹುಚ್ಚು ಹಿಡಿದಿದೆಯೇನು ನನಗೆ? ಸಮಾಜದ ಹುಚ್ಚುನಡತೆ ನೋಡಿ ಈಗ ಅನಿಸತsದೆ....ನನಗೆ? ಎಂಥಾ ಹುಚ್ಚು ಹಿಡಿದಿತ್ತು ಆವಾಗs....ಅಂತ.

**ಅಳಿಯ**:—Good bye.

**ಹುಚ್ಚರಾಯ**:—ನಮಸ್ಕಾರ. ಹೋಗಿ ಬರ್ರಿ, ಅಥವಾ ಬರಲೇ ಬ್ಯಾಡ್ರಿ!

(ಅಳಿಯ ಸಾಮಾನು ಕಟ್ಟಹತ್ತುವನು. ವತ್ಸಲಾ ಅಳುತ್ತ ಅವನ ಕಾಲಿಗೆ ಬೀಳುವಳು. ಲಕ್ಷ್ಮಂಬಾಯಿ ಒಮ್ಮೆ ಗಂಡನ ಮೋರೆ, ಒಮ್ಮೆ ಅಳಿಯನ ಮೋರೆ ನೋಡುತ್ತ ನಿಂತುಬಿಡುವಳು. ಹುಚ್ಚರಾಯ ಒಳಗಿನಿಂದ ಒಂದು ಜೋಡು ತಾಳಾ ತಂದು ಬಾರಿಸುತ್ತ ಬರುವನು. ಗುಂಡೂ ಚಹಾದ ಕಪ್ಪುಬಸಿ ತಂದು-'ಚಹಾ ತಗೊಳ್ಳಿರಿ' ಅನ್ನುತ್ತ ಇದನ್ನು ನೋಡಿ, ನೆಲಕ್ಕಪ್ಪಳಿಸಿ ಗಾಬರಿಗೊಂಡು ನಿಲ್ಲುವನು)

— ತೆರೆ.

# ಪುರಾಣದ ಪೂರ್ವರಂಗ

●

ಪಾತ್ರಗಳು

| | |
|---|---|
| **ಗಂಗಾಬಾಯಿ** | **ತುಂಗಾಬಾಯಿ** |
| **ಬಾಗೀರಥಿಬಾಯಿ** | **ವರದಾಬಾಯಿ** |

●

(ದೇವರಗುಡಿ, ನಮ್ಮ ಪುರಾಣದ ರಂಗಭೂಮಿ. ಇಂದೇಕೋ ಆಚಾರ್ಯರು ಬರಲು ತಡವಾದ್ದರಿಂದ ಬಂದವರು ಹೊತ್ತುಗಳೆಯಲು ಹರಟೆಕೊಚ್ಚುತ್ತ ಕುಳಿತಿದ್ದಾರೆ ಇದೂ ಒಂದು ಪುರಾಣ, ಅಲ್ಲಲ್ಲ ಇದೊಂದು ಪುರಾಣ, ಪೂರ್ವರಂಗ.)

**ಗಂಗಾಬಾಯಿ**:—(ಬತ್ತಿ ಹೊಸೆಯುತ್ತಲೇ ಗೋಣು ಮೇಲೆತ್ತಿ ಆಕಳಿಸುತ್ತ) ಇದೇನ್ರೆ ನಮ್ಮವ್ವಾ—ಇನ್ನೂ ಬರವಲ್ರು ಆಚಾರು. ಮನ್ಯಾಗಾರ ಬ್ಯಾಳಿಗಿಟ್ಟ ಬಂದೀನಿ....ಎಲ್ಲಿ ಹೊತ್ತಿ ಹೋಗತಾವೋ ಏನಮಣ್ಣೋ!

**ವರದಾಬಾಯಿ**:—(ಎಲೆ ಹಚ್ಚುತ್ತಲೆ.) ಯಾಕ? ನಿಮ್ಮಲ್ಯ್ಯಾ ಹತ್ತ ಘಂಟೇದ ಅವಸರ ಏನು?

(ಇಷ್ಟರಲ್ಲಿ ಭಾಗೀರ್ಥಿಬಾಯಿಯು ತುಂಗಾಬಾಯಿಯೊಡನೆ ಪ್ರವೇಶಿಸುವಳು.)

**ಗಂಗಾ**:—ಅಲಾಲಾಲಾ! ಇದೇನ್ರೆವಾ ತುಂಗಾಬಾಯ್ರು, ಯಾವೂರ ರಾಜಾ ಸತ್ತ ಇವತ್ತ? ಒಳ್ಳೇ ಅಡ್ಡ ಹೊತ್ತಿನೊಳಗ ಒಡಹಾಯ್ದಿರಿ ಗುಡೀ ಕಡೆ? ಪುರಾಣಕಂತೇನ ಬಂದಿದ್ರ್ಯೊ?....

**ತುಂಗಾ**:—ಅಲ್ಲಾ, ಉಡಸಾರ್ಣಿಗೆ ಶಗಣಿ ಇದ್ದಿದ್ದಿಲ್ಲ ಮನ್ಯಾಗ; ಅವಕ್ಕ ಇಲ್ಲೇ ಎಲ್ಲ್ಯಾರ ಬಿದ್ದದೇನೋ ಅಂತ ಹುಡಿಕ್ಯೋತ ಹೊಂಟಿದ್ದೆ.

ಹಾದ್ಯಾಗ ಭಾಗಿರ್ತಿಬಾಯ್ರು ಒದರಿದ್ರs: ಆಸು ಹಂಗಾರ ಬಂದ ಹೋದ್ರಾತು ಅಂತ ಬಂದೆ.

**ಭಾಗಿರ್ತಿ**:—(ಗಂಗಾಬಾಯಿಗೆ) ಸೀನಶ್ಕ್ಯಾರ ಮಂಗಳ ಆತೇನ್ರಿ ?

**ಗಂಗಾ**:—ಎಲ್ಲಿ(ದ್ರಿ ನಮ್ಮವ್ವಾ. ಇನ್ನೂ ವಿಶ್ವಾಮಿತ್ರಾ ರಾಮಾ ಲಕ್ಷ್ಮಣರ‍್ನ ಬ್ಯಾಟಿ ಆಡ್ಲಿಕ್ಕೆ ಕರಕೊಂಡು ಹೋಗಲಿಕ್ಕೆ ಬಂದಾನ.

**ಭಾಗಿರ್ತಿ**:—ವಿಶ್ವಾಮಿತ್ರ್ಯೋ ಏನೂs ವಸಿಷ್ಠರೆ?

**ಗಂಗಾ**:—ಯಾರ ಆದ ಭಾಗ್ಯ ಏನು? ಇಲ್ಲಿಗೆ ಬಂಧಾಂಗ ಕಾಣಸ್ತದ ನೋಡ್ರಿ.

**ತುಂಗಾ**:—ಸವಣೂರ ಸೀತಾರಾಮಾಚಾರ ಸೊಸಿ ಹಡದ್ಲೇನ್ರಿ? ದಿನದಾಗ ಅಂತ ಕೇಳಿದ್ದೆ.

**ವರದಾ**:—(ಮುಂದೆ ಬಂದು) ಅಯ್ಯsಯ್ಯs! ಹಡದ್ಲಲ್ಲಾ ಮೊನ್ನೆ ಸೃಷ್ಟಿದಿವಸ.

**ತುಂಗಾ**:—ಆಂ? ಗಂಡೋ ಹೆಣ್ಣೋ?

**ವರದಾ**:—ಹೆಣ್ಣೂs, ಗಂಡೆಲ್ಲೀದ ಹುಟ್ಟಬೇಕು ಮಣ್ಣಾಗ.

**ಗಂಗಾ**:—ಏನರೆ ಯಾಕ ಆಕ್ಕೋವಲ್ಯಾಕ. ಸುಸೂತ್ರ ಹಡದ್ಲಿಲ್ಲೋ ಸಾಕು.

**ತುಂಗಾ**:—ಹಂಗ ಅಂದ್ರ ಹೆಂಗ ಆದೀತ ಹೇಳ್ರಿ ಗಂಗಾಬಾಯ್ರು! ಮನೆತನ ಉದ್ಧಾರ ಮಾಡಲಿಕ್ಕಾರ ಒಬ್ಬ ಗಂಡಸ ಮಗಾ ಅಂತ ಬ್ಯಾಡ?

**ವರದಾ**:—ನೋಡ್ರೆವಾ ಇದೊಂದ ಹಿಡಿದರ ಐದ ಹೆಣ್ಣ ಆದವು. ಹಿರೇ ಹುಡಿಗಿ ಅಂತೂ ಮನೀಯೆತ್ರಾ ಬೆಳೆದ ಕೂತsದ. ಎಲ್ಲೆಲ್ಲ್ಯೂ ವರಾ ಅನ್ನಿ ಸಿಗವಲ್ಲು. ಬಂದವ್ರೆಲ್ಲಾ ಹುಡಿಗಿ ಕಾಡು ಅಂತ ತಿರಿಗಿ ಹೋಗಲಿಕ್ಕೆ ಹತ್ಯಾರ.

**ಗಂಗಾ**:—ಈಗಿನವ್ರೇನ್ರಿ ನಮ್ಮವ್ವಾ! ಬರೇ ಛಂದಾಚಾರಕ್ಕ ಮೆಚ್ಯಾರ. ಚಲಿವ್ಕಿ ಏನ ಅರಕೊಂಡು ಕುಡಿತಾರೋ ಏನ ಮಣ್ಣೋ!....ನಮ್ಮ ಮದಿವೀ ಕಾಲಕ್ಕ ನಮ್ಮನ್ನ ನೋಡಲಿಕ್ಕೆ ಸುದ್ಕೆ ಬರಲಿಲ್ರೆವಾ!

**ಭಾಗಿರ್ತಿ**:—ಅಲ್ರಿ ಮೊನ್ನೆ ಯಾರೋ ಹೇಳತಿದ್ದರ್ರ........ಆಂ........ ಇಂವಾ....(ನೆನಪುಮಾಡಿಕೊಳುತ್ತ) ಥೂ ಸುಡ್ಲಿ ಬಾಯಾಗs; ಆದ ಹೆಸರು,,,,

(ಮತ್ತೆ ನೆನಪು ಮಾಡಿಕೊಳ್ಳುತ್ತ) ಅಂವಾ ಯಾರೋ ವಿಲಾಯತಿಗೆ ಹೋಗಿ ಬಂದಾನಂತಲ್ರೀ....

**ವರದಾ:**—ಹೂಂs—ಅವನs !....ಅಂವಾ ಒಳೇ ಮಾಡಿಕೊಂಡಾನು ವೈದಿಕ ಬ್ರಾಂಬರ ಕನ್ಯಾನ; ಮಡ್ಡಮ್ಮನ್ನ ಮಾಡಿಕೊಂಬಾವಾ ಅಂವಾ.

**ಗಂಗಾ:**—ಮಡ್ಡಮ್ಮನಾರೆ ಮಾಡಿಕೊಳ್ಳೀ, ಯಾ ಅಮ್ಮನಾರೆ ಯಾಕ ಮಾಡಿಕೋವಲ್ಲನ್ಯಾಕ....ಅಂವಾ ಏನ್ರೀ ನಮ್ಮವ್ವಾ! ವೈದಿಕ ಬ್ರಾಂಬರನ ಕಂಡ್ರ ಆಗೂದಿಲ್ಲಾ; ನೋಡ್ರಿ ನಮ್ಮ ಸ್ವಾದರಳಿಯಾನ ಸ್ವಾದರಸೊಸಿ ನೆಗೆಣ್ಣಿ ಮಗಳು ಇದ್ದಾಳಲ್ಲಾ....ಪಾಪ....(ಸುಳ್ಳುಸುಳ್ಳೇ ಕಣ್ಣೀರು ಸುರಿಸುತ್ತ) ಚಿಕ್ಕಾಕಿ ಇರೂವಾಗs ನಮ್ಮ ಹಾಂಗ ಆಗಿ ಬಿಟ್ಟಾಳ. ಎರಡನೇ ಗಂಡಸೂರ ಮಾರಿ ಅಂಬೂದೂ ಕಂಡಿಲ್ಲಾ ಪ್ರಾಣಿ! ಅಂಥಾಕಿಗೆ ಬಯಿಕಿ ಆಗ್ತಾವ ಅಂತ ಸುದ್ದೀ ಹುಟ್ಟಿಸಿ ನಾಟಕಾ ಬರದಿದ್ನಂತೇಳ್ರಿವಾ ಆಕಿಮ್ಯಾಲೆ; ಎರಡ ಹೊತ್ತು ಪುರಾಣಕ ಅಂತ ಹೊರಬೀಳೂದೂ ಸುದ್ಧಾ ನಿರ್ಬಂದ, ಇನ್ನ. ವೈದಿಕ ಬ್ರಾಂಬರನ್ನ ಕಂಡ್ರ ಕೆಂಡಾಕಾರತಾನ ಮುಂಡೇಮಗಾ. ಅವರೇನು ಇವನ ತಲೀ ಮ್ಯಾಲೆ ಮೆಣಸ ಅರೀಲಿಕ್ಕೆ ಕೂತಾರೋ ! ತಾನೂ ವೈದಿಕ ಬ್ರಾಮ್ಣ ಆಗ್ಯಾನ ನೋಡಿದ್ರ—ತಮ್ಮ ಮಂದೀ ತಪ್ಪು ತಾನs ಎಣಿಸಬೇಕೇನ್ರಿವಾ ಹೀಂಗ ?

**ತುಂಗಾ:**—ಏನೋ ಜನರು ಸುಧಾರಿಸಲಿ ಅಂತ ನಾಟ್ಕಾ ಬರೀತಾರಂತ. ನನಗಾರ ಏನು ಗೊತ್ತು ತಾಯಿ, ನಮ್ಮ ಶಾಮು ಅಂತಿದ್ದಾ....ಅಲ್ಲಾ ಆವರು ಏನಾರ ವಿಚಾರಮಾಡಿ ಬರದಿರತಿದ್ದಾರು. ಅಂಥಾದು ಅದು ನಿಮಗಂತsನ ಯಾಕ ತಿಳಕೊಳ್ಳಬೇಕು?

**ಗಂಗಾ:**—ವಿಚಾರ ಎಲ್ಲೀದ ಬರತಾವ ಮಣ್ಣಾಗ! ಸುಟ್ಟಿತು ಇವನ ವಿಚಾರ—ನಮ್ಮದ ನೋಡೇ ಬರದಾನವಾ ಸಹನ ಆಗದ್ದಕ್ಕ!

**ವರದಾ:**—ಅಂದ್ರ ?

**ಗಂಗಾ:**—ಅಂದ್ರೇನೂ........(ಪೆಚ್ಚು ಮೋರೆಮಾಡಿ)....ಇದೇನು ಎದ್ದ ಬಿಟ್ರಿಲ್ರಿ ತುಂಗಾಬಾಯ್ರು ?

**ತುಂಗಾ:**—ಅಯ್ಯ ಹೋಗ್ತೀನ್ರಿವಾ ಹೊತ್ತ ಆತು. (ಹೋಗುವಷ್ಟರಲ್ಲಿ)

**ವರದಾ**:—ಅಯ್ಯ ! ಹ್ಯಾಂಗs ಹೊಂಟ್ರಿಲ್ರಿ ಗುಡಿಗೆ ಬಂದು, ಪ್ರದಕ್ಷಿಣಿ ನಮಸ್ಕಾರಾ ಹಾಕಲೇ ಇಲ್ಲಲ್ಲಾ ?

**ತುಂಗಾ**:—ಹೌದ ನೋಡ್ರೀ ಮರ್ತಬಿಟ್ಟಿ. ಮ್ಯಾಲೆ ಸುಟ್ಟ ಮರವು ಒಂದು !

('ಸ್ವಾಮೀ ನಮ್ಮಪ್ಪಾ ದಯಾಸಿಧೆ, ಉದ್ಧಾರ ಮಾಡಪ್ಪಾ' ಎಂದು ನಮಸ್ಕರಿಸಿ, ಪ್ರದಕ್ಷಣಿ ಹಾಕಿಬಂದು) ಇನ್ನಾರೆ, ಅಪ್ಪಣಿ ಕೊಡ್ರೀ ಅಡಿಗ್ಗೆ ಹೊತ್ತಾಗತ್ತsದ.

**ತುಂಗಾ**:—ಯಾಕ ಏನೇನಾಗಬೇಕು ಅಡಿಗಿ ?

**ತುಂಗಾ**:—ಏನಾಗೋದೂs (ಎಡಗೈಯೊಳಗಿನ ಗೋಟುಪಾಟ್ಲಿಗಳನ್ನು ಬಲಗೈಯಿಂದ ತಿರುವುತ್ತ,) ಒಂದನ್ನಾ, ಒಂದ ಪಾಯಸಾ ಏನ್ರೀ. ಹೂರಣಾ ಕಣಕಂತೂ ಸೈಯ್ಸsಸೈಯ್ಸ. ಆತ್s ಒಂದ್ನಾಕ ಕ್ವಾಡಬೋಳಿ, ಅಷ್ಟ ಕರ್ಚಿಕಾಯಿನೂ ಕರೀಬೇಕಂತ ಮಾಡೀನಿ. ಹಬ್ಬಾ ಹುಣ್ಣಿವಿ ಅಂದೀದ ಮತ್ತ ಆಗಬೇಕಲ್ರೀ ಎಲ್ಲಾ ನೇಮದ ಪ್ರಕಾರ. ಒಂದ ಕಡಿಮೆ ಆಗೂತ್ಲೆ ನಮ್ಮ ಮನಸ್ಸಿಗೆ ಕಚ್ಚ ಅನಸ್ತದ. (ಸಣ್ಣ ನಗೆಯಿಂದ)....ಒಂದ ಪ್ಯಾಳ್ಯಾಕ್ಕ ತಂದ ಹಾಕಾವ್ರು ಇಲ್ಲಾಂತ ಗೋಳ್ಯಾಡಿದ್ರೂ ಕಡಾತಂದಾರೆ ಮಾಡ್ತೀನಿ ನಾನೂ.... ಹೆಂಗ ಬಿಡಬೇಕ ಹೇಳ್ರಿ ?

**ಗಂಗಾ**:—ಹೌದ್ರೀ ಖರೇ ಅದ. ಬ್ರಾಂಬರ ಭೋಜನಾ ಅಂದಿಂದ ಪುರಾಣದಾಗ ಹ್ಯಾಂಗ ಹೇಳಿರ್ತಾರ ಹಾಂಗ ಎಲ್ಲಾ ಆಗಲಿಕ್ಕೇ ಬೇಕಲ್ಲಾ.

**ತುಂಗಾ**.—ಹೋಗಿ ಬರ್ತಿನ್ರೀ ಭಾಗೀರ್ತಿಬಾಯ್ರು. ಹರಟಿಗೇನು, ಅಂತಿಲ್ಲಾ, ಪಾರಿಲ್ಲಾ. ಗಂಗಾಬಾಯ್ರs, ಸಂಜೀಮುಂದ ಸವಡ ಆದ್ರ ಬರ್ರಿಲ್ಲಾ ಮನೀಕಡೆ....ಬರೋ ಮುಂದ ಹಾಂಗs ಒಂದಿಷ್ಟು ತೀರ್ಥಾತಂದ ಬಿಡ್ರಿಲಾ, ಮತ್ತ ನನಗೆಲ್ಲಿ ಸವಡು ಆಗಬೇಕು ?

**ಗಂಗಾ**:—ಯಾಕ ನೀವs ನಮ್ಮ ಮನೀಕಡೆ ಬಂದ ಬಿಡ್ರಿಲ್ಲಾ! ಒಂದ ದಿವಸೇನು ಬಡವರ ಮನೀಗೆ ಭಾಗ್ಯಲಕ್ಷ್ಮಿ ಬರಬಾರದ ?

**ತುಂಗಾ**:—ಆತ ಹಂಗಾರ, ನಾಳೆ ಕಾರ್ತೀಕಕ್ಕ ಒಂದಿಷ್ಟು ಮಂಗ ಳಾರ್ತಿ ಬತ್ತೀನಾರ ಮಾಡಿಕೊಡ್ರೀರಂತ ಬರ್ತೀನಿ.

**ಗಂಗಾ**:—ಎಂದ ಹಚ್ಚಸಬೇಕಂತ ಮಾಡೀರಿ ಕಾರ್ತೀಕಾ ?

**ಭಾಗಿರ್ತಿ:**—ಆಚಾರು ಬಂದs ಬಿಟ್ರ ನೋದ್ರೆ. ಪುರಾಣ ಮುಗಿಸಿ ಕೊಂಡs ಹೋಗ್ರೆಲ್ಲಾ.

**ತುಂಗಾ:**—ತೀರಿ ಹೋತ್ರವಾ. ಇಲ್ಲಿ ಪುರಾಣ ಕೇಳಿಕೋತ ಕೂತ್ರ ಅಲ್ಲೆ ಪ್ರಾಣಾ ತೊಗೋತಾರ ಸಮ್ಮದು ಹಿಂದಾಗಡೆ.

**ಭಾಗಿರ್ತಿ:**—ಪ್ರಾಣದೇವರ ಗುಡ್ಯಾಗ ನಿಂತು ಪ್ರಾಣಕ್ಕೆ ಹೆದರ್ತಾ-ರೇನ್ರೆ ?

**ಗಂಗಾ:**— ಅಯ್ಯ ! ಅವ್ರ ಪ್ರಾಣದೇವ್ರs ಬ್ಯಾರೆ, ನಮಗೊಂದು ಗತಿ ಇಲ್ಲಂತ ಈ ಪ್ರಾಣದೇವ್ರ ಕಡೆ ಬರ್ತೀವಿ.

(ತುಂಗಾ ಬಾಯಿಯು ಹೋಗುವುದಕ್ಕೂ ಆಚಾರ್ಯರು ಬರುವುದಕ್ಕೂ ಅಡ್ಡ-)

—ತೆರೆ

---

# ನಾರೀಪ್ರಚಾರ

●

ಪಾತ್ರಗಳು

**ನರ್ಮದಾ, ಸಿಂಧು, ಕಾವೇರಿ, ಗೋದಾವರಿ**

(ನಾಲ್ವರೂ ಇಂಗ್ಲಿಷ್ ಶಾಲೆಯ ವಿದ್ಯಾರ್ಥಿನಿಯರು), **ಟೀಚರ್**

(ಮೇಲಿನ ವಿದ್ಯಾರ್ಥಿನಿಯರ ತರಗತಿಯ ಶಿಕ್ಷಕಿ) **ಗೃಹಸ್ಥ** (ಕಾವೇರಿಯ ತಂದೆ)

ಅಲ್ಲದೆ ಶಾಲೆಯ ಸಣ್ಣ ಸಿಪಾಯಿ; ದೊಡ್ಡ ಸಿಪಾಯಿ.

●

[ಯಾವುದೊ ಒಂದು ಹೆಣ್ಣುಮಕ್ಕಳ ಶಾಲೆಯೊಳಗಿನ ಸಣ್ಣ ರೂಮು. ಈವೊತ್ತು ಶಾಲೆಯಿಲ್ಲದಿದ್ದರೂ ಕ್ಲಾಸು ಅದೆ ಅವರೆ ಯಾವ ಕ್ಲಾಸು ಎಂಬುದನ್ನು ಹೇಳಲು ಬರುವಂತಿಲ್ಲ. ಏಕೆಂದರೆ ಇರುವ ಮೂರು ನಾಲ್ಕು ವಿದ್ಯಾರ್ಥಿನಿಯರಲ್ಲಿ ಒಬ್ಬಳು ಏನೋ ಬರೆಯುತ್ತಿದ್ದಾಳೆ. ಒಬ್ಬಳು ಪೇಟ ಬಾಂಸುತ್ತಿದ್ದಾಳೆ. ಮತ್ತೊಬ್ಬಳು ?...ಒಮ್ಮೆ ಓದುವುದು ಒಮ್ಮೆ ಹಾಡುವುದು ಹೀಗೆ ಏನೋ ನಡೆಸಿದ್ದಾರೆ. ಇನ್ನೂ ಅವರ ಮಿಸ್ಟ್ರೆಸ್ ಬಂದಿರಲಿಲ್ಲವಾದುದರಿಂದ ಅವರ ಚಟುವಟಿಕೆಗಳು ತಡೆಯಿಲ್ಲದೆ ಸಾಗಿವೆ]

**ನರ್ಮದಾ:**—[೪ನೇಯವಳು] (ಸುಳ್ಳು ಸುಳ್ಳೆ ಜೋರಿನಿಂದ ಓದುತ್ತ) ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ (ಮತ್ತೊಮ್ಮೆ ಕಾವೇರಿ ಮತ್ತೆ ಗೋದಾವರಿ ಇವರ ಕಡೆಗೆ ನೋಡುತ್ತ) ಕಾವೇರಿಯಿಂದ ಗೋದಾವರಿ....(ಎನ್ನುತ್ತ ಅವರಿಬ್ಬರೂ ಕುಳಿತ ಜಾಗವನ್ನು ಅಳೆದು) (ಮತ್ತೊಬ್ಬಳನ್ನು (೩ನೇಯು)ಕೂಗಿ) ಸಿಂಧೂ ಇದು ನೋಡು ನಮ್ಮ ದಕ್ಷಿಣ ಮೋರಿ....ಅಲ್ಲಲ್ಲ, ಮೇರಿ ನೋಡು ಇದು! (ಕಾವೇರಿಗೆ) ಎಲ್ಲಿ ಎತ್ತು ಮೋರೆ ಮೇಲೆ! (ಗೋದಾವರಿಯ ಗಲ್ಲವನ್ನೆತ್ತಿ) ಇದು ನೋಡು ಇದು ಉತ್ತರದ

ಮೇರಿ— What mary? ನಮ್ಮ ಸ್ಪೆಶಲ್ ಕ್ಲಾಸ್ ಅಂದರ ಏಕೀಕೃತ ಕರ್ನಾಟಕ ನೋಡು !

**ಗೋದಾವರಿ:**— (ಪೇಟಿ ಬಾರಿಸುವುದರಲ್ಲಿಯೇ ಮಗ್ನಳಾಗಿ) ತಾಯೆ ಬಾರ ಮೊಗವ ತೋರ ಕನ್ನಡಿಗರ ಮಾತೆಯೇ। ಹರಸು ತಾಯೇ; ಸುತರ ಕಾಯೆ, ನಮ್ಮ ಜನ್ಮದಾತೆಯೇ ||

**ನರ್ಮದೆ:**—(ಮತ್ತೆ ಪೇಟಿ ಕೆಡಿಸುವ ಉದ್ದೇಶದಿಂದ) ಮೂವತ್ತು ಮೂರು ಕೋಟಿ....ಮೂವತ್ತು ಮೂರು ಕೋಟಿ....ನಾ ಪಡೆದ ಮೂವತ್ತು ಮೂರು ಕೋಟೀ–

**ಗೋದಾವರಿ:**—ಮೂವತ್ತು ಮೂರು ಕೋಟಿ ಬಿಟ್ಟು ನಾಲ್ವತ್ತು ನಾಲ್ಕು ಕೋಟಿ ಹಿಡಿ ಹೊಸಾ ಖಾನೇಸುಮಾರಿ ಪ್ರಕಾರ; ಆದರೆ ನನ್ನ ಪೇಟೀ ಬಾರಿಸೋದಕ್ಕ ಅಡ್ಡ ಬಂದಿರೆಂದರ ನೋಡು !

**ನರ್ಮದೆ:**—ನಾಲ್ವತ್ತು ನಾಲ್ಕು ಕೋಟಿ, ನಾಲ್ವತ್ತು ನಾಲ್ಕು ಕೋಟಿ........

**ಕಾವೇರಿ:**—(ನರ್ಮದೆಯು ಬಾಯಿ ಮುಚ್ಚಿ)ಯೇ, ಹುಚ್ಚುಖೋಡೀ, ನಾ ಏನು ನಿಬಂಧ ಬರಿಯಬೇಕು ಅಂತೀಯೊ, ಬೇಡ ಅಂತೀಯೋ ?

**ನರ್ಮದೆ:**—ಓಹೊ, ಬರೆಯಿರಿ ಭಾವೀ ಅಕ್ಕಮಹಾದೇವಿಯವರೆ !

**ಗೋದಾವರಿ:**—ನೀವು ಹೀಗೆ ಸಂತೀ ನಡಿಸಿದರ ನಾವು ಪೇಟೀ ಹ್ಯಾಂಗ ಬಾರಿಸಬೇಕು ?

**ಸಿಂಧು:**—(ಹೆಣೆಯುವಾಗ ಕೈಗೆ ಸೂಜಿತಾಗಿ) ಅಪ್ಪಯ್ಯಾ ! ನಿಮ್ಮ ಮಹಾಯುದ್ಧದೊಳಗ ನನಗ ಗಾಯ ಆಯಿತು !

**ನರ್ಮದಾ:**—ಇಲ್ಲಿಲ್ಲ, ಗಡಿಬಿಡಿಯೊಳಗ ಅರಿವಿಗೆ ಕಸೂತಿ ಹಾಕುವದರ ಬದಲು, ಬಟ್ಟೆಗೇ ಕಸೂತಿ ಹಾಕಲಿಕ್ಕೆ ಹೋಗಿರಬೇಕು ಇಷ್ಟೇ !

**ಕಾವೇರಿ:**—ನೀವು ಹೀಗೇ ಟಾಕೀಯಂತ್ರದಂತೆ ಮಾತಿಗೆ ಪ್ರಾರಂಭ ಮಾಡಿಬಿಟ್ಟರೆ, ನಾವು ಭಾಷಣಾ ಏನು ಬರಿಯಬೇಕು ತಲಿ ?

**ನರ್ಮದಾ:**—ಅಲ್ಲs, ಭಾಷಣಾ ಏನು ಬರೀತಿ ನಿನ್ನ ತಲಿ ? ಇದೇನು ೨೦ನೆಯ ಶತಮಾನದ ಹೊಸಾ ಫ್ಯಾಶನ್ ಏನು ? ಭಾಷಣಾ ಬರೆಯೋದು, ಕಾಪಿ Writing ಓದೋದು, ಓರಲ್‌ಡ್ರಿಲ್ ಮಾಡೋದು !

**ಗೋದಾವರಿ**:—ಯಾವ ವಿಷಯದ ಮೇಲೆ ಭಾಷಣ ಬರೆಯುವವರಿದ್ದೀರಿ ನೀವು?

**ಕಾವೇರಿ**:—ಯಾವ ಭಾಷಣ ಅಂದರೇನು? ನಾಳೆ '**ಸ್ತ್ರೀ ಪ್ರಗತಿ ಸಂಘ**'ದ ಪ್ರಾರಂಭೋತ್ಸವದಲ್ಲಿ ಮಾತನಾಡಬೇಕಾಗೇದ. ಆದ್ದರಿಂದ '**ಸ್ತ್ರೀಶಿಕ್ಷಣದ ಅಡಚಣಿಗಳು**' ಎಂಬ ವಿಷಯದ ಮೇಲೆ ಬರೆಯುತ್ತಿದ್ದೇನೆ.

**ಗೋದಾವರಿ**:—ಒಳ್ಳೇದು, ಯಾವ ಯಾವ ಅಡಚಣಿಗಳನ್ನು ಮಂಡಿಸಿರುವಿ?

**ಕಾವೇರಿ**:—ಯಾವುವೆಂದರೇನು? ಸ್ತ್ರೀಯರಿಗಾಗಿ ಪ್ರತ್ಯೇಕ ಶಾಲೆ-ಕಾಲೇಜು-ವಿಶ್ವವಿದ್ಯಾಲಯಗಳ ಆವಶ್ಯಕತೆ, ಸ್ತ್ರೀ ಸ್ವಾತಂತ್ರ್ಯದ ಆವಶ್ಯಕತೆ, ಸ್ತ್ರೀಯರಿಗೆ ಸ್ತ್ರೀಯರೇ ಶಿಕ್ಷಕರಾಗಿ ಇರುವ ಆವಶ್ಯಕತೆ, ಕನ್ನಡ ಸ್ತ್ರೀಯರು ಮುಂದೆ ಬರಬೇಕಾದ ಆವಶ್ಯಕತೆ, ಸ್ತ್ರೀಯರ....

**ನರ್ಮದಾ**:— ಅಲ್ಲ, ಮುಖ್ಯವಾಗಿ ಸ್ತ್ರೀಯರಿಗೆ-ಅಲ್ಲ-ಹೆಂಗುಸರಿಗೆ ಗಂಡಸರಿಂದಾಗುವ ಅಡಚಣಿಯನ್ನೇ ಬಿಟ್ಟು ಬಿಟ್ಟಿರುವೆಯಲ್ಲ?

**ಕಾವೇರಿ**:—ಆಂ!

**ಗೋದಾವರಿ**:—(ಗಹಗಹಿಸಿ ನಗುತ್ತ) ಹೌದೂ ಅಂದೆ!

**ನರ್ಮದೆ**:— ಎಷ್ಟೋ ಗಂಡಸರು, ಬ್ರಹ್ಮಚಾರಿಗಳಾಗಬೇಕು ಅಂತ ಬೋಧಿಸತಾರಲ್ಲ, ಹಾಗೇ ಸ್ತ್ರೀಯೂ ಬ್ರಹ್ಮಚಾರಿಗಳಾಗಿರಬೇಕು ...ಅಂತ ನಾವು ಪ್ರಚಾರಮಾಡಲಿಕ್ಕೆ ಬೇಕು. ಅಂದರೆ, ಸ್ತ್ರೀಯರಿಗೆ ಅನಂತಕಾಲಕ್ಕೂ ಗಂಡಸರಿಂದ ಒದಗುವ ಗಂಡಾಂತರಗಳು ತಪ್ಪಬಹುದು.

**ಕಾವೇರಿ**:—ನರ್ಮದಾ ನೀನೇನಾದರೂ ಹೇಳಿದರೆ ಅನರ್ಗ್ಯದ ಮಾತೇ ಹೇಳುತ್ತೀ! ಅಲ್ಲ, ನಾಳೆ ನಮ್ಮ ಸಂಘದ ಪ್ರಾರಂಭೋತ್ಸವಕ್ಕೆ ಇನ್‌ಸ್ಪೆಕ್ಟರರೇ ಬರುವವರು ಇದ್ದಾರೆ ಅಂಥಾದು 'ಗಂಡಸರಿಂದಾಗುವ ಅಡಚಣಿಗಳು' 'ಗಂಡಸರು ಸ್ತ್ರೀಯರ ರಾಜ್ಯದಲ್ಲಿ ಕೈಹಾಕಬಾರದು' ಅಂತ ನಾಝೀಪ್ರಚಾರದಂತೆ ನಾರೀಪ್ರಚಾರ ನಡಿಸಿದರೆ, ನಮ್ಮ ಹಾಲೆ ನಡೆಯೋದು ಬಂದಾದೀತು!....ಸ್ತ್ರೀಯರ ಯಾವುದೇ ಚಟುವಟಿಕೆಗೆ ಪುರುಷರ ಅನುಮೋದನೆ ಇಲ್ಲದಿದ್ದರೆ ನಡೆಯುವ ಬಗೆ ಹ್ಯಾಗೆ? ಸ್ತ್ರೀ-ಪುರುಷರು ಅಂದರೆ ರಥದ ಎರಡು ಗಾಲಿಗಳಿದ್ದಂತೆ....ಅಂತ ಹೇಳತಾರಲ್ಲ!

**ನರ್ಮದಾ:**—ರಥದ ಗಾಲಿ ಆಯಿತು, ಟಾಂಗಾದ ಗಾಲಿ ಆಯಿತು.... ಮೋಟಾರ ಬಸ್ಸಿನ ಗಾಲಿಗಳಿದ್ದಂತೆ ಅಂದರೆ ಮತ್ತಷ್ಟೊ ಗಂಡಾಂತರ ಒದಗೀತು.

**ಸಿಂಧು:**—ಹಾಗಾದರೆ 'ಸ್ತ್ರೀ-ಪುರುಷರು ಅಂದರೆ ಒಂದು **ರಾಯಿಟ್** ಆ್ಯಂಗಲ್‌ದ ಕಾಂಪ್ಲಿಮೆಂಟರಿ ಕೋನಗಳಿದ್ದಂತೆ' ಅಂತ **ಹೊಸದೊಂದು** ಉಪಮೆ ಕೊಡೋಣ!

**ನರ್ಮದಾ:**—ಅಲ್ಲಾ, ನಾವು ಬರಿ ಇನ್‌ಸ್ಪೆಕ್ಟರರ ಮನಸ್ಸು **ಒಲಿಸಿ,** ಶಾಲೆಯ ಗ್ರ್ಯಾಂಟ್ ಹೆಚ್ಚಿಗೆ ಮಾಡಿಸಿಕೊಳ್ಳುವುದರ ಸಲುವಾಗಿ ಸ್ತ್ರೀಸಂ**ಘದ** ಸ್ಥಾಪನಾಮಾಡುವಂತಹ ಉನ್ನತವಾದ ಉದ್ದೇಶ ಇಟ್ಟುಕೊಳ್ಳಬಾರದು.... ಅಂತ ನನ್ನ ದೀನಸೂಚನೆ........ಇವೊತ್ತು ಸ್ತ್ರೀಶಿಕ್ಷಣವನ್ನು **ಕೊಡುವ** ಉದ್ದೇಶವೇ ಬೇರೆ ಆಗಿದೆ: 'ಸ್ತ್ರೀಯರು ಎಂದರೆ ಮದುವೆಯಾಗದ **ಹುಡುಗಿ** ಯರು ವಿಶೇಷ ಶಿಕ್ಷಣಪಡೆದರೆ, ಸ್ವಲ್ಪೇ ವರದಕ್ಷಿಣೆಯಲ್ಲಿ ಮದುವೆ **ಆಗು** ಬಹುದು' ಎಂಬ ಹಡೆದವರ ಸ್ವಾರ್ಥಸಾಧನೆಯು ಉದ್ದೇಶದ **ಹೊರತು** ಮತ್ತೇನೂ ಇಲ್ಲ.

**ಸಿಂಧು:**—(ಚಪ್ಪಾಳೆಕೊಡೆದು) ಇದು ಸುಳ್ಳಲ್ಲಾ ಅಂತ ನನ್ನ ಅನ ಮೋದನೆ ಇದೆ....ನಗಬೇಡಿರಿ, ಯಾಕಂದರೆ ಮೊನ್ನೆ ನಮ್ಮ ಹೆಡ್‌ಮಾಸ್ತರರು ಅತ್ಯಂತ ವಿಷಾದದಿಂದ ಹೇಳುತ್ತಿದ್ದರು; ಏನೆಂದರೆ ಇಂಗ್ಲಿಷ್ ಐದನೆಯ ಇಯತ್ತೆಯಿಂದ ಶಾಲೆಯು ಸಂಖ್ಯೆ ಒಮ್ಮೆಲೆ ಕಡಿಮೆ ಆಗಿ **ಬಿಡುವದು ಅಂತ.** ಇದಕ್ಕೆ ಕಾರಣಾನೂ ಅವರೇ ಹೇಳಿದರು. ಏನೆಂದರೆ 'ನಾಲ್ಕನೆಯ ಇಯತ್ತೆ ಆದ ಕೂಡಲೆ ದೇಶಸ್ಥ ಬ್ರಾಹ್ಮಣರ ಹೆಣ್ಣುಹುಡಿಗಿಯರೆಲ್ಲಾ ಮದುವೆಯಾಗಿ ಬಿಡುತ್ತಾರೆ. ಮುಂದೆ ಬರೇ ಮಹಾರಾಷ್ಟ್ರ ಮಹಿಳೆಯರು, **ಕೊಂಕಣೀ** ಮಹಿಳೆಯರು ಇವರೇ ಉಳಿಯುವರು'....ಅಂತ.

**ನರ್ಮದೆ:**—ಆದ್ದರಿಂದ ಇಂದಿನ ಸ್ತ್ರೀಶಿಕ್ಷಣದ ಪ್ರಗತಿಗೆ ಇದೂ ಒಂದು ಅಡಚಣಿ.

**ಸಿಂಧು:**—ಇಷ್ಟೇ ಅಲ್ಲ. ಮದುವೆಯಾದ ಸ್ತ್ರೀಶಿಕ್ಷಕಿಯರ **ಭವಣಿ** ಯೇಂದರೇ ಮುಗಿಯಿತು. ಪ್ರತಿವರುಷ ಶಾಲೆಯ ಪ್ರಾರಂಭಕ್ಕೆ **ಅವರಿಗೆ** ಮೂರುತಿಂಗಳ ಹಕ್ಕಿನ ರಜೆ ಬೇಕೇಬೇಕು. ಮೇಲಾಗಿಯೂ ಅವರು **ಸಂತಾನ**

ಸಂಪತ್ತಿನ ಹಿಡುಗಿನಿಂದ ಪಾರಾಗಿ, ಬೇಗನೆ ಶಾಲೆಗೆ ಬರಲೂ ಸಾಧ್ಯವಾಗುವ ದಿಲ್ಲ. ಕಾರಣ 'ಶಿಕ್ಷಣದ ಪ್ರಗತಿಯಾಗಬೇಕಾದರೆ, ಸ್ತ್ರೀಯರು ಅವಿವಾಹಿತ ರಾಗಿಯೇ ಉಳಿಯತಕ್ಕದ್ದು' ಎಂಬ ಕಾಯಿದೆಯನ್ನೂ ಸರಕಾರದವರು ಮಾಡುವುದು ಅತ್ಯಂತ ಅವಶ್ಯವಾಗಿದೆ.

**ಗೋದಾವರಿ**:—ಛೆ, ಛೆ, ಅವರು ಒಮ್ಮೆಲೆ ಒಪ್ಪಲಿಕ್ಕಿಲ್ಲ.....ಮತ್ತು !

**ಕಾವೇರಿ**.—ನಮ್ಮ ಸ್ತ್ರೀಯರಲ್ಲಿ ಚಳುವಳಿಯೇ ಕಡಿಮಿ. ಆದುದ ರಿಂದಲೇ ನಾವು ಇಷ್ಟೊಂದು ಹಿಂದುಳಿದ ಜಾತಿಗೆ ಸೇರಿದ್ದೇವೆ. ಸರಕಾರದ ಎಲ್ಲ ಶಾಖೆಗಳಲ್ಲಿಯೂ ಪುರುಷರ ಸಂಖ್ಯೆಯಷ್ಟೆ ಸ್ತ್ರೀಯರ ಸಂಖ್ಯೆಯೂ ಇರ ತಕ್ಕದ್ದು. ಹಾಗೆ ನಾವು ಪೇಪರಿನಲ್ಲಿ, ಪ್ಲಾಟ್‌ಫಾರ್ಮಿನ ಮೇಲೆ, ಪ್ರೆಸ್ಸಿ ನಿಂದ ಚಳವಳಿ ಮಾಡತಕ್ಕದ್ದು. ಅಲ್ಲ, ಸ್ತ್ರೀಯರು ಕಲಿಯಬೇಕೆಂದರೆ ಎಲ್ಲಾ ಊರುಗಳಲ್ಲಿ ಸ್ತ್ರೀಯರಿಗಾಗಿ ಪ್ರತ್ಯೇಕ ಶಾಲೆಗಳೇಕೆ ಇರಕೂಡದು? ಕೆಲವು ಕಡೆ ಇದ್ದರೂ ಅವರು ಕಲಿಯತಕ್ಕ ವಿಷಯಗಳನ್ನೇ ನಾವೂ ಕಲಿಯಬೇಕಂತೆ. ನಮಗೆ ಬೇಕಾದ ವಿಷಯಗಳನ್ನು ಅವರೂ ಯಾಕೆ ಕಲಿಯಬಾರದು?

**ಗೋದಾವರಿ**:—ಹೌದು ಮೆಟ್ರಿಕ್ಯುಲೇಶನ್ ಪರೀಕ್ಷೆಗೆ ಟ್ರಿಗೊನಾ- ಮೆಟ್ರಿ- ಸಂಸ್ಕೃತಗಳಂತೆ ಕಸೂತಿ ಮತ್ತು ಅಡಿಗೆಯ ವಿಷಯಗಳನ್ನು ಪುರುಷ ರಿಗೂ ಇಡಬೇಕು.

**ಸಿಂಧೂ**:—ಅಹುದು. compulsory ಇಡಬೇಕು.

**ಗೋದಾವರಿ**:—ಆದರೆ ಕೆಳಗಿನ ಇಯತ್ತೆಯೊಳಗ—ಅದೂ ಮೂರ ನೆಯ ಇಯತ್ತೆಗೆ ಕನ್ನಡ, ಹಿಂದೀ, ಇಂಗ್ಲಿಷ್, ಸಂಸ್ಕೃತ, ಪರ್ಶಿಯನ್, ಲ್ಯಾಟಿನ್ ಮೊದಲಾದ ವಿಷಯಗಳೆಲ್ಲಾ ಯಾಕೆ?....ಈ ಹಿಂದೀ ವಿಷಯ ನಮಗೇ ಯಾಕೆ? ಮೇಲಿನವರಿಗ್ಯಾಕೆ ಬೇಡ?

**ಸಿಂಧು**:—ಯೇ ಹಿಂದೀ ಇರಲೇ, ಇಲ್ಲದಿದ್ದರ ಹಿಂದೀ ಚಿತ್ರಪಟ ಗಳನ್ನ ತಿಳಿದುಕೊಳ್ಳಲಿಕ್ಕೆ ಬಹಳ ತ್ರಾಸ ಆಗತದೆ!

**ಗೋದಾವರಿ**:—ಅಲ್ಲಾ, ಇಷ್ಟು ಭಾಷಾ ಏನೋ ಕಲೀತಿವಿ. ಆದರೆ ವಧೂಪರೀಕ್ಷದ ಕಾಲಕ್ಕ ಕನ್ನಡದ ಹೊರತು ಮತ್ತು ಯಾವ ಭಾಷೆಯೊಳಗ ಮಾತನಾಡಲಿಕ್ಕೆ ಬರೋದಿಲ್ಲಲ್ಲ!

**ಕಾವೇರಿ:**—ಇಂದಿನಿಂದ ಸ್ತ್ರೀಶಿಕ್ಷಣದ ಬಗ್ಗೆ ನಾವೆಲ್ಲರೂ ಚಳವಳಿಯನ್ನು ಆರಂಭಮಾಡತಕ್ಕದ್ದು....ಮೊದಲನೆಯ ಚಳವಳಿ ಅಂದರೆ ಎಲ್ಲರೂ ಅವಿವಾಹಿತರಾಗತಕ್ಕದ್ದು !

**ಸಿಂಧು:**— ಹೌದು ! 'ಮುಂದೆ ಬೇಕಾದರೆ ವರಗಳೇ ವಧುಗಳನ್ನು ಹುಡಕತಾ ಬರಲಿ !

**ಗೋದಾವರಿ:**—ಇಲ್ಲಾ, ಬಂದರೂ refuse ಮಾಡತಕ್ಕದ್ದು !

**ಕಾವೇರಿ:**—ಹಾಗಾದರೆ ಗೋದಾವರೀ, ಅವಿವಾಹಿತಳಾಗಿರಲಿಕ್ಕೆ ನೀನು ವಚನಕೊಡುವಿಯಾ ?

**ಗೋದಾವರಿ:**—(ಗಾಬರಿಗೊಂಡಂತೆ) ಆಂ !........(ಮೆಲ್ಲಗೆ) ಹೂಂ, ಎಲ್ಲರೂ ಕೊಡಲಿ !

**ನರ್ಮದಾ:**—ಅಲ್ಲಾ, ಅವಿವಾಹಿತಳೇ ಆಗೋದಾದರೆ ಈ ಕಲಿಯುವ ಶಿಷ್ಟಾಚಾರ ಯಾಕ ಬೇಕು....ಅಂತೀಯೇನು ?

**ಸಿಂಧೂ:**—ಇಲ್ಲ, ಮನೆಯೊಳಗೆ ಕೇಳಿ ತಿಳಿಸತಾಳಂತ !

**ಕಾವೇರಿ:**—ಯಾಕೆ ಸಿಂಧೂ, ನೀನು ಸಿದ್ಧಳಿರುವಿಯೇನು ?

**ಸಿಂಧೂ:**—ಎದಕ್ಕೆ?....... ಓಹೊ !

**ನರ್ಮದಾ:**—ಅಲ್ಲ, ಕಾವೇರಿ, ಸ್ವತ: ನೀನೇ ಸಿದ್ಧಳಿದ್ದೀಯೇನು ?

**ಗೋದಾವರಿ:**—ಛೆ. ಅವಳು ಸೆಕ್ರೆಟರಿ ಅಲ್ಲೇನು ?

**ಸಿಂಧೂ:**—ಅಲ್ಲಾ, ಇವೊತ್ತು ಇನ್ನೂ ಟೀಚರೇ ಬರಲಿಲ್ಲs ?

**ನರ್ಮದಾ:**— ಇವೊತ್ತು ಸ್ಪೆಶಲ್‌ಕ್ಲಾಸ್ ಅಲ್ಲೇನು ? ಸ್ಪೆಶಲ್ ಕ್ಲಾಸು ಅಂದಮ್ಯಾಲ, ಹೆರಳಿದ ವೇಳೆಗೆ ಬರತಾರೇನು ?

**ಗೋದಾವರಿ:**—ಮತ್ತೆ ಬರದೇ ಇದ್ದರೆ ?

**ನರ್ಮದಾ:**—ಹಾ, ಕಾವೇರಿ,–ಇದೂ ಒಂದು ಸ್ತ್ರೀಶಿಕ್ಷಣದ ಅಡಚಣಿ ನೋಡು !

**ಸಿಂಧು:**—ಅಂದರೆ,....ನಮ್ಮ ಟೀಚರೂ ಅವಿವಾಹಿತರೇ ಇದ್ದಿದ್ದರೆ– ಅಂತೀಯೇನು ?

**ಕಾವೇರಿ:**—ಆದಿರಲಿ, ಈಗ ಅವಿವಾಹಿತರಾಗಲಿಕ್ಕೆ ಹೆಸರು ಕೊಡುವವರು ಕೈಯೆತ್ತಿರಿ. ಮತ್ತು ಇದಕ್ಕೆ ಮೊದಲನೆ ಹೆಸರು ನನ್ನದೇ !

**ಗೋದಾವರಿ:**—ಅಲ್ಲಾ, ನಮ್ಮ ಠರಾವು ನಮ್ಮ ಮನೆಯೊಳಗೆ ತಿಳಿದರೆ, ನಮ್ಮ ಗತಿ ನೆಟ್ಟಗಾಗಲಿಕ್ಕಿಲ್ಲ. ಇಷ್ಟೇ ಅಲ್ಲ, ನಾಳೆಗೆ ನಾವು ಇಲ್ಲಿಗೆ ಬರೋದೂ ಬಂದಾದೀತು!

**ಕಾವೇರಿ:**—ಇಂತಹ ಹೇಡಿ ಹೆಂಗಸರಿಂದಲೇ ನಮ್ಮ ನಾಡು ಈ ಹಾಡಾಗಿರುವುದು!

**ನರ್ಮದಾ:**—ಅಲ್ಲ, ಸ್ತ್ರೀಯೆಂದರೆ ಗಿಡದ ನೆಳಲು, ಮರದ ಬಳ್ಳಿ! ಅದಕ್ಕೆ ಸ್ವತಂತ್ರ ಸ್ಥಾನ ಎಲ್ಲಿಯದು?

**ಕಾವೇರಿ:**—ಮೊದಲು ಈ ಉಪಮಾನಕ್ಕೇ ಸ್ಥಾನಕೊಡಬಾರದು.... ನೀವು ಬಿಡಿರಿ, ನಾನು ನನ್ನ ಧ್ಯೇಯಸಾಧನೆಗಾಗಿ ಟೊಂಕಕಟ್ಟುತ್ತೇನೆ!

**ನರ್ಮದಾ:**—ಅಂದರೆ—ಭಾವಿ(ಬಿಳೋದೆ ಹೆಂಗಸರ ಧ್ಯೇಯಸಾಧನೆ ಅಲ್ಲ....ಹೌದಲ್ಲೋ—ಮತ್ತೆ?

**ಸಿಂಧು:**—(ಒಳಗೆ ಹೋಗಿ ಓಡಿಬಂದು) ಓಹೊ! ಬಂದರು. ಬಂದರು ಟೀಚರ್ ಬಂದರು. (ಒಳಗಿನಿಂದ ಟೀಚರ್ ಬರುವರು. ಎಡಗೈಯಲ್ಲಿ ಒಂದು ಪರ್ಸ್, ಬಲಬಗಲಲ್ಲಿ ಒಂದು ಲೇಡೀ ಛತ್ರಿ, ಕಾಲೊಳಗೆ ಅರ್ಧಭೂಟನಂತಿರುವ-ಕಟ್ಟುವ-ಶ್ಯೂಜ್, ಒಂದು ವಿಶಿಷ್ಟ ಬಣ್ಣದ ಸೀರೆ...ಇತ್ಯಾದಿ.)

**ಟೀಚರ್:**—(ಪ್ರವೇಶ) ಎಲ್ಲಾರೂ ಎದ್ದು ನಿಲ್ಲಿರಿ. (ಎಲ್ಲರೂ ಎದ್ದು ನಿಲ್ಲುವರು. ಸುತ್ತಲೂ ನೋಡಿ ಬೆರಗಾಗಿ) ಇದೇನು! ಯಾರೂ ಬಂದೇ ಇಲ್ಲ!.... ಶಾಲೆಗೆ ಬರೋದು ಅಂದರ ಇವರಿಗೆ ಗಂಡನ ಮನೆಗೆ ಹೋದ್ಹಾಂಗ ಆಗತದೆ,.. ಒಳ್ಳೇದು ನಾಳಿನ ಪ್ರಾರಂಭೋತ್ಸವ[illegible]ಯಾರಿ ಎಲ್ಲಿಗೆ ಬಂದಿತು?....ಗೋದಾವರೀ, ಸ್ವಾಗತಗೀತ ತಯಾರು ಮಾಡಿದೇನು? ಹೇಳು ನೋಡುವಾ!

**ಗೋದಾವರಿ:**—ಹೂನ್ರಿ [illegible]ಚರ್—'ತಾಯಿ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೆ!'

**ಟೀಚರ್:**—ಇದೇನೇ—ಧಾಟಿ ನೆಟ್ಟಗೆ ಇಲ್ಲಾ....ಅಲ್ಲಾ, ಇದಕ್ಕೆ ಆ 'ಫ್ಯಾಹೊ ಫ್ಯಾಹೊ.. ಘುಲೇತಾಜಿ' ಅಂಬೂ ಧಾಟಿ ಹಚ್ಚಲಿಕ್ಕೆ ಬರತದೇನೋ [illegible]ೋಡು! ಆ ಧಾಟಿ ಬಹಾಳ ಛಾನ್ ಆಗತದಲ್ಲs?

**ನರ್ಮದಾ:**—ನಮ್ಮ ಬಾಯಿಗೆ ಧಾಟಿಯ ಛಾನಸ್ಥಾನ ಬಹಳ,

**ಟೀಚರ್**:—ಹಾಗಾದರೆ, 'ಪ್ರಿಯ ಆಮುಚೀ ರಾಷ್ಟ್ರಭೂಮಿ' ಅಥವಾ 'ಆಮುಚಾ ಮಹಾರಾಷ್ಟ್ರ ಹಾ'—ಎಂಬ ಹಾಡನ್ನು ತಯಾರುಮಾಡಿರಿ.

**ಗೋದಾವರಿ**:—ಬಾಯಿಾ, ನಾವು ಕನ್ನಡ ಹಾಡು ಹಾಡುವವರು. ಬೇಕಾದರೆ 'ಉದಯವಾಗಲಿ' ಅನ್ನತೇನೆ.

**ಟೀಚರ್**:—ಹಾ, Hold your tongue Godu—ನಮ್ಮ ಶಾಲೆಯಲ್ಲಿ ನೀವು ಕನ್ನಡ-ಮರಾಠೀ ಅಂತ ವಾದ ಹೂಡಬಾರದು. ತಿಳಿಯಿತಿಲ್ಲೋ! ತಮ್ಮ ಹತ್ತರಾದರೋ ಶಾಣಪಣಾ ಕೇಳಬ್ಯಾಡ್ರಿ ...ಸುಳ್ಳೇ ಇಲ್ಲದ ಝಗಳಾ ಮಾಡೋದು!

**ನರ್ಮದಾ**:— (ಮೆಲ್ಲಗೆ ಗೋದೂಗೆ) ಇದೂ ಒಂದು ಸ್ತ್ರೀಶಿಕ್ಷಣದ ಅಡಚಣಿ ನೋಡು. ಕಾವೇರಿ, ಇದೂ ಒಂದು point ತಗೊ!

**ಟೀಚರ್**:—ನಮ್ಮ ಮುಖ್ಯ ಅಧಿತಿಗಳಿಗೆ ಕನ್ನಡ ತಿಳಿಯದಿದ್ದರೆ ಏನು ಮಾಡೋದು....ಆ ಹಾಡು ತಗೊಂಡು? ನೀವು ಅತಿಥಿಗಳನ್ನ ಸ್ವಾಗತಮಾಡತೀರೋ, ನಿಮ್ಮ ಕನ್ನಡ ಹಾಡು ಸ್ವಾಗತಮಾಡತೀರೊ?....ಇನ್ನೂ ಬೇಕಾದರೆ ಹಿಂದೀ ಹಾಡು ಹಾಡಿರಿ; ರಾಷ್ಟ್ರಭಾಷಾ ಆದು!

**ಸಿಂಧು**:—ಬಾಯಿಾ, ಹಾಗಾದರೆ ಸಂಸ್ಕೃತದಲ್ಲಿ ಯಾಕೆ ಹಾಡಬಾರದು? 'ವೇದಾಂತೇಷು ಯಮಾಹುರೇಕ ಪುರುಷಂ, ವ್ಯಾಪ್ಯಸ್ಥಿತಂ ರೋದಸೀ!'

**ಟೀಚರ್**:—ಛಿ.! ಅದೇನು 'ರೋಡಸೀ' ಅಂತ ಕೊನೆಗೆ?

**ನರ್ಮದಾ**:—ಹೌದು, ಮೇಲಿನ ಅಧಿತಿಗಳಿಗೆ ಸಂಸ್ಕೃತ ತಿಳಿಯದಿದ್ದರೆ 'ರೋಡಸೀ'ನೇ ಆದೀತು. (**ಕಾವೇರಿ-ಗೋದೂ ಇಬ್ಬರೂ ತಮ್ಮತಮ್ಮೊಳಗೇ ಕಿವಿಯಲ್ಲಿ ಏನೊ ಮಾತಾಡಿಕೊಳ್ಳುವರು.**)

**ಕಾವೇರಿ: ಗೋದೂ**:—ಬಾಯಿಾ, ನಾವು ಕನ್ನಡ ಹಾಡು ಆದರೇ ಬರುವವರು. (ಟೀಚರ್ ದುರುಗುಟ್ಟುತ್ತ ನಿಲ್ಲುವಳು.)

**ನರ್ಮದಾ**:—ಬಾಯಿಾ, ಅವರು ಚಳವಳಿಯ ಮಂದಿ. ನಾಳಿನಿಂದ ಅವರು ನಾರ್ಯೀ ಪ್ರಚಾರ ನಡೆಸುವವರಿದ್ದಾರ!

**ಟೀಚರ್**:—ನಾಳೆ ಪರೀಕ್ಷೆಯಲ್ಲಿ ತೋರಿಸತೇನೆ ಅವರಿಗೆ ಒಂದು ಕೈ!

**ನರ್ಮದಾ**:—ಬಾಯಿೊ, ಅವರು ಪರೀಕ್ಷೆಯವರೆಗಾದರೂ ಶಾಲೆಗೆ ಬರುವರೋ ಇಲ್ಲೋ ನೋಡಿರಿ!

**ಟೀಚರ್**:—ಯಾಕೆ, ಮದುವೆಯ ನಿಶ್ಚಯ ಆಗಿದೆಯೇನು ?

**ನರ್ಮದಾ**:—ಹೇಳಿದೆನಲ್ಲ ಬಾಯಿ, ನಾಝೀ ಪ್ರಚಾರ ಅಂತ. ನಾಝೀ ನಾಯಕನಂತೆ ಇವರೂ ಆಜನ್ಮ ಬ್ರಹ್ಮಚಾರಿಯಾಗಿರಬೇಕು ಅಂತ ಪ್ರಚಾರ ನಡೆಸುವವರಂತೆ !

**ಟೀಚರ್**:— ಹಾ, Hold your tongue— ಶಾಲೆಯಲ್ಲಿ ಇಂತಹ ಮಾತು ಆಡಬಾರದು.

**ಕಾವೇರಿ**:— ನಾವು ಶಾಲೆಯಲ್ಲಿ ಮಾತನಾದರೂ ಆಡಬೇಕೋ ಬೇಡೋ ಹೇಳಿರಿ. ಬಿನ್ ಇಯತ್ತೆಯಿಂದ ಪ್ರಾರಂಭಮಾಡಿ ಬಿ. ಎ. ದ ವರೆಗೂ ಎಲ್ಲರೂ—ಬಾಯಿಮುಚ್ಚಿರಿ, hold your tongue ಎಂದೇ ಹೇಳುವವರು. ಹಾಗೆಂದೇ ಹೆಂಗಸು ಇಂದು ಇಷ್ಟೊಂದು ಮುಖಹೀನಳಾಗಿದ್ದಾಳೆ. ಹೆಂಗಸಿನ ನಾಲಗೆಗೆ ಮೇಲಿನವರೆಂಬವರೆಲ್ಲಾ ಬೀಗಹಾಕಿದ್ದಾರೆ, ಬೇಡಿ ಹಾಕಿದ್ದಾರೆ.

**ನರ್ಮದಾ**: — ಹೌದು, ಮದುವೆ ಆಗುವವರೆಗೆ ಮಾಸ್ತರರ ಕಟ್ಟಾಯ, ಮದುವೆಯಾದ ಮೇಲೆ ಮಾಡಿಕೊಂಡವರ ಕಟ್ಟಾಯ. ಅಂತೂ ಹಿಂದೂ ಹೆಂಗಳೆಯರಿಗೆ ಹಿಟ್ಲರನ ಆಳಿಕೆ ಬಿಟ್ಟಿದ್ದಲ್ಲ!

**ಟೀಚರ್**:— Hold your tongue ! ಇದು ನೋಡ್ರಿ ಎಲ್ಲರೂ ಶಾಂತಚಿತ್ತತೆಯಿಂದ ಕೇಳಿಕೊಳ್ಳಿರಿ. ನೀವು ಹೀಗೆ ಹುಡುಗತನದಲ್ಲಿ ಭ್ರಮಿಷ್ಟರಂತೆ ಮತ್ತು ಬುದ್ಧಿಗೇಡಿಗಳಂತೆ ಮಾಡೋದು ಶೋಭಿಸೋದಿಲ್ಲ. ಯಾವ ಪ್ರಕಾರ ನಿಮ್ಮ ಪಾಠದಲ್ಲಿ ಮಿಸ್ ನಾಯಿಟಿಂಗೇಲ್ ಇವಳು ಸಮಾಜಸೇವಾ ಮಾಡಿದಳು—ಆ ಪ್ರಕಾರ ನೀವು ಸಮಾಜಸೇವಾ ಮಾಡಬೇಕೂ ಅಂತ ನನ್ನ ಇಚ್ಛೆ ಅದೆ. ಶಕುಂತಲಾನ ಪಾಠ ಓದಿ ನೀವೂ ಗಾಂಧರ್ವವಿವಾಹ ಮಾಡಿಕೊಳ್ಳಲಿಕ್ಕೆ ಸಿದ್ಧರಾಗಬಾರದು. ಹಂಸಕ್ಷೀರ ನ್ಯಾಯದಂತೆ ಯಾವುದುಬೇಕು ಅಷ್ಟೆ ನೀವು ತೆಗೆದುಕೊಳ್ಳಬೇಕು. ನೋಡ್ರಿ, ನಾಳೆ ನಮ್ಮ ಶಾಲೆಯಲ್ಲಿ 'ಸ್ತ್ರೀಪ್ರಗತಿ ಸಂಘ' ಸ್ಥಾಪನಾ ಮಾಡುವವರು ಇದ್ದೀವಿ. ಹೀಗೆ ನಾವು ಒಂದಿಲ್ಲ ಅನೇಕ ಚಟುವಟಿಕೆಗಳನ್ನು ಮಾಡಿ ತೋರಿಸಿದರ, ನಮ್ಮ ಶಾಲೆ ಮುಂದ ಬರತದೆ. ಇನ್‌ಸ್ಪೆಕ್ಟರ್ ಮೊದಲಾದ ಮೇಲಿನ ಅಧಿಕಾರಿಗಳು ಸಂತುಷ್ಟರಾಗತಾರೆ!

**ನರ್ಮದಾ:** —(ಕಾವೇರಿಗೆ) ನಮ್ಮ ಬಾಯಿಯ ಪಗಾರ ಹೆಚ್ಚಿಸತಾರೆ !

**ಕಾವೇರಿ:** — ಇಷ್ಟೇ ಏನು ಸ್ತ್ರೀಶಿಕ್ಷಣದ ಧ್ಯೇಯ ? ..........ನಮ್ಮ ಪ್ರಾರಂಭದ ಭಾಷಣಕ್ಕೆ ಇನ್‌ಸ್ಪೆಕ್ಟರ್ ಯಾಕೆ ? ಇನ್‌ಸ್ಪೆಕ್ಟ್ರೆಸ್ ಯಾಕ ಬೇಡ? ಸ್ತ್ರೀಯರ ಕ್ಷೇತ್ರದಲ್ಲಿ ಪುರುಷರು ಯಾಕ ಕಾಲು ಹಾಕಬೇಕು ?

**ನರ್ಮದಾ:** —ಯಾಕಂದರೆ ಕಾಲವೇ ಹಾಗಿದೆ!

**ಟೀಚರ್.**— ಇಲ್ಲ, ಇನಸ್ಪೆಕ್ಟ್ರೆಸ್ ಅವರೀಗ ರಜೆಯ ಮೇಲಿದ್ದಾರೆ.

**ಸಿಂಧೂ:** — ಮೂರು ತಿಂಗಳ ರಜೆ ಏನ್ರಿ?

**ಕಾವೇರಿ:** — ಹಾಗಾದರೆ ನಮಗೆ ಈ ಶಾಲೆಯೇ ಬೇಡ; ಎಲ್ಲರೂ ನಡೆಯಿರಿ !

**ಟೀಚರ್:**—ನೋಡ್ರಿ, ಯಾರಾವರೂ ಎದ್ದು ಹೋದರೆ ನಿಮ್ಮ ನಿಮ್ಮ ಪಾಲಕರಿಗೆ ರಿಪೋರ್ಟು ಮಾಡುತ್ತೇನೆ.....ಸುಮ್ಮನೆ ಎಲ್ಲರೂ ನಾಳಿನ ತಯಾರಿ ಮಾಡಿರಿ ...ಯಾರಾದರೂ ಒಂದು ಸಣ್ಣ ಸಂಭಾಷಣ ತಯ್ಯಾರ ಮಾಡ್ರಿ ! ಬೇಕಾದರೆ ಗಡಕರಿ ಅವರ ಸಕಾಳಚೆ ಅಭ್ಯಾಸ—ಅದs ನೋಡ್ರಿ. (**ಕಾವೇರಿ ಸಿಟ್ಟಿನಿಂದ ನೋಡುತ್ತ ನಿಲ್ಲುವಳು.**)

(ಇಷ್ಟರಲ್ಲಿಯೆ ಒಬ್ಬ ಸಣ್ಣ ಶಿಪಾಯಿಯು ಪ್ರವೇಶಿಸುವನು.)

**ಸಿಪಾಯಿ:**—(ಸಲಾಂ ಮಾಡಿ) ಬಾಯಿ ರಾವಸಾಬ ಬುಲಾತೇ ಹೈ. ಹುಡಿಗಿ, ಬಹಾಳ ಅಶಾಕ ಹತ್ತೈತಂತ್ರಿ ಅದಕ್ಕ ಕರೀತಾರು. (ಎಲ್ಲ ವಿದ್ಯಾರ್ಥಿಗಳು ಖೊಳ್ಳನೆ ನಗುವರು ) ಹಾಂಗs ಇದೊಂದು ಪತ್ರಾ ಕೊಟ್ಟು ಬಾ ಅಂದಾರ್ರಿ. (ಕೊಡುವನು.)

**ಟೀಚರ್:** —(ಪತ್ರ ಒಡೆದು)....As my husband is unwell I cannot attend the school tomorrow. So please post-pone the inaugural address. ಇದು ನೋಡ್ರಿ ಹೆಡ್ ಮಿಸ್ಟ್ರೆಸ್ ಅವರ ಪತ್ರ. ಸಂಘದ ಪ್ರಾರಂಭೋತ್ಸವವನ್ನು ಮುಂದೆ ಹಾಕಬೇಕಂತೆ !

**ಕಾವೇರಿ**:—ಅದಕ್ಕೇ ನಾನು ಹೇಳುವದು. ಸ್ತ್ರೀ ಪ್ರಗತಿಗೆ ಪ್ರತಿಬಂಧಕಗಳು ಇವೆಲ್ಲಾ ಅಂತೆ, ಸ್ತ್ರೀಯಳು ಅವಿವಾಹಿತಳಾಗದ ಹೊರತು ಗತ್ಯಂತರವೇ ಇಲ್ಲ!

**ಸಿಪಾಯಿ**:—(ಒಳಗೆ ಹೋಗಿ ಮತ್ತೆ ಪ್ರವೇಶಿಸಿ) ಬಾಯಿಸಾಹೇಬ, ಹೊರಗೆ ಯಾರೋ ನಿಂತಾರ್ರಿ!

**ಟೀಚರ್**:—ಗಂಡಸರೊ ಹೆಂಗಸರೋ?

**ಸಿಪಾಯಿ**:—ವೋ ಬುಡ್ಡಾ ಹೈ ಬಾಯಿಸಾಬ್!

**ಕಾವೇರಿ**:—ಯೇ, ಗಂಡಸರನ್ನ ಯಾರನ್ನೂ ಒಳಗೆ ಬಿಡಬೇಡ!

**ಟೀಚರ್**:—ಇರಲಿ! ಗಾರ್ಡಿಯನ್ ಬಂದಾಗ ಹಾಗೆ ಮಾಡಬಾರದು. (ಸಿಪಾಯಿಗೆ) ಕರೆ ಅವರನ್ನು ಒಳಗೆ!

(ಒಬ್ಬ ಗೃಹಸ್ಥನು ಬರುವನು ಸಾಧಾರಣ ೫೫ ವಯಸ್ಸಿನವ. ಸಾಮಾನ್ಯ ತರಗತಿಯ ವೇಷ ನೋಡಲೇನೊ ಸನಾತನ ಬ್ರಾಹ್ಮಣನಂತೆ ಕಾಣುತ್ತಾನೆ)

**ಗೃಹಸ್ಥ**:—(ನಮಸ್ಕರಿಸಿ) ಹ—ಹ—ನಾನೇಳ್ರಿ, ನಮ್ಮ ಹುಡುಗಿ ಕಾವೇರಿನ್ನ ಕರೀಲಿಕ್ಕೆ ಬಂದಿದ್ದೆ. (ಕಾವೇರಿಯನ್ನು ಉದ್ದೇಶಿಸಿ) ಕಾವ್ರ, ನಡಿಯವ್ವಾ! ನಡೀ! ಇವೊತ್ತು ಬ್ಯಾಡಾ ಅಂದರೂ ಬಂದಿಯೇನು. ಹೂ. ಇರ್ಲಿ ನಡಿನಡಿ! ಅಲ್ಲೆ ಅವರು ನೋಡಲಿಕ್ಕೆ ಬಂದು ಕೂತಾರ! ನೀನಿಲ್ಲೆ ಸಾಲೆಗೆ ಬಂದು ಕೂತೀದಿ. (ಟೀಚರಿಗೆ) ಬಾಯಿಸಾ, ಇವತ್ತು ಸ್ವಲ್ಪ ನಮ್ಮ ಹುಡಿಗೀನ್ನ ಕಳಿಸಿ ಕೊಡ್ರಿ ಅಕೆನ್ನ ನೋಡಲಿಕ್ಕೆ ಬಂದಾರ!

**ಎಲ್ಲರೂ**:—(ಚಪ್ಪಾಳೆತಟ್ಟಿ) Congratulations ಕಾವೇರಿ! ಎಂದು ಹೋಳಿಗಿ?

**ನರ್ಮದಾ**:—ಎಲ್ಲಿ ಹೋಯಿತು ನಿನ್ನ ನಾಝುಃ ಪ್ರಚಾರ?

(ಕಾವೇರಿ ಸುಮ್ಮನೆ ತಲೆ ಕೆಳಗೆ ಹಾಕುವಳು. ಅತ್ತಿತ್ತ ನೋಡಿ, ಬಲಿಯೊಳಗೆ ಸಿಕ್ಕ ಹುಲಿಯಂತೆ ಗತ್ಯಂತರವಿಲ್ಲದೆ ನಿಸ್ಸಹಾಯಳಾಗಿ ನಿಲ್ಲುವಳು.)

**ಗೃಹಸ್ಥ**:— ಹ-ಹ-ಹ! ಏನೊ ಅಕೀ ಬಾಸಿಂಗ ಬಲಾ ಒದಗಿ ಬಂದಿದ್ದರ ಹೋಳಗೀನೂ ಸಿಗಬಹುದು ನಿಮಗ! (ಟೀಚರಿಗೆ) ಬರತೇನ್ರಿ

ರಾಯರ, ಅಲ್ಲ ಬಾಯಿ—ಹ-ಹ-ಹ! ಮುಪ್ಪಿನಲ್ಲಿ ಮರವು!....ಒಮ್ಮೊಮ್ಮೆ ಭಾಗ್ಯ ಹಾರತ್ಕದ! ಆಗ್ಲಿ ಮಾಸ್ತರ್—ಭೂ, ಬಾಯೊ! ನಮಸ್ಕಾರ! ಏನೋ ನಿಮ್ಮ ಆಶೀರ್ವಾದ ಇದ್ದರ, ನಮ್ಮ ಹುಡಿಗಿಯ ಅಕ್ಕೀಕಾಳು ಹಾಕಬೇಕೂ ಅಂತೇನಿ. ಅಕೀದೊಂದು ಮದಿವೀ ಮಾಡಿದೆ ಅಂದರ, ನನ್ನ ಕೆಲಸ ಗೆದ್ದಂತೆ ಆಯಿತು........ಹುಡಗನೂ ಛಲೋ ಇದ್ದಾನೇನ್ರಿ. ಉತ್ಸನ್ಮೂ ನೆಟ್ಟಗದ! ಕಲಿತಾಕೀ ಅಂದಮ್ಯಾಲೆ ವಿಶೇಷ ವರದಕ್ಷಿಣೀ ಕೇಳಲಿಕ್ಕಿಲ್ಲಾ. ಆತನೂ ಕಲಿತವನೇ ಇದ್ದಾನೇನ್ರಿ....ಹ-ಹ! ಬರತೇನ್ರಿ ರಾಯರ, ಅಲ್ಲ ಬಾಯಿಾ ಹಾಂಗಾದರ!

**ಟೀಚರ್**:— (ನಗುತ್ತ ನಮಸ್ಕರಿಸಿ) ಒಳ್ಳೇದು ನಿಮ್ಮ ಮಗಳಿಗೆ ಬಾಸಿಂಗದ ಲಗಾಮು ಮಾತ್ರ ಜೋಗಸೆ ಹಾಕರಿ!

**ಗೃಹಸ್ಥ**:—(ಚಿಟ್ಕಿ ತಟ್ಟಿ, ಕುಪ್ಪ, ನಡಿಯುತ್ತಾ (**ಮುಂದೆ ಹಾಕಿಕೊಂಡು ಹೋಗುವಾಗ**)

**ಎಲ್ಲರೂ**:-(ಹಿಂದಿನಿಂದ) Congratulations ಕಾವೇರಿ! Three cheers for the prospectives wife! ಹಿಪ್, ಹಿಪ್—ಹುರೆ!

—**ತೆರೆ**

ರಲ್ಲಿಯೂ ಸ್ವಲ್ಪ ಪಿತ್ತದ ಪ್ರಕೃತಿ. ಆದರೊಳಗ ಬಗಲೊಳಗ ಎರಡು ಕೊಡ, ತಲೆಯ ಮೇಲೆ ಎರಡು ಕೊಡ. ತಲೆಗೆ ಚಕ್ರ ಬರುವದೂ ಸ್ವಾಭಾವಿಕ. (ಧ್ಯಾನ ಮಗ್ನನಾಗಿ) ಹೇ ಚಕ್ರಪಾಣಿ, ಅಂತೂ ಈ ಭಕ್ತನನ್ನು ಕಾಪಾಡಿದೆ! ........ಆಂ? ಹೂಂ. ಹೂಂ. ಬಳಿದು ಚೆಲ್ಲತ್ತೇನೆ........ಆದರೆ ಉಡಸಾರಣೆ ಅರಿವಿ ಮಡಿಯು ಕಡೆ ಇಲ್ಲವಲ್ಲ. ಏನು? ದೇವರ ವಸ್ತ್ರದಿಂದ?........ಹ-ಹ. ಅಬ್ರಹ್ಮಣ್ಯಂ!....ಪಂಜೆಯಿಂದ ಅಂದೆಯಾ! ಆದರೆ ಪಂಜೆ ಒಂದೇ ಇದೆ. ಉಟ್ಟು ಕೊಂಡದ್ದೇ ಒಂದು. (ಗಾಬರಿಯಾಗಿ) ಆಂ! ಇಂಗಿಹೋಗೋದರೊಳಗೇ ಹಿಂಡಿ ಚೆಲ್ಲಬೇಕೆ. ಅಲ್ಲಾ, ಇಂಗಿ ಹೋದರೆ ಮುಗಿದೇ ಹೋಯಿತಲ್ಲಾ....ಎಷ್ಟು ಬೇಗ ಇಂಗಿತೊ! ಮತ್ತೆ, ಮಾತಿನ ಝುಳ ಎಂತಹದು........ ಏನು? ಝುಳ ಝುಳ ಮಾತಾಡಬೇಕೆ? ಅಲ್ಲಾ, ಮಾತಿನ ಝುಳಾ ಅಂದೆ. ಅಲ್ಲಲ್ಲಾ, ಅಡಿಗೆಯ ಒಲಿಯು ಕಾವು, ಆ ಕಾವಿಗೆ ಆರಿರಬೇಕು ಅಂತ........ ನೀರು ಇಂಗಿದರೆ ನೆಲಾ ಉಬ್ಬಿತ?... ಬರೋಬರಿ, ಉಬ್ಬಲೇಬೇಕು. ಗಂಗಾ ಪ್ರವೇಶ ಮಾಡಿದ ಮೇಲೆ ಪೃಥ್ವೀದೇವಿಗೆ ಆನಂದ ಆಗದೇ ಇದ್ದೀತೆ? .... ಆಂ! ನೆಲದ ಹಕ್ಕಳಿ ಕೆತ್ತಿ ಸಾರಿಸಬೇಕ? ಆಗಲಿ. ಸಾರಿಸತೇನಿ....ಊಟಕ್ಕೆ ಎಲೆ ಎಲ್ಲಿ ಹಾಕಬೇಕ!....ಬೇಕಾದರೆ ಇಲ್ಲಿಯೇ ಹಾಕಬಹುದು. ಮುಸುರೆಯಾದರೆ ಬೇಕಾದರೆ ಪಡಸಾಲೆಯಲ್ಲಿ. (ಮತ್ತೆ ಕಿವಿಗೊಟ್ಟು ಕೇಳಿ) ಊಟಕ್ಕೆ ಎಲೆ ಇಲ್ಲ! ನನಗೆ ಕೇಳಿಸಿತು. ಊಟಕ್ಕೆ ಎಲೆ ಎಲ್ಲಿ ಅಂತ!........ ಆಗಲಿ ನೈವೇದ್ಯ, ಇಷ್ಟು ಎಲೆ ತರತೇನೆ....... ನೈವೇದ್ಯ ಇಡಲಿಕ್ಕೆ ಅಡಿಗೇನೆ ಆಗಿಲ್ವೆ? ಆಗಲಿ!........ಸಾವಕಾಶ ಆಗಲಿ!........ಆಂ! ಹೇಗೆ ಆಗಬೇಕು? ಯಾಕೆ? ಒಗ್ಗರಣೆಗೆ ಎಣ್ಣೆ ಇಲ್ಲ, ಕಾಳು ಇಲ್ಲವೆ? ........ಸಾಗಲಿ, ಒಗ್ಗರಣೆ ಇಲ್ಲದೆ ಸಾಗಲಿ. ಇಲ್ಲದ್ದಕ್ಕೆಲ್ಲಾ ಮಮ ಅಂದರಾಯಿತು...............ಬೇಳೇನೆ [illegible]ಎಲ್ಲ!s........... ಥೂ! ಈ ಎ. ಆರ್. ಪಿ. ಅಂತ ಕಿವಿಯೊಳಗೆ ಬೊಟ್ಟು ಇಟ್ಟೂ ಇಟ್ಟೂ ಯಾರು ಏನಂದದ್ದೂ ಕೇಳಿಸದಂತೇ ಆಗಿದೆ; ಡಬ್ಬು ಬಿದ್ದೂ ಬಿದ್ದೂ ಕಂಡವರಿಗೆಲ್ಲಾ ಪ್ರಮಾಣಮಾಡುವ ದಡ್ಡು ಬಿದ್ದು ಹೋಗಿದೆ........ಬೇಳೇನೂ ಒಂದಿಲ್ಲಾ ಅಂತ ನೀನು ಅಂದಿಯಾ? ನನಗೆ ಕೇಳಿಸಿತು-ಬೇಳೇನೂ ಬೆಂದಿಲ್ಲಾ ಅಂತ....ಸರಿ. ತೊಗರಿಬೇಳೆ ಇರದಿದ್ರೆ ಹೆಸರಬೇಳೆಯ ಸಾರೂ ನಡೆಯಬಹುದು....ಮತ್ತೇನು ಹುಳಿ ಇಲ್ಲದಿದ್ದರೆ

ನಿಂಬೇಹಣ್ಣು, ಅರಿಷಣ ಇಲ್ಲದಿದ್ದರೆ ಇಲ್ಲೇ ಇಲ್ಲ!....ಒಳ್ಳೇ ಎಣ್ಣೆ!.... ಅಲ್ಲಾ ಚಿಮಣಿ ಎಣ್ಣೆ ಇಲ್ಲಾ ಅಂದರೆ 'ಬ್ಲ್ಯಾಕ್ ಔಟ್' ಅಂತ ಪ್ರಶ್ನೆ ಬಗೆ ಹರಿಸಬಹುದು. ಒಳ್ಳೇ ಎಣ್ಣೆ ಇಲ್ಲಾ ಅಂದರೆ! ಒಳ್ಳೇ ಎಣ್ಣೆ ಇಲ್ಲದಿದ್ದರೆ ಘೃತ ಇದೆಯಲ್ಲ....ನಂದಾದೀಪಕ್ಕೆ ಎಣ್ಣೆಯೇ? ಹೇಳಿದೆನಲ್ಲಾ 'ಬ್ಲ್ಯಾಕ್ ಔಟ್' ಅಂತ. ದೇವರಿಗೂ ಬ್ಲ್ಯಾಕ್ ಔಟ್ಟೇ, ಮತ್ತೆ ಮಾಡಬೇಕೇನು?.... ದೇವರು ಕತ್ತಲೆಯೊಳಗ ಏನು ಮಾಡಬೇಕ?....ಬೆಳಕಿನೊಳಗೆ ಇದ್ದು ಮಾಡಿದ್ದಾದರೂ ಅಷ್ಟರೊಳಗೇ. ಹೋಗಲಿ, ಸ್ವಯಂಪ್ರಕಾಶವುಳ್ಳ ಆ ಪರಮಾತ್ಮ ನಿಗೆ ನಂದಾದೀಪ ಯಾಕೆ ಮತ್ತೆ!. ಮತ್ತೂ ಅದೇ ಹಾಳು ಮಾತು! ದೀಪ ಹಚ್ಚಿದರೆ ಐವತ್ತು ರೂಪಾಯಿ ದಂಡ ಅಂತ ಕೇಳಲಿಲ್ಲೇನು ? ಜಗತ್ತಿನ ವ್ಯವ ಹಾರವೆಲ್ಲಾ ಇನ್ನು ಕತ್ತಲೆಯೊಳಗೇ ಸಾಗತಕ್ಕದ್ದು, ಅಜ್ಞಾನದ ಕತ್ತಲೆ ಯೊಳಗೆ....ಬರಗಾಲ ಅಲ್ಲಿದು, ಇದು ಪ್ರಳಯಕಾಲ. ನಾನೂ ಎಷ್ಟೋ ಬರ ಗಳನ್ನು ಕೇಳಿದ್ದೇನೆ, ನೋಡಿದ್ದೇನೆ. ಆದರೆ ಈ ಬರದ ಬಣ್ಣವೇ ಬೇರೆ ಇದೆ....ಯಾಕಷ್ಟು ಕೂಗಿಕೊಳ್ಳುತಿಯೆ! ಸ್ವಲ್ಪ ಪೂರ್ಣವಿರಾಮ ಆದರೂ ಕೊಟ್ಟು ಮಾತನಾಡಲ್ಲ! (ಕಿವಿಯೊಳಗೆ ಬೊಟ್ಟಿಟ್ಟುಕೊಂಡು) ಆಯಿತು ಕಿವಿ ಯೊಳಗೆ ಬೊಟ್ಟು ಇಟ್ಟುಕೊಳ್ಳಲಿಕ್ಕೆ ಸರಕಾರವೇ ಕಲಿಸಿದೆ ಇದೂ ಒಂದು ಒಳ್ಳೇ ಔಷಧ. ವಿಮಾನ ದಾಳಿಗಿಂತ ಮೊದಲು ಈ ಮನೆಯ ದಾಳಿಗಾಗಿಯೆ ಎ. ಆರ್. ಪಿ. ಕೈಕೊಳ್ಳತಕ್ಕದ್ದು .. (ಒಳಗಿನಿಂದ—'ಒಂದು ಎಣ್ಣೆಯುಂಟೆ? ಒಂದು ಬೆಣ್ಣೆಯುಂಟೆ ? ಕಾಳುಂಟೆ ? ಕಡಿಯುಂಟೆ ? ದವಸವುಂಟೆ ? ಧಾನ್ಯ ವುಂಟೆ ? ತಿನಿಸೆ, ಉಣಿಸೆ, ಒಂದಾದರೂ ಜೀನಸೆ, ಹಾಲೇ, ಮೊಸರೆ,........ ಅಯ್ಯೋ, ಬಾಳ್ವೆ! ಯಾತಕಾಗಿದ್ದೀರಿ ಗಂಡಸು ? ಅಡಿಗೆ ಮನೆಯಲ್ಲಿ ಮೂಗು ಹಿಡಿದುಕೊಂಡು ಕೂಡೋವಕ್ಕಿಂತ ಕೈಯಲ್ಲಿ ಖಡ್ಗ ಹಿಡಿದುಕೊಂಡು'........ ಇತ್ಯಾದಿ ವಾಗ್ಬಾಣಗಳು ಕರ್ಣಪಟಲವನ್ನು ಭೇದಿಸುತ್ತಿರಲು-ಆಚಾರ್ಯರು ಗಟ್ಟಿಯಾಗಿ ಕಣ್ಣು ಕಿವಿ ಮುಚ್ಚಿಕೊಂಡು) ಕಾಜಿನ ಕಿಟಕಿಗಳಿದ್ದರೂ ಮುಚ್ಚಿರಿ, ಜೇಡುಗಿಂಡಿಗಳಿದ್ದರೆ ಭದ್ರಪಡಿಸಿರಿ. ಎರಡೂ ಕೈಗಳಿಂದ ಕಿವಿ ಮುಚ್ಚಿಕೊಂಡು ಡಬ್ಬು ಬೀಳಿರಿ. (ಹಾಗೇ ಅಭಿನಯಿಸುತ್ತ) ಆಯಿತು ನಮ್ಮ ಎ. ಆರ್. ಪಿ. ಇನ್ನು ಬೇಕಾದಷ್ಟು ದಾಳಿ ಬರಲಿ. (ಡಬ್ಬು ಮಲಗಿಕೊಂಡು ದೇವರ ಮನೆಯ ಬಾಗಿಲವನ್ನೂ ಮುಚ್ಚುವರು.)

---

# ಸತಿವ್ರತ ಸಿರೋಮಣಿ!

●

ಪಾತ್ರಗಳು

**ನಳಸಿಂಹ**:— ಮಾಟ್ರಿಕ್ ಪಾಸಾಗಿ ಪಾಕಶಾಸ್ತ್ರ ಸಿರೋಮಣಿಯಾದ ಪತಿ ಪರಮೇಷ್ಠಿ, ಆಧುನಿಕ ಆದರ್ಶ ಗೃಹಸ್ಥ.

**ದುರ್ಗಾದೇವಿ**:— ನಳಸಿಂಹನ ಸಿಂಹಿಣಿ, ಬಿ. ಎ., ಬಿ. ಟಿ. ಆದ ಹೆಡ್ ಮಿಸ್ಟ್ರೆಸ್ !

**ಶ್ರೀಪತಿ**:—ನಳಸಿಂಹನ ಬಾಲ್ಯದ ಗೆಳೆಯ, ಒಬ್ಬ ಸ್ಟೇಷನರಿ ವ್ಯಾಪಾರಸ್ಥ.

**ಶ್ರೀಮತಿ ವಿಾರಾ-ಮೇರಿ**:—ದುರ್ಗಾದೇವಿಯ ಸಹೋದ್ಯೋಗಿನಿ.

**ಪ್ರೊಫೆಸರ ಕೆ. ಪರಮೇಶ್ವರನ್**:— ಉಪನ್ಯಾಸಕ್ಕೆಂದು ಬಂದ ಒಬ್ಬ ಮಾನಸ ಶಾಸ್ತ್ರಜ್ಞರು.

●

[ಸ್ಥಳ: —ನಳಸಿಂಹನ, ಅಲ್ಲಲ್ಲ, ದುರ್ಗಾದೇವಿಯ ಪಡಸಾಲೆ- ಅಪ್-ಟು-ಡೇಟ್ ಸಿಸ್ಟಿನಮು. ನಳಸಿಂದ ಅಳುತ್ತಿರುವ ಮಗುವನ್ನು ಲಾಲಿಸುತ್ತ 'ಫರನೀಚರ' ಎಲ್ಲಾ ಸ್ವಚ್ಛಮಾಡುತ್ತಿರುವನು]

**ನಳಸಿಂಹ**:— ( ಹೆಂಡತಿಯ ಫೋಟೊ ತೆಗೆದುಕೊಂಡು, ತನ್ನಪ್ಪಕ್ಕೆ ಯಾವುದೊ ಥಾಟಯಲ್ಲಿ) 'ದೇವಿ ನೀನ್ನ ದಾಸ ನಾನು ನೀನೇ ದೇವತಾ ನಾ ಸತಿವ್ರತ'.......(ನಮಸ್ಕರಿಸಿ ಮೇಜಿನಮೇಲಿಟ್ಟು ಒಂದು ಮಾಲೆ ಹಾಕುವನು. ಅಳುತ್ತಿರುವ ಮಗುವನ್ನ ಮತ್ತೆ ರಮಿಸುತ್ತ) ಯಾಕೆ ಮಗೂ, ಯಾಕೆ ಮಗೂ, ನಿನಗೆ ಹಾಲುಣಿಸುವುದೊಂದೇ ಪಂಚೇತಿ ಬರುತ್ತದಪ್ಪಾ. ಹೊಯ್‌ಹಾಲು ಹಾಕಿದರೆ, ಅವಿನದು ನೊರೆಹಾಲನೊಲ್ಲೆನು' ಅಂತ ಅಳತೀ. (ಗಿಲ್‌ಗಿಲ್ ಎಂದು

ಸಪ್ಪಳಮಾಡುವ ಒಂದು ಕಪ್ಪುರದ ಗೊಂಬೆ ತೋರಿಸುತ್ತ) ಅಬಬ! ನೋಡೋ ಇದು ಮಜಾಗಾಟಾ! (ಒಳಗಿನಿಂದ-ಮಿಸೆಸ್ ದುರ್ಗಾದೇವಿ, ಎಂಬ ಕೂಗು)

**ನಳಸಿಂಹ:**— (ನಸುನಾಚುತ್ತ ತ್ವರಿತದಿಂದ) ಆಂ? (ಒಲಿಯುತ್ತ ತೂನೆಯುತ್ತ) ಬನ್ನಿರಿ, ಬನ್ನಿರಿ. (ಸ್ವಗತ) ಅಯ್ಯೋ ಇವರು ಮನೆಯಲ್ಲೇ ಇಲ್ಲಲ್ಲ ಹ್ಯಾಗೆ ಮಾಡಲಿ?

(ಮಿಸೆಸ್ ಮೀರಾ-ಮೋರೆ ಪ್ರವೇಶಿಸುತ್ತ)

**ಮೀರಾ-ಮೋರಿ:**— ಇಲ್ಲವೇನೂ ದುರ್ಗಾದೇವಿಯವರು?

**ನಳಸಿಂಹ:**— ಇಲ್ಲವಲ್ಲ?

**ಮೀರಾ-ಮೋರಿ:**— ಹಾಗಾದರೆ-ಬಂದ ಕೂಡಲೆ ಸಭೆಗೆ ಕಳುಹಿಸಿ ಕೊಡಿರಿ. ನಾನು ಮುಂದೆ ಹೋಗಿರುವೆ ಅಂತ ತಿಳಿಸಿರಿ.

**ನಳಸಿಂಹ:**— ಓಹೋ, ಆಗಲಿ. (ಅವರು ಹೋಗುತ್ತಲೆ ಮತ್ತೆ 'ಏಕಹೋತಾ ರಾಜಾ! ಏಕಹೋತಿ ರಾಣಿ!' ಎಂದು ಹಾಡುತ್ತ-ಕೂಸನ್ನು ರಮಿಸುತ್ತ) ಯಾಕೊ ನನ್ನ ರಾಜಾ............

(ಮತ್ತೆ ಹೊರಗಿನಿಂದ 'ದುರ್ಗಾದೇವಿಯವರೇ' ಎಂದು ೨-೩ ಸಲ ಕೂಗು)

**ನಳಸಿಂಹ:**— ಎಲ! ಎನಪ ಇದು. ಅವರು ಮನೆಯಲ್ಲಿಲ್ಲದಾಗೇನೇ ಇಷ್ಟು ಜನ ಬರತಾರಲ್ಲ! ಪರಸತಿಯರ ಜೋಡಿ ಹ್ಯಾಗೆ ಮಾತಾಡಬೇಕು!

(ಶ್ರೀಪತಿ ಪ್ರವೇಶಿಸುವನು)

**ಶ್ರೀಪತಿ:**— (ನಳಸಿಂಹನನ್ನು ನೋಡಿ, ಆಶ್ಚರ್ಯದಿಂದ) ಎಲ ಸಿಂಹಾ! ಇಲ್ಲಿ ಯಾಕೊ ನರಸ್ಯಾ ನೀನು?

**ನಳಸಿಂಹ:**— ಓಹೋ! ಯಾರು ಶ್ರೀಪತಿ? ಬಾ, ಬಾ. ಕೂಡಬಾ.

**ಶ್ರೀಪತಿ.**— ಅಲ್ಲೊ, ನರಸಿಂಹ, ಏನಿದು ವಿಚಿತ್ರಾ? ನಾಲ್ಕೈದು ವರುಷ ಆಯಿತಲ್ಲ ನಾವೂ ನೀವೂ ಬೆಟ್ಟಿಯಾಗದೆ? ಏನು ನೌಕರಿ ಮಾಡತೀಯಪ ಈಗ?........ ...ಅಲ್ಲಾ ಇಲ್ಲಿ ಹ್ಯಾಂಗ ಬಂದಿ ಪ್ರಮಿಳಾ ರಾಜ್ಯದೊಳಗ? ಅಲ್ಲಾ, ಏನು ಕೆಲಸ ಇಲ್ಲಿ? ಇದೇನು ಬಗಲೊಳಗ ಕೂಸಿನ್ನೇನು ಎತ್ತೀದಿ? ವಿರಾಟ ನಗರದೊಳಗಿನ ಬೃಹನ್ನಳೆ ಕಂಡಂತೆ ಕಾಣತೀಯಲ್ಲೋ?

**ನಳಸಿಂಹ:**—ಬೃಹನ್ನಳೆ ಅಲ್ಲೊ, ಬೃಹನ್ನಳ—ಯಾಕಂದರ ನಾನೀಗ ಬೃಹತ್ ನಳಸಿಂಹ, ನರಸಿಂಹ ಅಲ್ಲ.

**ಶ್ರೀಪತಿ:**—ಅಂತೀಯಾರೆ ಏನೂ ನರಸಿಂಹಾ? ಅಲ್ಲಾ, ನಾನು ನಮ್ಮ ಅಂಗಡಿ ಬಿಲ್ ಕೇಳಿ ಹೋಗಬೇಕು ಅಂತ ಬಂದರ ಇದು ನೋಡು—ಅಲ್ಲಾ ಇಷ್ಟು ದಿವಸ ನೋಡೆ ಇಲ್ಲಲ್ಲ ಮತ್ತೆ?

**ನಳಸಿಂಹ:**— ಹ್ಯಾಗೆ ನೋಡಬೇಕು, ಮನೆಯೊಳಗ ಹೆಂಗಸರು ಇದ್ದಾಗ ಬಂದರೆ.

**ಶ್ರೀಪತಿ:**— ಹೌದು, ಹಗಲೆಲ್ಲಾ ನಮ್ಮ ಆಳು ಮನಶ್ಯಾನ ಬರತಿರತಾನ. ಆದರೆ ಈಸಲ ನಿಟಿಂಗ ವರ್ಕದೊಳಗ ಕೆಲಕೆಲವು ಹೊಸ ನಮೂನೆ ತರಿಸಿದ್ದೆ. ಅದಕ್ಕ ತೋರಿಸಬೇಕು ಅಂತ ಬಂದಿದ್ದೆ.

**ನಳಸಿಂಹ:**— ಅಂತೂ ವ್ಯಾಪಾರ ಬೇರೆ ನಡಿಸಿಯೇನೂ?

**ಶ್ರೀಪತಿ:**— ಏನು ಮಹಾ ವ್ಯಾಪ್ಯಾರೊ; ಹೆಣಮಕ್ಕಳಿಗೆ ಟೊಪ್ಪಿಗೆ ಹಾಕೂ ವ್ಯವಹಾರಾ.

**ನಳಸಿಂಹ:**— ಅಡ್ಡಿಯಿಲ್ಲ, ಇನ್ನು ಮೇಲಿಂದ ಹೆಣ್ಣುಮಕ್ಕಳೂ ಟೊಪ್ಪಿಗೆ ಧರಿಸಲಿಕ್ಕೆ ಅಡ್ಡಿಯಿಲ್ಲ.

**ಶ್ರೀಪತಿ:**— ಅವರಿಗ್ಯಾಕೆ ಟೊಪ್ಪಿಗೆ ಹಾಕತೀಯೋ ಮಾರಾಯಾ? ಅವರು ತಲೆ ತೆಗೆದು ಓಡಾಡಿದರೇ ನಮಗೇನೊ ಸ್ವಲ್ಪ ಫಾಯಿದೆ. ನೂರಾ ಯೆಂಟು ಫ್ಯಾನ್ಸಿ ಮಾಲು ತರಿಸಿ ಸೆಂಟಪರಸಂಟ ಫಾಯಿದೇ ವ್ಯಾಲೆ ಮಾರಾಟ ಮಾಡಲಿಕ್ಕೆ ಬರತದ........ಅದಿಲ್ಯೋ, ಸದ್ಯಕ್ಕೆ ನಿನ್ನದೇನು ಹಕೀಕತ್ತೋ!

**ನಳಸಿಂಹ:**— ನಿನಗೆ ಕೇಳುವಷ್ಟು ತಾಳ್ಮೆ, ಕೂಡುವಷ್ಟು ವೇಳ್ಯೆ ಅದಯಿಲ್ಲೊ?

**ಶ್ರೀಪತಿ:**— ಸುರುವಂಽೂ ಮಾಡು ನೀ.

**ನಳಸಿಂಹ:**—ಪುರುಷನಿಗೆ ಒಲಿಯದ ಕಲೆಯಿಲ್ಲ, ಅನ್ನೋದಕ್ಕೆ ಇದು ನೋಡು ಸಾಕ್ಷಿ, ಈ ಕೂಸು ಅಲ್ಲ, ನಾನು-ಅಂದರೆ ನರಸಿಂಹನಿದ್ದವನು ನಳಸಿಂಹನಾದೆ-ಪುರುಷ ಪ್ರಯತ್ನ ತನ್ನ ಸಂಶೋಧನದ ಕೈ ಚಾಚದ ಕ್ಷೇತ್ರ ಒಂದಾದರೂ ಉಳಿದಿದೆಯೇ ಅಂತ ವಿಚಾರಿಸಿದೆ. ಇದೇ ಒಂದು ಸಿಕ್ಕಿತು, ಇದರಲ್ಲಿಯೇ ಪರಿಣತಿ ಹೊಂದಿ ಪಾಕವಿಶಾರದನಾದೆ. ಕವಿಗಳು ನವರಸ ಲೀಲೆಯಲ್ಲಿ ನವೀನ ಸೃಷ್ಟಿಯನ್ನು ಮಾಡಿದರೆ, ಇದು ನೋಡು ಷಡ್ರಸಗಳಲ್ಲಿ ಆವಿಷ್ಕೀಷನ ಸಾವಿರ ಸಾಲಗೆಗಳನು ಸೀರು ಬಿಡಿಸಿ ಬಿಡುವೆ.

**ಶ್ರೀಪತಿ**:— ಅಂತೂಯೇನು ಅಡಗಿಯುವ ಆಗಿ ಇಲ್ಲಿ ನಿಂತ್ಯಾ ಉದ್ಯೋಗಕ್ಕ ?

**ನಳಸಿಂಹ**:— ಉದ್ಯೋಗಕ್ಕ ಅಲ್ಲಾ ಸಂಸಾರಕ್ಕ. ಇನ್ನೂ ಕೇಳು ನನ್ನ ಬೃಹತ್ ಕಥಾ.

**ಶ್ರೀಪತಿ**:— ಅಂದರೆ? ನಿನಗೂ ದುರ್ಗಾದೇವಿಯವರಿಗೂ ಏನಾದರೂ............

**ನಳಸಿಂಹ**:— ಹೇಳಿದೆನಲ್ಲೊ, ಅವರು ನನ್ನ ಸತಿದೇವಿ, ನಾನು ಅವರ ಆದರ್ಶ ಗೃಹಸ್ಥ.

**ಶ್ರೀಪತಿ**:— ಯೇ, ಏನ್ಮಾತಾಡತಿ? ಕೈಯೊಳಗೇನು ಬಳಿ ಹಾಕಿಯೇನು?

**ನಳಸಿಂಹ**:— ಸ್ವಲ್ಪ ವಿಚಾರನಾದರೂ ಮಾಡೊ. ಕೈಯೊಳಗ ಬಳಿ ಹಾಕಿಲ್ಲ. ನನ್ನ ಮುಂಗೈ ತ್ರಾಣದಿಂದ ಸೃಷ್ಟಿಯನ್ನೇ ತಲೆಕೆಳಗ ಮಾಡೀನಿ. ಈ ಧೈರ್ಯ ಗಂಡಸಿಗೇ, ನನ್ನಂತಹ ಗಂಡಸಿಗಲ್ಲದೆ ಮತ್ತ್ಯಾರಿಗೆ ಸಾಧ್ಯಾನೋ? ............ಇಲ್ಲಿ ಕೇಳು, ಏನೊ ಒಂದು ಸವಿಗನಸಿನಲ್ಲಿ ಸುಶಿಕ್ಷಿತ ವಧುವನ್ನು ಮದುವೆಯಾದೆ. ನನ್ನ ಬಾಗ್ಯ. ಸೌಭಾಗ್ಯಕ್ಕ ನಾನೂ ಪಾಸಾದೆ. ಅಷ್ಟರಲ್ಲೇ ನನ್ನ ತಂದೆತಾಯ್ಗಳು ಇಹಲೋಕದಿಂದ ನಿವೃತ್ತರಾದರು. ಸಂಸಾರದ ಭಾರ ನನ್ನ ಮೇಲೆ ಬಿದ್ದಿತು. ನನ್ನ ತಂದೆಯ ಆಸ್ತಿ ಅಂದರೆ ಒಂದು ಸಾವಿರ ರೂಪಾಯಿ ಇದ್ದಿತು. ಮುಂದೆ ಮಾಡಬೇಕೇನು, ವಿಚಾರಿಸಿದೆ. ಈ ಸಾವಿರ ರೂಪಾಯಿಯಲ್ಲಿ ನಾನೊಬ್ಬ ಗ್ರ್ಯಾಜುಯೇಟ ಅಗಬಹುದು ಅಂತ ವಿಚಾರಿಸಿದೆ. ಆದರೆ ಗ್ರ್ಯಾಜುಯೇಟ ಆದರೂ ನಿರುದ್ಯೋಗ ಪರ್ವ ತಪ್ಪಿಸುವ ಬಗೆ ಹ್ಯಾಗೆ? ಅಂತೇ ವಿಚಾರಮಾಡಿದೆ. ನಾನು ಗ್ರ್ಯಾಜುಯೆಟ ಆಗೋದಕ್ಕಿಂತ ನನ್ನವಳು ಗ್ರ್ಯಾಜುಯೇಟ ಆದರೆ ಎಷ್ಟು ಫಾಯಿದೆ? ಸೆಂಟಪರಸೆಂಟ ಪ್ರಾಫಿಟ್! ನಿನ್ನಂತೆ ಇದೂ ಒಂದು ವ್ಯಾಪಾರನೇ ಮತ್ತೆ. ನಾನು ಗ್ರ್ಯಾಜುಯೇಟ ಆಗಿ ನೌಕರಿ ಹತ್ತಿದರೂ ಮೂವತ್ತು ರೂಪಾಯಿಗಿಂತ ಹೆಚ್ಚಿಗೆ ಸಿಗಲಾರದು, ಖಾಸಗಿ ಶಾಲೆಯೊಳಗ. ಅದೂ ಹತ್ತು ರೂಪಾಯಿ ಪಗಾರ ತಗೊಂಡು ಮೂವತ್ತು ರೂಪಾಯಿಗೆ ಸಹಿಮಾಡಬೇಕು. ಅದೇ ನನ್ನವಳು ಗ್ರ್ಯಾಜುಯೇಟ ಆದರೆ ಕರೆದು ನೌಕರಿ ಕೊಡುವರು-ಆರಂಭಕ್ಕೇ ೮೫ ರೂಪಾಯಿ, ಮುಂದೆ ಬಿ, ಟಿ,ಗೆ

ಸಹ ಅವರೇ ಕಳುಹಿಸುವರು. ಹಾಗೆ ಮಾಡಿದೆ. ಈಗ ನೋಡು ರಾಜನಂತೆ-ನಳರಾಜನಂತೆ ನಾನು ಆದರ್ಶ ಗೃಹಸ್ಥನಾಗಿರುವೆ. ಅವಳು ಶಾಲೆಗೆ ಹೆಡ್ ಮಿಸ್ಟ್ರೆಸ್!... ........ನನ್ನವಳೇ ನನ್ನ ಅನ್ನದಾತಳಾದಮೇಲೆ ಮಾನವ ಧರ್ಮದಂತೆ ನಾನು ಋಣಿಯಾಗಿರುವುದು ನನ್ನ ಕರ್ತವ್ಯವಲ್ಲವೆ? ಹೇಗಿದೆ ನನ್ನ ಬುದ್ಧಿ ಚಾತುರ್ಯ? ಯಾವ ಅರ್ಥ-ಶಾಸ್ತ್ರಜ್ಞನಿಗೆ ಹೊಳೆದೀತು ಈ ಮಿತವ್ಯಯದ ವಿಚಾರ?

**ಶ್ರೀಪತಿ:**—ಹೇಡಿ. ಹೇಡಿ. ವಿಚಾರವಂತೆ ವಿಚಾರ! ವಿಚಾರವೋ ವ್ಯಭಿಚಾರವೊ?

**ನಳಸಿಂಹ:**—ಹ-ಹ-ಹ! ಸತಿ ಭಕ್ತಿಯಿಂದ ಏಕಪತ್ನೀ ವ್ರತಸ್ಥನಾಗಿ ಆದರ್ಶ ಗೃಹಸ್ಥನಾಗಿರುವುದು ನನ್ನ ವ್ಯಭಿಚಾರವೊ?

**ಶ್ರೀಪತಿ:**—ಯೇ, ಹೆಸರಿಗೆ ನರಸಿಂಹಾ, ನಿನ್ನಲ್ಲಿ ಪುರುಷಾರ್ಥ ಅನ್ನುವುದು ಏನು ಉಳಿಯಿತೊ?

**ನಳಸಿಂಹ:**—ಏನೊ ಅದು ಪುರುಷಾರ್ಥ? ಧರ್ಮಾರ್ಥ ಕಾಮಮೋಕ್ಷ ಹೌದಲ್ಲೊ? ಧರ್ಮ ಬಂದೇ ಬ್ರಾಹ್ಮಣರ ನೌಕರಿಗೆ ಬಂಡೀಗಾಲಿ ತಂದಿತು. ಅರ್ಥ? ಉದ್ಯೋಗವೇ ಇಲ್ಲದಮೇಲೆ ಅರ್ಥವೆಲ್ಲಿಂದ ಬರಬೇಕು? ಎಲ್ಲಾ ಅನರ್ಥವೇ. ಇನ್ನು ಮೋಕ್ಷ- ಆ ಮಾತು ಈಗ ಯಾಕೆ? ಉಳಿದದ್ದು ಒಂದು ಕಾಮ. ಅದಕ್ಕಾಗಿಯೇ ಅಲ್ಲವೇ ಮತ್ತೆ ಈ ಹೊಸ ಬಗೆಯ ಪ್ರಪಂಚ ಪ್ರಾರಂಭಿಸಿದ್ದು?

**ಶ್ರೀಪತಿ:**— ತಾನು ಮನೆಯಲ್ಲಿ ಕೂತು ಹೆಂಡತಿನ್ನ ದುಡಿಸೋದು ಅಂದರೇನೊ?

**ನಳಸಿಂಹ:**—ಅಲ್ಲೊ, ನಾನು ಮನೆಯೊಳಗ ಕೂಡುವ ಪ್ರಸಂಗ ಹೇಗಾದರೂ ತಪ್ಪಿದ್ದೇ ಅಲ್ಲ. ಉದ್ಯೋಗಂ ಪುರುಷಲಕ್ಷಣಂ ಅಂತ ಹೊಸದೊಂದು ಉದ್ಯೋಗ ನಿರ್ಮಾಣ ಮಾಡಿಕೊಂಡಿದ್ದು. ತಪ್ಪೇನು? ಹೆಂಡತಿನ್ನ ದುಡಿಸೋದು ಅಂದರೇನು? ಸ್ತ್ರೀ ಶಿಕ್ಷಣ-ಸ್ತ್ರೀ ಶಿಕ್ಷಣ ಅಂತ ಜಗತ್ತೇ ಕಿರುಚಿಕೊಳ್ಳತದ-ಸರಕಾರದಲ್ಲಿ ಸ್ತ್ರೀ ಶಿಕ್ಷಣಕ್ಕೆ ಮಾತ್ರ ಉತ್ತೇಜನ ಅಂತೆ. ಸ್ತ್ರೀ ಶಿಕ್ಷಣ ಕೊಡಲಿಕ್ಕೆ ಬೇಕು, ಮತ್ತೆ ದುಡಿಯಲಿಕ್ಕೆ ಬೇಡಾ ಅಂದ್ರೆ? ಇದಕೆ

ನನ್ನ ಹೇಡಿತನದ ಅಂತಿಯೊ, ಸರ್ಕಾರದ ಮೂಢತನದ ಅಂತಿಯೊ? ಜಗತ್ತಿಗೊಮ್ಮೆ ತಿಳಿಯಾದರೂ ತಿಳಿಯಲಿ, ಸ್ತ್ರೀಶಿಕ್ಷಣದಿಂದಲೇ ಜಗತ್ತಿನ ಮೋಕ್ಷವೋ ಹೇಗೆ ಎಂಬೋದು. ಇಂದಿಲ್ಲ ನಾಳೆ ಇದೇ ನನ್ನ ಪರಿಸ್ಥಿತಿ ಜಗತ್ತಿಗೆಲ್ಲಾ ಬರಲಿಕ್ಕಿದ್ದೇ. ಅದು ಕಟ್ಟಿಟ್ಟ ಬುತ್ತಿ, ಬರೆದಿಟ್ಟ ಭವಿಷ್ಯ. ಸ್ತ್ರೀ ಶಿಕ್ಷಣ-ಸ್ತ್ರೀ ಉದ್ಯೋಗದಿಂದಾಗುವ ಸಾಮ್ಯ ವೈಷಮ್ಯಗಳು ಒಮ್ಮೆ ಜಗತ್ತಿಗೆ ತಿಳಿದಮೇಲಾದರೂ ಸ್ತ್ರೀ-ಪುರುಷರ ಸ್ಥಾನನಿರ್ಣಯವಾಗಲಿ, ಅಂತ ನಾನೀಗ ಈ ಕಾರ್ಯ ಕೈಕೊಂಡಿರುವೆ ಇಷ್ಟು ನನ್ನದೇ ಹೇಡಿತನ ಅನ್ನುವಿಯಾ ಅನ್ನು-ಗಂಡುಸಾಗಿ ಗ್ರ್ಯಾಜುಯೇಟ ಆಗಿ ದುರ್ದೈವದಿಂದ ನೌಕರಿ ಹತ್ತಿ ಅಂತಃಪುರದ ಕಂಚುಕಿಯಂತೆ ಹೆಣ್ಣುಮಕ್ಕಳ ಶಾಲೆಯ ಗಂಡು ಮಾಸ್ತರನಾಗಿ ಹೆಡ್‌ಮಿಸ್ಟ್ರೆಸ್ ಕಡಿಂದ ಪೃಷ್ಠ ಏರಿಸಿಕೊಳ್ಳುವುದಕ್ಕಿಂತಲೂ ಮರ್ಯಾದೆಯಿಂದ ಮಾದರಿಯ ಗೃಹಸ್ಥನಾಗಿ ನನ್ನಂತೆ ಮನೆಯಲ್ಲಿರುವುದು ಒಳ್ಳೇದಲ್ಲವೇನು ? ಆಗಲಿ ನಿನ್ನ ಉದ್ಯೋಗವನ್ನು ನೀನೇ ಹೇಳಿದೆಯಲ್ಲ? ನಿನ್ನದಾದರೂ ಏನು ಮಹಾ ಪೌರುಷ ಇದೆ ಅದರಲ್ಲಿ ? ಪಫ್‌ಲು-ಪಾವಡರು-ರೀಲು ರಿಬನ್ನು-ಪಿನ್ನು-ಬಳೆಗಳನ್ನು ಮಾರುತ್ತಾ ಸ್ತ್ರೀಯರ ಅಜ್ಞಾನದ ಆಧಾರದ ಮೇಲೇ ಅಲ್ಲವೇ ನಿನ್ನದೂ ಹೊಟ್ಟೆಪಾಡು? ಕಲೋಪಾಸಕನೆಂದು ಬಣ್ಣ ಬಳೆದುಕೊಂಡು ಹೆಣ್ಣಾಗಿ ರಂಗಭೂಮಿಯಮೇಲೆ ಕುಣಿದು ಹೊಟ್ಟೆಹೊರುವ ಅರ್ಧನಾರೀ ನಟೇಶ್ವರನಗಿಂತ ನನ್ನದೇನು ಕೀಳು ?

**ಶ್ರೀಪತಿ**:—ನಿನ್ನದೆಲ್ಲಾ ಪಾಡಾಯಿತೊ, ಆದರೆ ಹೆಂಡತಿಯೊಂದು ನೆಚ್ಚಿಕೊಂಡು ಇರಬೇಕಲ್ಲ ?

**ನಳಸಿಂಹ**:—ಅಲ್ಲೊ, ತ್ರೇತಾಯುಗದಿಂದ ಒಂದೇ ಸವನೆ ಈ ಹೆಣ್ಣು ಜನ್ಮ, ಪಾತಿವ್ರತ್ಯ-ಪಾತೀವ್ರತ್ಯ ಅಂತ ಗಂಡಸಿನ ಗುಲಾಮಗಿರಿಯಲ್ಲಿ ಬೆಂದು ಪತಿದೈವ ಅಂತ ನೆವ ಹೇಳಿ ತನ್ನ ಅನ್ಯಾಯವನ್ನು ಮರೆಯ-ಬಯಸಿದ ಈ ಹೆಣ್ಣು-ಈ ಕಲಿಯುಗದ ಇಪ್ಪತ್ತನೆಯ ಶತಮಾನದ ಕೊನೆಗಾದರೂ ಸ್ವಲ್ಪ ಅಧಿಕಾರ ನಡೆಸಲಿ. ಈ ನಿರುದ್ಯೋಗಿ ಗಂಡು, ಹೆಣ್ಣು ಹಕ್ಕಿಗಳನ್ನು ಬೇಟೆಯಾಡುತ್ತ ಹೊರಗೆ ಅಂಡಲೆಯುವುದಕ್ಕಿಂತ ಮನೆಯೊಳಗೆ ಇದ್ದ ಒಬ್ಬ ಹೆಂಡತಿಯನ್ನು ನೆಚ್ಚಿಕೊಂಡು ಇರಲಿ. ಹೆಂಡತಿ ಪತಿವ್ರತೆಯಾಗಬೇಕಂತೆ ಈ ಗಂಡು [illegible] ಹೆಣ್ಣನ್ನು ಕೊರಳಿಗೆ ಕಟ್ಟಿಕೊಳ್ಳಬೇಕಂತೆ. ನಮ್ಮ ಹಿಂದಿನ

ರಾಜರ ಚರಿತ್ರೆಯನ್ನು ನೋಡಿದರೆ ತೀರಿಯೇ ಹೋಯಿತು, ಒಂದು ದೇಶವನ್ನು ಗೆದ್ದ ಕುರುಹಿಗಾಗಿ ಒಂದು ಹೆಣ್ಣು ಕೊರಳಿಗೆ ಬೀಳಲೇಬೇಕು.

**ಶ್ರೀಪತಿ**:— ಯಾಕೊ, ಶ್ರೀರಾಮಚಂದ್ರ ಏಕಪತ್ನಿವ್ರತಸ್ಥನಾಗಿರಲಿಲ್ಲವೇನು?

**ನಳಸಿಂಹ**:—ಅಂತೇ ಕೃಷ್ಣಾವತಾರದಲ್ಲಿ ಅದರ ಸೇಡು ತೀರಿಸಿಕೊಂಡ. ಆದರೆ ಪಾಪ, ಈ ಹೆಣ್ಣು ಜನ್ಮಕ್ಕೆ ಮಾತ್ರ ಪತಿವ್ರತಾ ಧರ್ಮವೆಂಬ ಕಾಯಿದೆಯ ಮೂಗುದಾಣ! ಏನೊ ದುರ್ದೈವದಿಂದ ದ್ರೌಪದಿ ಮಾತ್ರ ಐದು ಗಂಡರ ತೊತ್ತಾಗಿ ದುಡಿಯಬೇಕಾಯಿತು. ಆದರೂ ದ್ರೌಪದಿಯಾಗಿ ವನವಾಸ ಉಪವಾಸ ಮಾಡಿ ಸೈರಂಧ್ರಿಯಾಗಿ ಪರರ ಆಳಾಗಿ ಸೇವಿಸಿ ನೊಂದು ಬೆಂದ ಈ ಕೋಮಲ ಕರುಳಿನ ಹೆಣ್ಣು ಇಂದಾದರೂ ಸ್ವಲ್ಪ ಅಧಿಕಾರ ಪಡೆದು ಹಾಯಾಗಿ ಬಾಳಲಿಚ್ಛಿಸಿದರೆ ಈ ಪುರುಷನ ಸ್ವಾರ್ಥ ಯಾಕೆ ಕೆಣಕಬೇಕು? ಆದ್ದರಿಂದ ಕೇಳು ನನ್ನ ನಿಶ್ಚಯವನ್ನು, ನೋಡು ನನ್ನ ನೀತಿಯನ್ನು ಇವತ್ತು ನನ್ನವಳೇ ನನ್ನ ಸತಿದೈವ ಎಂದು ತಿಳಿದಿದ್ದೇನೆ. ಅವಳೇ ನನ್ನ ಅನ್ನಬ್ರಹ್ಮ, ನನ್ನ ಪಾಲಿನ ಪರದೈವ.

**ಶ್ರೀಪತಿ**:— (ಗಹಿಗಹಿಸಿ ನಕ್ಕು) ಹ-ಹ-ಹ! ಆಯಿತು ಇದೂ ಒಂದು ಹೊಸ ಫ್ಯಾಶನ್ನೇ ಬಂತು ಬಿಡು, ಆಲ್ಲೊ ಯಾರೊ ಚೆನ್ನಾಗಿ ನಿನ್ನ ತಲೆ ತಿಕ್ಕಿರುವರು ನೋಡು, ಎಂತಹಾ ಬೆಪ್ಪ ಗಂಡಸೊ ನೀನು. (ಹೊರಗೆ ಬಾಗಿಲು ಸಪ್ಪಳ) ಜಾಗ್ರತೆಯಿಂದ ಇರು. ಹೆಣ್ಣು ತಿರುಗಿ ಕೆಟ್ಟಿತು ಎಂಬೋದನ್ನ ಮರಿಯಬೇಡ. ನಾನು ನೋಡುತ್ತ ಬಂದಿದ್ದೇನೆ ನಮ್ಮ ಅಂಗಡಿಯಲ್ಲಿ. ಒಳ್ಳೇದು ಗುಡ್‌ಬಾಯ್. ಬಿಲ್ಲಿಗೆ ಆ ಮೇಲೆ ಬರುತ್ತೇನೆ. (ಹೋಗುವನು)

(ದುರ್ಗಾದೇವಿ ತನ್ನ ಸಹೋದ್ಯೋಗಿ ಮೀರಾ-ಮೇರಿಯೊಡನೆ ಬರುವಳು.)

**ದುರ್ಗಾ**:— (ಟೇಬಲ್ ಮೇಲೆ ಕೈಯೊಳಗಿನ ಪರ್ಸ್ ಒಗೆದು) ಅಂತೂ ಇಂದಿನ ಉಪನ್ಯಾಸದ ಬಗ್ಗೆ ನಿಮ್ಮ ಅಭಿಪ್ರಾಯ ಏನಂತೀರಿ, ಮೀರಾ-ಮೇರಿ? (ನಳಸಿಂಹನನ್ನು ನೋಡಿ) ಯಾಕೆ ಇನ್ನೂ ಚಹಾ ಆಗಿಲ್ಲೇನು?

**ನಳಸಿಂಹ**:— (ಮೆಲ್ಲಗೆ) ಹ-ಹ-ಹ! ನೀವು ಬರೋ ಟಾಯಿಮ್ ಗೊತ್ತಿರಲಿಲ್ಲಾ. ಈಗ....ಎಷ್ಟು ಕಪ್ಪು ಇಡಲಿ?

**ದುರ್ಗಾ**:—ಎಷ್ಟು ಜನ ಇದ್ದೀವಿ ಕಾಣಿಸೋದಿಲ್ಲೇನು?

**ನಳಸಿಂಹ:**—ಆದರೆ, ಮತ್ತೆ ಯಾರಾದರೂ—

**ದುರ್ಗಾ:**—Oh, I see! Thank you, ಈಗಲೆ ಪ್ರೊಫೆಸರ ಪರಮೇಶ್ವರನ್ ಅವರೂ ಬರುವವರಿದ್ದಾರೆ. ಒಂದಿಷ್ಟು ಒಳ್ಳೇ ದಿವ್ಯವಾದ ಉಪಹಾರ ಆಗಲಿ.

(ನಳಸಿಂಹ 'ಹೂಂ' ಎಂದು ಗೋಣು ಹಾಕಿ ಒಳಗೆ ಹೋಗುವನು)

**ಮೀರಾ–ಮೇರಿ:**—ಇವರೇಯೊ ನಿಮ್ಮ ಬೆಟರ-ಹಾಫ್? (ದುರ್ಗಾ ಖೊಳ್ಳನೆ ನಗುವಳು.) ಆದರೂ ನೋಡಿರಿ, ನಮ್ಮ ಕೈ ಹಿಡಿಯೋ ಗಂಡಂದಿರು ನಿರಕ್ಷರಕುಕ್ಷಿಗಳಾಗಿದ್ದರೆ ಜೀವಂತ ಅಜ್ಞಾನದೊಡನೆ ಪ್ರಪಂಚ ಮಾಡಿದಂತಾಗುವುದು....ನಮ್ಮ ಮಿಸ್ಟರು, ದಿನಕರ ಇದ್ದಾರಲ್ಲಾ ನನ್ನಷ್ಟೆ ಸುಶಿಕ್ಷಿತರಾಗಿದ್ದರೂ ಅವರ ಬುದ್ಧಿ ಮೊಳಕಾಲಕೆಳಗೇ. ಏನೊ, ಪ್ರೇಮ ಕುರುಡು ಅಂತಾರಲ್ಲ. ಕಾಲೇಜಿನಲ್ಲಿ ಏನೋ ಅವರ ಪ್ರಾಯ-ಅವರ ರೂಪ ಮೋಹಕವೆನಿಸಿತು. ರಜಿಸ್ಟರ ಮದುವೆಯಾದೆ. ನನ್ನ ತಂದೆ-ತಾಯ್ಗಳ ಇಚ್ಛೆಯ ವಿರುದ್ಧ ಕ್ರಿಶ್ಚನ್ ಳಾದೆ. ಮೀರಾ ಹೋಗಿ ಮೇರಿ ಆದೆ. ಆದರೆ ಈಗ ನನಗಿರುವ ಸಾಮಾಜಿಕ ಮರ್ಯಾದೆಯೇನು. ನನ್ನ ಪಗಾರ ಏನು; ಅವರೊ, ಎಲ್ಲಿಯೊ ಒಂದು ಖಾಸಗಿ ಶಾಲೆಯ ಶಿಕ್ಷಕರಾಗಿದ್ದಾರೆ. ತಮಗೆ ನೋಡಿದರೆ ಮತ್ತೊಂದು ನಾಲ್ಕು ದುಡ್ಡು ಗಳಿಸುವ ಎದೆಗಾರಿಕೆ ಇಲ್ಲ, ಮತ್ತೆ ಈ ಗಂಡಂದಿರಿಗೇನೊ ನಮ್ಮಷ್ಟೇ ಅಧಿಕಾರ ಕೊಡಬೇಕಂತೆ. ಏಕೊ!

**ದುರ್ಗಾ:**— ಅದಕ್ಕೇ ನೋಡ್ರಿ 'Ignorance is bliss' ಅನ್ನೋದು. ನಮ್ಮ ಮನಿಯವನು ತಕ್ಕಮಟ್ಟಿಗೆ ಮ್ಯಾಟ್ರಿಕ್‌ದ ವರೆಗೆ ಕಲಿತಿದ್ದಾನೆ. ಮನೆಗೆಲಸದಲ್ಲಿ ಸಾಕಷ್ಟು ಸುರಿತಿದ್ದಾನೆ. ಪಾಕಶಾಸ್ತ್ರದಲ್ಲಿಯಂತೂ ನಳರಾಜ, ಶಿಶುಸಂಗೋಪನದಲ್ಲಿಯೂ ಮತ್ತೊಬ್ಬ ಮಾಂಟೇಸರಿ ಇದ್ದಂತೆ. ಮಕ್ಕಳಿಗೆ ಮನೆಯೇ ಪಾಠಶಾಲೆಯಂತೆ! ಇಷ್ಟು ಮಕ್ಕಳಿಗೆ ಶಿಕ್ಷಣ ಕೊಡಬೇಕಾದರೆ ಮನೆಯ ಗಂಡಸು ತಕ್ಕಮಟ್ಟಿಗಾದರೂ ಕಲಿತವನಿರಬೇಕು. ಮೇಲಾಗಿ ನಮ್ಮವನಿಗೆ ಫಾಯುಜಿನಿಕ್ ತತ್ವಗಳೂ ಸಾಕಷ್ಟು ಬರುತ್ತಿವೆ. ಹೀಗಾಗಿ ಮನೆಯನ್ನು ಓರಣವಾಗಿ ಅಚ್ಚುಕಟ್ಟಾಗಿ ಇಟ್ಟಿರುತ್ತಾನೆ. ಮತ್ತು ಮನೆಯನ್ನು ಕಾಯುವುದರಲ್ಲಂತೂ Faithful dog (ನಂಬಿಗೆಯ ನಾಯಿ) ಇದ್ದಂತೆ!

ನಾನು ಒಂದು ಸಿನೇಮಕ್ಕೆ ಹೋಗಿದ್ದರೂ ಸಹಾ ಬರುವವರಿಗೆ ಎಚ್ಚರ ದಿಂದಲೇ ಇರುತ್ತಾನೆ.

**ಮೀರಾ-ಮೇರಿ**:—ಆದರೆ ನೀವು ದಂಪತಿಗಳು ಜೋಡಾಗಿ ಹೋಗೋದಿಲ್ಲೇನು ತಿರುಗಾಟಕ್ಕೆ, ಸಿನೇಮಕ್ಕೆ?

**ದುರ್ಗಾ**:—ಗಂಡಸಿಗೆ ಅಷ್ಟು ಒಮ್ಮೆಲೆ ಸಲಿಗೆ ಕೊಡಬಾರದು ಅಂತಾ ನನ್ನ ಮತ. ಬ್ರಿಟಿಷ್ ಸರಕಾರದವರು ಭಾರತಕ್ಕೆ ಸ್ವಾತಂತ್ರ್ಯವನ್ನು ಹೇಗೆ bit by bit ಕೊಡುವ ಪದ್ಧತಿ ಇಟ್ಟುಕೊಂಡಿದ್ದಾರೊ ಅದನ್ನು ನಾವೂ ಪುರುಷರಿಗೆ ಅಧಿಕಾರ ಕೊಡುವುದರಲ್ಲಿ ನಮ್ಮ 'ಪಾಲಿಸಿ'ಯಾಗಿಟ್ಟುಕೊಳ್ಳ ತಕ್ಕದ್ದು. ಗಂಡಸರಿಗೆ ಎಲ್ಲಿಯವರೆಗೆ ನೀವು ಅಧಿಕಾರ ಕೊಡುವುದಿಲ್ಲವೋ ಅಲ್ಲಿಯವರೆಗೆ ಅವರು ನಿಶ್ಯಸ್ತ್ರೀಕೃತರಾಗಿರುತ್ತಾರೆ.

**ಮೀರಾ-ಮೇರಿ**:—ನಾನೇನೊ ಗಂಡಸರನ್ನು ಪಶುಗಳಂತೆ ದುಡಿಸಿಕೊಳ್ಳಬಾರದು ಅನ್ನುತ್ತಿದ್ದೆ. ಪಾಪ-ಅವೂ ನಮ್ಮಂತೆ ಎರಡು ಕಾಲುಳ್ಳ ಮಾನವ ಪ್ರಾಣಿಗಳು ಎಂಬ ಭೂತದಯಾ ದೃಷ್ಟಿಯಿಂದ ನೋಡುತ್ತಿದ್ದೆ. ಆದರೆ ಇದರಿಂದ ನಮ್ಮವನು ನನ್ನ ಮೇಲೆ ಒಮ್ಮೊಮ್ಮೆ ಬಾಸ್ ಮಾಡಲಿಕ್ಕೆ ಬರಹತ್ತಿದಾ. ಆಮೇಲೆ shut up ಅಂದೆ. (ತಿರಸ್ಕಾರದಿಂದ ನಗುವಳು)

**ದುರ್ಗಾ**:—ಗಂಡಸಿಗೆ, ನಿರುದ್ಯೋಗಿ ಗಂಡಸಿಗೆ ಶಿಕ್ಷಣ ಕೊಟ್ಟದರ ಫಲ ಇದು. ಕಾಡು ಸ್ಥಿತಿಯಲ್ಲಿ ಬೇಟೆಗಾರನಾಗಿದ್ದ ಈ ಮಾನವನಿಗೆ ಸ್ವಲ್ಪ ಶಿಕ್ಷಣದ ಬಲ, ಅಧಿಕಾರದ ಶಸ್ತ್ರ ದೊರೆತರೆ ನಾಕು, ಮನೆಯ ದೇವತೆಯನ್ನೆ ಜಿಂಕೆಯಂತೆ ಬೇಟೆಯಾಡುವನು. ಅಂತೇ ನೋಡ್ರಿ ನಾನು ನನ್ನವನನ್ನು 'ಸತಿವ್ರತಾ ಧರ್ಮ'ವೆಂಬ ಅಜ್ಞಾನದ ಮುಖವಾಡ ಹಾಕಿ ಕುಳ್ಳಿರಿಸಿಬಿಟ್ಟಿದ್ದೇನೆ. ಪಾಪ! ಅವನು ಅದರಲ್ಲಿ ತನ್ನ ಮೋಕ್ಷವೆಂದು ತಿಳಿದಿದ್ದಾನೆ. ಇದೇ ಪರಮ ಸುಖ! ಇಲ್ಲವಾದರೆ ಪೂಜ್ಯವಾದ ಈ ಸ್ತ್ರೀ ವಸ್ತು ಪುರುಷನ ಕಾಲ್ಕಸವಾಗ ಬಹುದು. 'ಯತ್ರನಾರ್ಯಸ್ತು ಪೂಜ್ಯಂತೆ ರಮಂತೆ ತತ್ರದೇವತಾಃ' ಎಂನು ಒಂದು ಹಳೆ ನುಡಿಯೂ ಸಹ ಸಾರಿ ಹೇಳುತ್ತದೆ.

**ಮೀರಾ-ಮೇರಿ**:—ಆದರೆ 'ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ' ಎಂದೂ ಒಂದು ಹಳೆ ನುಡಿ ಹೇಳುತ್ತಿದೆಯಲ್ಲಾ.

**ದುರ್ಗಾ**:—ಆಗಿನ ಧರ್ಮಶಾಸ್ತ್ರಕಾರರು-ಗಂಡಸರಿದ್ದರು. ಗಂಡಸಿನ ಸ್ವಾರ್ಥವು ಗಗನಕ್ಕೇರಿಯೆ ಅವನ ಪಾಡು ಕಲಿಯುಗದಲ್ಲಿ ಈ ರೀತಿ ಶೋಚನೀಯವಾಯಿತು. ಆಗಿನ ಸೇಡನ್ನು ಈಗ ನಮ್ಮಂತಹ ಪುಢಾರಿ ಸ್ತ್ರೀಯರು ಸಾಧಿಸಬೇಕಾಗಿದೆ. ನನ್ನ ಧರ್ಮಶಾಸ್ತ್ರ ಇಂದು ನನ್ನ ಮನೆಯಲ್ಲಿ, ಅದರ ಮನು ನಾನೇ !

**ಮೀರಾ-ಮೇರಿ**:—ಅಂತೂ ನಿಮಗೆ ಅಶಿಕ್ಷಿತ ಪತಿ ದೊರೆತುದು ನಿಮ್ಮ ಸುದೈವ.

**ದುರ್ಗಾ**:—ದುರ್ದೈವದಿಂದ ಅವನಿಗೆ ಕಲಿಯಲಿಕ್ಕಾಗಲಿಲ್ಲ. ಅದೇ ಅವನ-ನನ್ನ ಸುದೈವವಾಯಿತು........ನಾನಂತೇನೆ ಗಂಡಸರು ಕಲಿತಾದರೂ ಮಾಡೋದೇನೂ ಅಂತ? ಮತ್ತೂ ನಿರುದ್ಯೋಗಿಗಳಾಗಿ ಒಲೆಯ ಮುಂದೆ ಕೂಡೋದೆ ಆಹುದಲ್ಲವೆ? ಸುಶಿಕ್ಷಿತ ಸ್ತ್ರೀಗೆ ಕರೆದು ಕೆಲಸ ಕೊಡುವಂತೆ ಪುರುಷರನ್ನು ಯಾರು ಕೇಳುತ್ತಾರೆ? ಗಂಡಹೆಂಡಿರೆಂದರೆ ರಥದ ಎರಲು ಗಾಲಿಗಳೆಂದು ಎಷ್ಟೋ ವರುಷದ ಹಿಂದೇ ಹೇಳಿಲ್ಲವೆ ಪಂಡಿತರು. ಇಷ್ಟು ದಿವಸ ಪತಿದೈವವೆಂದು ಪತಿ ಸೇವೆಯಲ್ಲಿಯೆ ಅಜ್ಞಾನದ ಮೋಕ್ಷವನ್ನು ಕಂಡ ಸ್ತ್ರೀ ಇನ್ನು ಮೇಲೆ ತಾನು ರಥದ ಮತ್ತೊಂದು ಗಾಲಿಯಾದರೆ ತಪ್ಪೇನು ? ಇನ್ನು ಮುಂದೆ ಜಗತ್ತಿನ ಸಾಮಾಜಿಕ ಸ್ಥಿತಿಯೇ ಬದಲಾಯಿಸತಕ್ಕುದಿದೆ. ಸ್ತ್ರೀ-ಪುರುಷರಿಗೆ ಪಾಶ್ಚಾತ್ಯರಲ್ಲಿ ಸಮಾನ ಅಧಿಕಾರ ದೊರೆತರೆ ಭಾರತವರ್ಷದಲ್ಲಿ ಸ್ತ್ರೀಗೆ ಹೆಚ್ಚಿನ ಸ್ಥಾನ ದೊರೆಯತಕ್ಕದ್ದು. ಏಕೆಂದರೆ ತ್ರೇತಾಯುಗದಿಂದ ಕಲಿಯುಗದವರೆಗೆ ಸ್ತ್ರೀಯನ್ನು ಕಡಿಮೆಯೆಂದೆಣಿಸಿ ಅವಳನ್ನು ಹಿಂಸಿಸುತ್ತ ಬಂದ ಈ ಗಂಡಸಿಗೆ ತಕ್ಕ ಪ್ರಾಯಶ್ಚಿತ್ತ ದೊರೆಯಬೇಕು. ಅಂತೇ ಅದರ ಪ್ರಥಮ ದೃಷ್ಟಾಂತ, ಜೀವಂತ ದೃಷ್ಟಾಂತ ನಾನೇ ಆಗಿದ್ದೇನೆ. ರಾಮನಿಗೆ ವಿಧೇಯಳಾದ ಸೀತೆಯು ಕೊನೆಗೊಮ್ಮೆ ತನ್ನ ದುರ್ಗಾವತಾರವನ್ನು ತೋರಬೇಕಾಯಿತು, ರಾಮನು ಅವಳ ಮುಂದೆ ತಲೆ ಬಾಗಬೇಕಾಯಿತು. ಇಂದು ಅದೇ ದುರ್ಗೆಯು ಈ ನರಸಿಂಹನನ್ನು ನಳಸಿಂಹನನ್ನಾಗಿ ಮಾಡಿದ್ದಾಳೆ. ಇದು ನನ್ನ ಗಂಡನ ಮೇಲೆ ನನಗಿರುವ ಯಾವ ದ್ವೇಷವೂ ಅಲ್ಲ, ಆದರೆ ಮನುವಿನಿಂದಿಳಿದು ಬಂದ ಮಾನವ ಕುಲವು ಸ್ತ್ರೀಯರ ಮೇಲೆ ಮಾಡಿದ ಅತ್ಯಾಚಾರದ ಪ್ರತೀಕಾರದ ಪ್ರತೀಕ. **(ಬಿಲ ಕೊಡುವಳು ಹೊರಗೆ ಬಾಗಿಲ ಸಪ್ಪಳ)**

ಓಹೋ! ಅತಿಥಿಗಳು ಬಂದರೆಂದು ಕಾಣುತ್ತದೆ. (ಮತ್ತೆ ಬೆಲ್ ಕೊಡುವಳು)

**ನಳಸಿಂಹ:**—(ಲಗುಬಗೆಯಿಂದ ಪ್ರವೇಶಿಸಿ) ಸಿದ್ಧವಾಗಿದೆ, ಆಜ್ಞೆಯಾಗಲಿ.

**ದುರ್ಗಾ:**—ತಲೇನೆ ಇಲ್ಲ.

**ನಳಸಿಂಹ:**—(ತನ್ನ ತಲೆ ಹಿಡಿದು ನೋಡಿಕೊಂಡು ಗಾಬರಿಯಿಂದ) ಯಾರದು?

**ದುರ್ಗಾ:**—ನಿಮ್ಮದು! ಮೆದಳು ತೆಗೆದು ಬರೇ ಕೂದಲು ಇಟ್ಟುಕೊಂಡೀರಲ್ಲಾ, ನಿಮ್ಮಂತಹ ಗಂಡಸರದು. ಯಾತಕಾಗಿರಿ ಗಂಡಸರು-ನೋಡ್ರಿ ಹೊರಗೆ ಯಾರು ಬಂದರು.

**ನಳಸಿಂಹ:**—ಆದರೆ ಪರಸ್ತ್ರೀಯರ ಮುಂದೆ ಹ್ಯಾಗೆ ಮುಖಾ ಹೊರಗೆ ಹಾಕಲಿ?

**ದುರ್ಗಾ:**—ಹ್ಯಾಗೆ ಹಾಕಲಿ! ಪರಸ್ತ್ರೀಯರೆಂದರೇನು ಹುಲಿ-ಸಿಂಹ ಏನು? ಪಾಪಾ, ಸಭ್ಯ ಗೃಹಸ್ತ್ರೀಯರು ಹೊರಗೆ ಕೂಗಿದಾಗ ಅವರಿಗೆ ಉತ್ತರ ಸಹಾ ಕೊಡದೆ ಹಾಗೇ ನಾಚಿಕೊಂಡು ಒಳಗೇ ಕೂಡ್ರಿ. (ಮತ್ತೆ ಬಾಗಿಲು ಸಪ್ಪಳ)

**ನಳಸಿಂಹ:**—(ಎದೆಗಟ್ಟಿ ಹಿಡಿದುಕೊಂಡು) ತೆಗೆಯುತ್ತೇನೆ ಬಾಗಿಲಾ. (ಹೋಗಿ ಬರುವನು.)

(ಅಪ್‌ಟುಡೇಟ್ ವೇಷದಲ್ಲಿ-ಪ್ರೊಫೆಸರ ಪರಮೇಶ್ವರರು ಬರುವರು)

**ಪರಮೇಶ್ವರ:**—(ಹ್ಯಾಟ್ ತೆಗೆದು) ಹಲ್ಲೊ-ಹಲ್ಲೊ!

**ದುರ್ಗಾ:**—ಹೀಗೆ ಬನ್ನಿ, ಕುಳಿತುಕೊಳ್ಳಿರಿ. (ಸ್ಥಳ ಕೊಟ್ಟು) ನಿಮಗೆ ಮನೆ ಸಿಕ್ಕಿತೋ? ಯಾರನ್ನಾದರೂ ಕಳಿಸಬೇಕೆಂದಿದ್ದೆ.

**ಪರಮೇಶ್ವರ:**— Does'nt matter, Does'nt matter, ಸಿಕ್ಕಿತು, ಸಿಕ್ಕಿತು,

**ನಳಸಿಂಹ:**—(ಸ್ವಗತ) ಏನು ಲಜ್ಜಾಗೆಟ್ಟ ಗಂಡಸಿವನು! ಹೇಗೆ ಬೇಕು ಹಾಗೆ ಸ್ತ್ರೀಯರ ಸಂಗಡ ಮಾತನಾಡುತ್ತಾನೆ.

**ದುರ್ಗಾ:** (ನಳಸಿಂಹನಿಗೆ) ಹೂಂ-ಬೇಗನೆ ಬರ್ಲಿ.

**ಪರಮೇಶ್ವರ**:—(ನಳಸಿಂಹನನ್ನು ದಿಟ್ಟಿಸಿ ನೋಡಿ) ಇವರಾರು ನಿಮ್ಮ ಚಪ್ರಾಸಿ?

**ದುರ್ಗಾ**:—ಅಲ್ಲಾ, ನಮ್ಮ ಫಡಪ್ರೋಸಿ-ನಮ್ಮ ಅರ್ಧಾಂಗ.

**ಪರಮೇಶ್ವರ**:— Oh, I see! ಅಪಕ್ಕೇ ಅನಿಸಿತು. ಮನುಷ್ಯನ ಮನಸ್ಸಿಗೆ ಅವನ ಕೃತಿಗಳೇ ಕೈಗನ್ನಡಿಯಂತೆ. I could read his mind.

**ದುರ್ಗಾ**:—ಯಾಕೆ ನಿಮಗೆ ಮಾನವ ಪ್ರಾಣಿಯಂತೆ ಕಾಣಲಿಲ್ಲೊ ಅದು?

**ಪರಮೇಶ್ವರ**:—ಕಂಡಿತು-ಆದರೆ What a disparity! ಒಬ್ಬರಲ್ಲಿ Superiority ಬೆಳೆದ ಹಾಗೆ ಇನ್ನೊಬ್ಬರಲ್ಲಿ Inferiority ಯೂ ಬೆಳೆಯ ಹತ್ತುವದು. ಹಾಗೆ ಇವರಿಗೆ Inferiority ಯ ರೋಗ ಬೆಳೆಯಹತ್ತಿದೆ. I Could read it from his manners

**ದುರ್ಗಾ**:—ನನಗೂ ಅದೇ ಬೇಕಾಗಿದೆ.

**ಪರಮೇಶ್ವರ**:—ಆದರೆ ಇದು ಮಾನಸಶಾಸ್ತ್ರದ ವಿರುದ್ಧವಾಗುತ್ತಿದೆ. ಗಂಡು ಹೆಣ್ಣು ಎರಡೂ ಸರಿಸಮನಾಗಿ ಇದ್ದರೆ ಮಾತ್ರ ಬರುವ ಸಂತತಿ ಉಜ್ವಲವಾಗುತ್ತದೆ. ಆದರೆ ನಮ್ಮ ಇಂಡಿಯಾದಲ್ಲಿ ಎಲ್ಲಿ ನೋಡಿದರೂ ಇದೇ ವೈಷಮ್ಯ.

**ದುರ್ಗಾ**:—ಹ-ಹ! ಸಂತತಿಯಂತೆ! ಯಾರಿಗೆ ಬೇಕಾಗಿದೆ ಸಂತತಿ! ಸಂಸಾರವೆಂದರೆ ಸಂತತಿಗಾಗಿಯೇ ಅಲ್ಲ. (ಕೂಸು ಅಳಹತ್ತುವುದು)

**ಪರಮೇಶ್ವರ**:—ಇದೇನು? ಇದು ತಮ್ಮ ಸಂತತಿ ಅಲ್ಲವೋ?

**ದುರ್ಗಾ**:—ಅಲ್ಲ, ನಮ್ಮ ಯಜಮಾನರ ಸಂತತಿ. ತಾವು ಮದುವೆಯಾಗಿ ಮಾಡಿದ ದಿಗ್ವಿಜಯದ ಕುರುಹಿಗಾಗಿ ಪಡೆದಿದ್ದಾರೆ ಅದನ್ನು.

**ಪರಮೇಶ್ವರ**:—ಆದರೆ ಇದು ಸ್ತ್ರೀಯರ ಸಾಯಕಾಲಜಿಗೆ ವಿರುದ್ಧವಾಗುತ್ತದೆ. ಸ್ತ್ರೀಯ ಹೃದಯ-ಸ್ತ್ರೀಯ ಮನಸ್ಸು ಎಂದರೆ ಅದು ಯಾವಾಗಲೂ ಕೂಸಿನಂತೆ ಕೋಮಲ. ಮಕ್ಕಳನ್ನು ಪಡೆದು ಕಾಪಾಡುವಳು ತಾಯಿಯಲ್ಲದೆ ಮತ್ಯಾರು? ಇವೊತ್ತಿನ ನನ್ನ ವಿಷಯವೇ ಅದಾಗಿತ್ತಲ್ಲವೆ?— Women's Education and women's psychology—

ಇಂದಿನ ಸ್ತ್ರೀ ಶಿಕ್ಷಣದ ಸ್ವರೂಪವು radically ಬದಲಾಗಬೇಕು. A woman is known for her tenderness but today's education is making a woman masculine. (ಸ್ತ್ರೀಯು ಸೌಕುಮಾರ್ಯದ ಪುತ್ಥಳಿ. ಇಂದಿನ ಶಿಕ್ಷಣಕ್ರಮ ಹೆಂಗಳೆಯರನ್ನು ಗಂಡುರಾಮಿ ಗಳನ್ನಾಗಿ ಮಾಡುತ್ತಿದೆ.)

**ಮೀರಾ-ಮೇರಿ**:—That's what exactly we mean (ನಾವು ಬಯಸುವುದೂ ಅದೇ.) ಈ ಗಂಡಸರ ಬಿಂಕವನ್ನು ಇಂದು ನಾವು ಪೊಳ್ಳು ಮಾಡಬೇಕಾಗಿದೆ. ನಮ್ಮ ಹೆಡ್ ಮಿಸ್ಟ್ರೆಸ್ ಶ್ರೀಮತಿ ದುರ್ಗಾದೇವಿಯವರು ಪುರುಷರಿಗಿಂತ ಏನು ಕಡಿಮೆ ಇದ್ದಾರೆ ?

**ಪರಮೇಶ್ವರ**:— I challenge this is against psychology. (ಇದು ಮಾನಸಶಾಸ್ತ್ರದ ವಿರುದ್ಧವೆಂದು ನಾನು ಪಂಥತೊಟ್ಟು ಹೇಳುತ್ತೇನೆ.) ನೀವು ಹೆಡ್ ಮಿಸ್ಟ್ರೆಸ್ ಆಗಬಹುದು, ಹೆಡ್‌ಮಾಸ್ಟರ ಆಗಲಾರಿರಿ.

**ದುರ್ಗಾ**:—ನಾವು ಪುರುಷರಿಗಿಂತ ಏನು ಕಡಿಮೆ ಇದ್ದೇವೆ ?

**ಪರಮೇಶ್ವರ**:—your very sex shows your inferiority. ಒಂದು ಶಾಲೆಯನ್ನು ಯಶಸ್ವಿಯಾಗಿ ನಡಿಸುವುದು ನಿಮಗೆ ಆಗದು ಸಂಸಾರ ರಥವನ್ನು ನಾಗಿಸುವುದು ನಿಮ್ಮಿಂದಾಗದು. ಪುರುಷನ ಮೆದುಳು ಯಾವ ಯಾವ ಜಟಿಲ ಸಮಸ್ಯೆಗಳನ್ನು ಬಿಡಿಸಲು ಸಮರ್ಥವಾಗಬಹುದೊ ಆಯಾ ಸಮಸ್ಯೆಗಳನ್ನು ಸ್ತ್ರೀಯರ ಕೋಮಲ ಮೆದುಳು ಬಿಡಿಸಲಾರದು. ಇಂದಿನ ಜಾಗತಿಕ ಪ್ರಪಂಚದಲ್ಲಿ ಸ್ತ್ರೀಯರ ಸ್ಥಾನವು ವಿಶೇಷ ಮನ್ನಣೆಯನ್ನು ಪಡೆದಿರಬಹುದು. ಆದರೆ ಇಂದಿನ ರಾಜಕಾರಣಿಗಳು ಪುರುಷರು, ಇಂದಿನ ಯುದ್ಧ ವೀರರು ಪುರುಷರು, ಇಂದಿನ ವೈಜ್ಞಾನಿಕ ಸಿರೋಮಣಿಗಳು ಪುರುಷರು ಎಲ್ಲಿಯವರೆಗೆ ರಾಜಕಾರಣ ರೇಲ್ವೆ ಮತ್ತು ಮಿಲಿಟರಿ ಪ್ರಪಂಚದಲ್ಲಿ ಸ್ತ್ರೀಯರಿಗೆ ಪ್ರವೇಶವಿಲ್ಲವೊ ಅಲ್ಲಿಯವರೆಗೆ ಸ್ತ್ರೀಯರು ಪುರುಷರಿಗಿಂತ ಕಡಿಮೆ ಯೆಂದೇ ಭಾವಿಸಬೇಕು. ಯಾವ ಕ್ಷೇತ್ರದಲ್ಲಿ ಹೋದರೂ ನಿಮಗೆ ವರುಷಕ್ಕೆ ಮೂರು ತಿಂಗಳು maternity leave (ಹೆರಿಗೆಯ ರಜ) ಬೇಕು....ತಡೆಯಿರಿ, ಒಬ್ಬ ಕ್ರಿಮಿನಲ್ ಆರೋಪಿಯ ತಲೆ ಹೊಡೆಯಲು ಸ್ತ್ರೀ ಕೈಯೆತ್ತಬಹುದೆ ?

ಹೇಳಿರಿ ! ಒಂದು ಅನಾಥ ಮಗು ಹೊಟ್ಟೆಗಿಲ್ಲದೆ ತುಡುಗು ಮಾಡಿದರೆ ಹೆಣ್ಣು ಹೃದಯವು ಅದನ್ನು ನ್ಯಾಯವಾಗಿ ಶಿಕ್ಷಿಸಬಹುದೆ? ಹೇಳಿರಿ! ಸತ್ತ ಮಗು ವನ್ನು-ಗಂಡನನ್ನು ಸುಡುಗಾಡಿಗೊಂಡು ದಹನ ಮಾಡಿ ಬರಬಹುದೆ ಈ ಹೆಣ್ಣು ಹೃದಯು ! ಇದು ಮಾತೃಹೃದಯು ತಾಯಿಾ ! Therefore man is man and woman is woman.

**ಮೀರಾ ಮೇರಿ:**—ಯಾಕೆ ಪ್ರೊಫೆಸರ ಪರಮೇಶ್ವರನ್‌ರೇ, ಹೆಣ್ಣು ರಾಜ್ಯವನ್ನಾಳಿಲ್ಲವೇನು ? ಲಕ್ಷ್ಮೀಬಾಯಿ, ಚನ್ನಮ್ಮ, ವ್ಹಿಕ್ಟೋರಿಯಾ, ಎಲಿಜಾಬೆತ್ ಇವರ ಚರಿತ್ರೆಗಳು ಏನು ಹೇಳುವವು ?

**ಪರಮೇಶ್ವರ:**—ರಾಜ್ಯವಾಳಿರಬಹುದು ರಾಣಿಯರಾಗಿ, ಆದರೆ ಗಂಡ ನನ್ನು ಆಳಿರಲಾರದು, ಭಾರತದ ರಾಣಿಯರಿಗಂತೂ ಬೆಂಕಿಯೊ ನೀರೊ ಇದೇ ಕೊನೆಯ ಆಶ್ರಯ ! ಎಲಿಜಾಬೆತ್-ವ್ಹಿಕ್ಟೋರಿಯಾ ಇವರು ರಾಣಿಯರಾಗಿ ದ್ದರೂ ಹೆಣ್ತನ ಅವರನ್ನು ಬಿಟ್ಟಿದ್ದಿಲ್ಲ. This is all Psychology, Psychology and nothing else.....ಹೆಂಗಸಿಗೆ ಗಂಡನನ್ನು ಆಳ ಬೇಕೆಂಬ ಆಸೆಯಿರುತ್ತದೆ. ಆದರೆ ಹೆಣ್ಣು ಅಂತ:ಪುರದಲ್ಲಿ ಆಳಬಹುದಲ್ಲದೆ ರಾಜಕೀಯ ರಂಗದಲ್ಲಿ ಅಲ್ಲ. your superiority complex is ruling your husband but the sentimental heart of a wife must yield to her husband (ನಿಮ್ಮ ಆತ್ಮಗೌರವದ ಭಾವನೆಯು ನಿಮ್ಮ ಗಂಡನನ್ನಾಳಬಹುದು. ಆದರೆ ಹೆಣ್ಣಿನ ಭಾವನಾತ್ಮಕ ಹೃದಯವು ಗಂಡಿಗೆ ಸೋಲಲೇ ಬೇಕು

**ನಳಸಿಂಹ:**—(ಈ ಕಾವನ್ನು ನೋಡಿ ಕಾತರನಾಗಿ) ಅಲ್ಲಾss ಚಹಾ ಆರಿ............

**ದುರ್ಗಾ:**—Mr Parameswar I am sorry. Good bye. ಚಹಾ ಬೇಡ ಒಳಗೆ ಒಯ್ದಿಡು. (ನಳಸಿಂಹನು ವಿಷಣ್ಣವದನನಾಗಿ ಮಿಕಿಮಿಕಿ ನೋಡುವನು) ಯಾಕೆ, ಕೇಳಿಸಲಿಲ್ಲವೇನು? ನನ್ನ ರೇನುಕೋಟು ತಂದಿಡು, ಕ್ಲಬ್ಬಿಗೆ ಹೊರಡುವ ಹೊತ್ತಾಯಿತು. ರಾತ್ರಿ ಬರೋದು ತಡ ವಾದರೆ ಕಂದೀಲು ತೆಗೆದುಕೊಂಡು ಕ್ಲಬ್ಬಿಗೆ ಬರಬೇಕು ತಿಳಿಯಿತಿಲ್ಲೋ. ನಿತ್ಯದ ಕೆಲಸ ಸಹಾ ಮತ್ತೆ ಮತ್ತೆ ಹೇಳಬೇಕು ನಿಮಗೆ. ಇವೊತ್ತು ತೋಟಕ್ಕೆ

ನೀರು ಹಾಕುವುದಾಗಿದೆಯೊ ಇಲ್ಲವೊ ? ರಾತ್ರಿಯ ಅಡಿಗೆ ಏನಾಗಬೇಕು ಗೊತ್ತಿದೆಯೊ ಇಲ್ಲವೊ? ನನ್ನ ಬೆಡ್‌ಸೀಟ್ ಇವೊತ್ತಾದರೂ ಬದಲಿಮಾಡಿ ಹಾಸು ಮತ್ತೆ. ಇವೊತ್ತಾದರೂ ರಾತ್ರಿ ಆ ಕೂಸು ಸ್ವಲ್ಪ ಕಿರುಚದಂತೆ ಏನಾದರೂ ಹೊಟ್ಟೆಯ ವ್ಯವಸ್ಥೆ ಮಾಡಿರಿ ಅದಕ್ಕೆ. (ಆವೇಶದ ಭರದಲ್ಲಿ ಏನು ಮಾತಾಡಬೇಕೆನ್ನುವುದು ತಿಳಿಯದೆ ಸುಮ್ಮನೆ ಟೇಬಲ್‌ಮೇಲಿನ ಸಾಮಾನುಗಳನ್ನು ಕಿತ್ತಾಡಿ ಹಾಕುವಳು) ಹೋಗಿ-ಯಾಕೆ ನಿಂತಿರಿ ಖಂಬದಂತೆ.

**ಪರಮೇಶ್ವರ**:— ಛೆ-ಛೆ-ಛೆ! (ಟೇಬಲ್ ಗುದ್ದಿ) I can't bear it, I can't bear it. ಗಂಡಸಿನ ಅವಹೇಳನಕ್ಕೆ ಮರ್ಯಾದೆಯೇ ಇಲ್ಲವೆ?

**ವಿಶಾರದ-ಮೇರಿ**:—ದೇವಿ, ಮುಂದಿನ ಸಲದಿಂದ ಯಾರೂ ಗಂಡಸರನ್ನು ಉಪನ್ಯಾಸಕ್ಕೆ ಕರೆಸತಕ್ಕದ್ದಲ್ಲ.

**ಪರಮೇಶ್ವರ**:—Thank you. (ಎದ್ದು ಹೊರಟು ನಿಲ್ಲುವನು)

**ನಳಸಿಂಹ**:— (ಅಂಜುತ್ತ ಅವನ ಹತ್ತಿರ ಹೋಗಿ) ಹಾಗೆ ಸಿಟ್ಟಿಗೇಳಬೇಡಿರಿ. ಸ್ವಲ್ಪ ಚಹಾಪಾನ ಮಾಡಿಕೊಂಡು ಹೋಗಿರಿ.

**ಪರಮೇಶ್ವರ**:—(ಅವನ ಬೆನ್ನು ತಟ್ಟಿ) I know your feelings are suppressed. (ನಿನ್ನ ಭಾವನಾವೇಶವೆಲ್ಲಾ ಹುದುಗಿದೆ. ನಾನು ಬಲ್ಲೆ) ಇದು ಇಂದಿಲ್ಲ ನಾಳೆ ಸ್ಫೋಟವಾಗಲೇ ಬೇಕು.

**ನಳಸಿಂಹ**:—ಯಾವ ಸ್ಫೋಟ ?

**ದುರ್ಗಾ**:—(ಕೈಯೊಳಗಿನ ಉಂಗುರ ಒಗೆದು) ಘಟಸ್ಫೋಟ!

**ನಳಸಿಂಹ**:—(ಹೋಗಿ ಕಾಲು ಬಿದ್ದು) ಅಯ್ಯೋ ನನ್ನ ಸತಿವ್ರತ್ಯಕ್ಕೆ ಭಂಗ ತರಬೇಡಿ. ನಿಮಗೆ ಸೆರಗೊಡ್ಡಿ ಬೇಡಿಕೊಳ್ಳುವೆ. ಅಯ್ಯೋ-ಅಯ್ಯೋ ನನ್ನ ಕೈ ಬಿಡಬೇಡಿರಿ.

**ದುರ್ಗಾ**:—(ಆಚೆಗೆ ಮೋರೆ ತಿರುವಿ, ಸುಮ್ಮನೆ (ಕೂಸನ್ನು ತೋರಿಸುತ್ತ) ಆ ಗೊಂಬೆಯನ್ನು ತೆಗೆದುಕೊಂಡು ನಡೆಯಿರಿ.

**ಪರಮೇಶ್ವರ**:— ಹ-ಹ-ಹ! ಹ-ಹ-ಹ! V for Victory- ಸ್ವಾಮಿ ನಳಸಿಂಹರೇ ನಡೆಯಿರಿ. ರಿಕ್ರೂಟಿಗೆ ಭರ್ತಿ ಆಗಿರಿ, ನರಸಿಂಹರಾಗಿರಿ.

**ದುರ್ಗಾ**;—ಹೂಂ ಹೊರಡಿರಿ,.......ರಣಬೇಡಿ!

- **ಪರಮೇಶ್ವರ:**—(ಮತ್ತೆ ಗಹಗಹಿಸಿ ನಗುತ್ತ) ಹೂಂ ನಡೆಯಿರಿ. Successful retreat (ಯಶಸ್ವಿಯಿಂದ ಹಿಂತಿರುಗುವದು) ಮಾತ್ರ ಮಾಡಬೇಡಿರಿ. (ಸ್ವಗತ) ಧಿಕ್ಕಾರವಿರಲಿ ಈ ಹೆಣ್ಣು ಹೆಬ್ಬುಲಿಗೆ. (ಮತ್ತೆ ಗಹಗಹಿಸಿ ನಗುತ್ತ ಹೋಗುವನು)

**ನಳಸಿಂಹ:**— (ಗಟ್ಟಿಯಾಗಿ ಪಾದಕ್ಕೆ ಬಿದ್ದು ದುಃಖಿಸುತ್ತ) ಅಯ್ಯೋ ನನಗೆ ವನವಾಸ ತರಬೇಡಿರಿ. ಸೀತೆಯ ವನವಾಸಕ್ಕೆ ವಾಲ್ಮೀಕಿಯಾದರೂ ಯಿದ್ದ. ನನಗ್ಯಾರು ದಿಕ್ಕು. ನಿಮ್ಮ ಪಾದದಲ್ಲಿಯೆ ನನಗೆ ಮುಕ್ತಿಯಾಗಲಿ. (ಸಾಷ್ಟಾಂಗ ನಮಸ್ಕಾರ ಹಾಕುವನು.)

**ದುರ್ಗಾ:**— (ತಿರಸ್ಕಾರ ಮತ್ತು ವಿಜಯದ ಉನ್ಮಾದದಿಂದ) ಹ-ಹ! ಗಂಡಸಂತೆ, ಗಂಡುಸು! ಹುಂ-ಚಹಾ ಹಾಕು. ಹತ್ತು ನಿನ್ನ ಕೆಲಸಕ್ಕೆ.... (ಮೋರಿಯನ್ನು ನೋಡಿ ಮುಗುಳುನಗೆ ನಗುವಳು ನಳಸಿಂಹನು ಸಂಭ್ರಮದಿಂದ ಚಹ ಹಾಕುತ್ತಿರುವಾಗ-)

—ತೆರೆ

---

# ಟೆಲಿಫೋನ ಟಾಕೀಜ್!



(**ದೃಶ್ಯ:** ಎದುರಿಗೇ ಕಾಣುವುದು ತ್ರಿಲೋಕ ಸಂಚಾರಿ ನಾರದನ ಸುದ್ದಿಯ ಕಾರಖಾನೆ. ಸುತ್ತಲೂ ನೂರಾರು ಸುದ್ದಿಗಾರರು ಎರಡೂ ಕಿವಿಗೆ ಫೋನಿನ ಬಾಯಿ ಹಚ್ಚಿಕೊಂಡು ಮಧ್ಯದಲ್ಲಿ ಮಾತನಾಡುತ್ತ ಕುಳಿತಿದ್ದಾರೆ. ಈ ಎಲ್ಲ ಸುದ್ದಿಗಾರರ ಮುಖಸ್ಥನ ಠೀವಿಯಿಂದ ನಾರದನು ಎದುರಿಗೇ ಸಾವಿರಾರು 'ಫೋನ್' ಕನೆಕ್ಶನ್ ಇಟ್ಟುಕೊಂಡು ಭೂಲೋಕದ ವಾರ್ತೆಯನ್ನೆಲ್ಲಾ ಮೇಲಕ್ಕೆ ತಿಳಿಸುತ್ತಾನೆ. ಇಂದ್ರ ಲೋಕ, ಬ್ರಹ್ಮಲೋಕ, ವೈಕುಂಠ, ಕೈಲಾಸ, ಯಮಲೋಕ, ಚಿತ್ರಗುಪ್ತರ ಕಚೇರಿ ಹೀಗೆ ಬೇರೆ ಬೇರೆ ಕಡೆಗೆ ಅವನ ವರ್ತಮಾನ ಶಾಖೆಗಳು ಹೋಗಿವೆ. ಒಮ್ಮೆ ಫೋನ್ ಮಾಡಿದನೆಂದರೆ ಮೇಲಿನ ಎಲ್ಲ ಕಡೆಗೂ ಅವನ ಸುದ್ದಿ ಮುಟ್ಟುತ್ತವೆ. ಒಂದೊಂದು ಸಲ ಒಂದೊಂದು ಸಮಸ್ಯೆಯನ್ನು ಕುರಿತು ನಾರದನು ಫೋನ್ ಮಾಡುತ್ತಾನೆ. ನಾರದನ ಸುದ್ದಿಯ ಸುರಿಮಳೆಯೋ ನಮ್ಮ ಲೇಖನಮಾಲೆಯ ಹೂಮಳೆ.)

**ನಾರದ:**—ಹಲ್ಲೋ! ನಾನೊ, ನಾನು ತ್ರೈಲೋಕ್ಯರೂಟರ ಚಕ್ರವರ್ತಿ ನಾರದಮೂರ್ತಿ ಹಲ್ಲೋ! ಹಲ್ಲು ಮುರೆಸಿಕೊಂಡಿರಿ ಅಂದೆ ಹೀಗೆ ಮಾಡಿದರೆ! (ಸಿಟ್ಟಿನಿಂದ ಹಾಗೆ ಅಭಿನಯಿಸುವನು.) ಆಂ ?....ಹೂ. ನಿಮಗೇ ನಿಮಗೇ ಚಿತ್ರಗುಪ್ತರಿಗೇ ನಾನೀಗ ಮಾತಾಡತ ಇರೋದು. ಇದೇನು ವಿಚಿತ್ರ! ಏನಂದಿ? ಗುಪ್ತ ಗುಪ್ತ ಆದನ?....ಓಹೋ! ಗುಪ್ತ ಕಾರ್ಯಕ್ಕೆ ಹೋಗ್ಯಾನ ? ಯಮಲೋಕಕ್ಕೇ ಕನೆಕ್ಶನ್ ಕೊಡು ಅಂದ್ಯಾ? ಆದರ ಅಲ್ಲಿ ಕನ್ನಡ ಭಾಷೆ ಯಾರಿಗೆ ತಿಳೀತದ? ಆ ಸತ್ತ ಲೋಕದೊಳಗ ಬರೇ ಸಂಸ್ಕೃತ ಅಲ್ಲದೇ ಕನ್ನಡ ಎಲ್ಲೀದ ಬರಬೇಕು ಮಣ್ಣಾಗ ...ನಿನಗೆ ಏನು ಧಾಡಿ ಅಂತೀನಿ! ಸರಿ, ದಾಡಿ ಮಾಡಿಕೊಳ್ಳಲಿಕ್ಕೆ ಹತ್ತಿದ್ದ್ಯಾ? ಕೈ ಖಾಲಿ ಇರದಿದ್ದರ ಬಾಯಿಗೇನು ಬಂದದ್ದು, ಹೊಡಿ....ಅಲ್ಲಾ ಗುಪ್ತ ಈಗ ಹೋದದ್ದು ಕಾರ್ಯಕ್ಕೊ ಕಾರಸ್ಥಾನಕ್ಕೊ? ಯಾಕ? ಬಂಗಾಲದ ಖಾನೇಸುಮಾರಿ ಇನ್ನೂ ಮುಗಿಲಿಲ್ಲ

ಏನು? ಬರಗಾಲದ ಎರಡನೇ ಆವೃತ್ತಿನ? ರುದ್ರ ಹೋಗಬೇಕೊ, ಇಂದ್ರ ಹೋಗಬೇಕೋ ಅಂತ ವಿಚಾರ? ಮಳೆಗಾಲ ಅದ, ಇಂದ್ರನೇ ಹೋಗಲಿ.... ವರಣ? ಹಾ, ವರುಣ ಎಲ್ಲಿ? ಕರೇಸೀರಿಗೆ ವರ್ಗ ಆಯಿತು? ಅಲ್ಲಾ ಈ ಸಾರೆಸೂ ಬಂಗಾಲನ್ನೇ ಯಾಕ? ಬಂಗಾಲಕ್ಕೇ ಏನು ಕೊಂಬು ಮೂಡ್ಯಾವ ಏನು? ಹೌದ?....ಓಹೊ ಕೊಂಬು ಮೂಡಿತಂತೇ ಬಂಗಾಲ ಹೋಗಿ ಬರಗಾಲ ಆಯಿತ? ಕರ್ನಾಟಕದ ಪಾಳಿ ಏನು ಇಲ್ಲ ಹೌದಲ್ಲೊ?....ಅದೇ ನಾನೂ ಹೇಳಿದ್ದು. ವಿಶ್ವವಿದ್ಯಾಲಯ ಆಗಬೇಕ್ಕಂದದ ಮತ್ತೆ ಅಲ್ಯಾಕ ನಿಮ್ಮ ತಾಂಡವನೃತ್ಯ ಅಂತ!....ಹೌದು ಸುಳ್ಳಲ್ಲ ಕರ್-ನಾಟಕವೇ ಒಂದು ನಾಟಕ ಮತ್ತೆ ಅಲ್ಲಿ ಯಾಕ ನಿಮ್ಮ ನಾಟಕ ಕಂಪನಿ ಒಯ್ಯುತ್ತೀರಿ ಅಂತ!....ಹೂಂ. ಹೌದು, ಹೊಸ ಹೊಸ ಕಾಲೇಜೂ ಆಗಲಿಕ್ಕ ಹತ್ಯಾವ. ಅದೇ ಅಂದೆ. ಅಲ್ಲೇ ನಿಮ್ಮ ತಂಬೂರಿ ಬರಗಾಲದ ಬಾವುಟಾ ಹಚ್ಚಿದರ ಕಾಲೇಜುಗಳ ಫಜೀತಿ ಏನು ಅಂದೇ? ಸರಿ, ಇದೆಲ್ಲಾ ಮುಂದೆ ಮಾತಾಡೋಣ. ಸದ್ಯಕ್ಕ ನನ್ನ ಸುದ್ದಿ ಕೇಳಿಕೊ....ಆಂ? ರೂಟರ ಕಂಪನಿಯವರು ನನಗಿಂತ ಮೊದಲೇ ಯುದ್ಧದ ಸುದ್ದಿ ತಿಳಿಸಿಬಿಟ್ಟ್ಯಾರ? ಚೇಷ್ಟಿ ಮಾಡತೀಯೇನು?....ಹ-ಹ-ಹ! ಹೀಂಗ! ಸಕ್ಸಸ್‌ಫುಲ್ ರಿಟ್ರೀಟ್ ಮಾಡೋಮುಂದ ಬಾಂಬು ಬಡಿದು ಸತ್ತಂಥ ವೀರರು ಹೇಳಿದರ?...ಆಕ್ಸಿಸ್ಸ್, ಅಲಾಯಿಸಾಜು ಮತ್ತೆ ಅಲ್ಲಿಯೂ ತೋಳು ಏರಿಸ್ಯಾರೊ ಏನು? ತೋಳು ಏರಿಸಿದರೂ ಅಲ್ಲೇನು ಕಸಗೊಳ್ಳುತಾರ ಬಿಡೂ....ನಿಮ್ಮಲ್ಲೇ ಸತ್ತವರಲ್ಲಿ ಸಮುತಾವಾದ ಅವ ಅಂತ ಹಿಟ್ಲರನ್ನ ಮ್ಯಾಲಿ ಬರಗೊಡಸಲ್ರೇನು?....ಏನು ನಾನು ಸುದ್ದಿನಾದರೂ ಹೇಳಲ್ಯೊ ಬ್ಯಾಡೊ? ಮತ್ತೆ ಸುಳ್ಳುಸುಳ್ಳೇ ನನ್ನ ತಂಬೂರಿಯ ತಂತಿ ಹಿಡಿಸಿ ಯಾಕೆ ಕಳಿಸಿದಿರಿ ಭೂಲೋಕಕ್ಕೆ?....ನನ್ನ ತಂಬೂರಿ ತಂತಿಯಿಂದ ಟೆಲಿಗ್ರಾಮು ಮಾಡು ಅಂದ್ಯಾ?....ನನ್ನ ತಲೆಗ್ರಾಮುದೊಳಗ ಸುಳಿಯುವುದನ್ನೆಲ್ಲಾ ಹೇಳಬೇಕ? ತಾರತಂತಿ ಅಲ್ಲದು, ನನ್ನ ಜೀವದ ತಂತಿ; ನನ್ನ ಜೀವನದ ಗಾನವನ್ನು ಮಿಡಿಯುವ ತಂತಿ....ಸುದ್ದಿ ಬರೆದುಕೊಳ್ಳಲಿಕ್ಕೆ ಅವಕಾಶ ಇಲ್ಲ? ಅಂದರ? ಕಾಗದ ಇಲ್ಲೊ, ಏನು ವೇಳೆ ಇಲ್ಲೊ? ಏನು ಅಥವ ಮೈಯೊಳಗ ತ್ರಾಣ ಇಲ್ಲೊ? ಒಂದು ಬಟ್ಟಲ ಡಬ್ಬುಹಾಕಿ ಬರೆದುಕೊ ಬೇಕಾದರ!....ಇಲ್ಲಿಯ ಹೊಸಾ ಸುದ್ದಿ ಅಂದರ ಅವೇ-ಜನಾ ಎವರ ಮೇಲೆ ಬರೆಯಬೇಕು ಅಂತ ವಿಚಾರ ಮಾಡಲಿಕ್ಕೆ ಹತ್ತೇದ. ಮತ್ತೆ ಮೊಳೆ ತೊಗೊಂಡು ತಾಡವೋಲೆ ಮೇಲೆ ಬರೆಯಬೇಕು. ಅಂತ ಕೆಲವು ಲೇಖಕರು ಹಳೆಯ ಕಂಠ ಮಸೆಯಲಿಕ್ಕೆ

ಹತ್ಯಾರ; ಕೆಲವರು ಕಾಗದಾನೇ ಕೊಡಿರೊ ಅಂತ ಕಂಠಶೋಷ ಮಾಡ ಲಿಕ್ಕೆ ಹತ್ಯಾರ. ಛಾಪಖಾನೆಯೊಳಗಿನ ಕಂಪೋಜಿಟರರು ಪಾಪಾ, ಅವರ ಗತಿ ಏನು? ಬರೇ ಮೊಳೆ ಜೋಡಿಸಿ ಹಣೆಯ ಮೇಲೆ ಒತ್ತಿಕೊಬೇಕೇನು, ತಮ್ಮ ಹಣೆಯಬರೆಹ ಅಂತ?....ಏನು ಮೊಳೆಗಳ ಸೀಸಾ ಎಲ್ಲಾ ಕರಗಿಸಿ ಕಿವಿಯೊಳಗೆ ಹಾಕಿಕೊಬೇಕೊ, ಜಗತ್ತಿನ ಕೂಗು ಕೇಳಿಸಬಾರದು ಅಂತ.... 'ಕುಂತಪತ್ರದ ಉಲುಗೆಡವಗ್ಗಳಿಕೆ'ಯ ಕುಮಾರವ್ಯಾಸ ನಗುತ್ತಿರಬೇಕಲ್ಲ ಈಗ?....ಅದಕ್ಕಿಂತಲೂ-ಲೆಕ್ಕಣಿಕೆ-ಛಾಪಖಾನಿ-ತಾಡವೋಲೆಗಳ ತಾಪತ್ರಯ ಗಳಿಲ್ಲದೆ ಶ್ರುತಿ-ಸ್ಮೃತಿ ಅಂತ ವೇದ ಸಾರಿದ ಋಷಿಗಳೂ ಇಂದಿನ ವಿಜ್ಞಾನದ ಹಾಡು ನೋಡಿ ಗಡ್ಡ ಹುರಿ ಹಾಕುತಿರಬಹುದೇ....ಹಾ, ಬರಗಾಲಾ ಅಂತ 'ತುತ್ತಿನ ಚೀಲ'ದ ಮೇಲೆ ಮತ್ತೆ ಕವಿತೆ ಬರೆಯಬೇಕೆಂದರ ಕಾಗದ ಇಲ್ಲ; ಮಶಿ ತುಟ್ಟಿ. ಎದೆಯೊಳಗಿನ ರಕ್ತ ಎದ್ದಿ ಬರೆಯಬೇಕು ಅಂದರ, ರೇಶನ್– ಕೂಳಿನ ರಕ್ತ—ಎಷ್ಟು ಪೂರೈಸೀತು? ಹೀಗಾಗಿ **ಸಾಹಿತಿಲೋಕ** ಎಲ್ಲಾ **ಸಾಯಿತಿಲೋಕ** ಆಗೇದ. ಏನು ಕೆಲಸ ಮಾಡಿದರೂ ಬಾಯಿಂದನೇ ಮಾಡಬೇಕು. ಎತ್ತಿದ ಕೈ, ಚಿತ್ರದೊಳಗಿನ ಹಿಟ್ಲರನ ಕೈಯಂತೆ, ಮಂತ್ರ ಶಕ್ತಿಯಿಂದಲೋ ಎಂಬಂತೆ ಹಾಗೆ ನಿಂತು ಹೋಗುತ್ತದೆ. ಅಂತೂ ಇದಿಷ್ಟು ತಾಜಾ ಬಾತ್ಮಿ....ಎಲ್ಲಿಯಾದರೂ ಬೆಂಕಿ ಹಚ್ಚಬೇಕು ಅಂಬುವವರಿಗೆ ಚಿಮಣಿ ಎಣ್ಣೆ ಸಿಗೋದಿಲ್ಲಾ ಇದೊಂದು ಸಂತೋಷದ ಸಂಗತಿ. ಬ್ಲೇಡು ತುಟ್ಟಿ ಯಾಗಿ ಎಷ್ಟೋ ಜನ ನಮ್ಮಂತೆನೇ ಋಷಿಗಳು ಅಗಬೇಕು ಅಂತ ತಲೆತುರಿಸಿ ಕೊಳ್ಳಲಿಕ್ಕೆ ಹತ್ತಿದ್ದಾರೆ. ಇದೊಂದು ಎರಡನೆಯ ಆನಂದದ ವಾರ್ತೆ. ಎಷ್ಟೋ ರಸಿಕರು ಚಹಕ್ಕೆ ಸಕ್ಕರೆ ಇಲ್ಲದೆ, ನಮ್ಮ ಹಾಗೆ ಅಮೃತ ಸಾಧ್ಯವಾಗದೆ ಬರಿ ಅಧರಾಮೃತದಮೇಲೆಯೇ ಸಂತೋಷಪಡಬೇಕಾಗಿದೆ. ಸಾಹಿತಿಗಳ ಕೈಚೀಲಗಳೆಲ್ಲಾ ತುತ್ತಿನ ಕೈಚೀಲಗಳಾಗಿ ಪರಿವರ್ತಿಸಿವೆ....ಹಳ್ಳಿಗರು ವಿಶೇಷ ವಾಗಿ ಪ್ರಯಾಣಿಕರು ಕಡ್ಡಿಪಟ್ಟಣ ಪೂರೈಸದೆ, ಲಂಕಾಪಟ್ಟಣದ ಅವಶೇಷ ವಾದ ಚಕಮಕಿ ಕಲ್ಲನ್ನು ಕಟೆಯುತ್ತಿರುವುದು ಕಣ್ಣಿಗೆ ಬೀಳುತ್ತದೆ. ಸ್ಟ್ಯಾಂಡರ್ಡ ಅರಿವೆಗಳೇ ಪ್ರಬಲವಾಗಿ ಊರಿಗೆ ಊರೇ ಸಮವೇಷ (Uniform)ದಲ್ಲಿ ಸಾಗುತ್ತಿರುವಂತೆ ಎನಿಸುತ್ತದೆ....ಏನು ಹಾಳಿ ತೀರಿತೊ? ಸರಿ. ಮುಂದಿನ ಸಲ ಕೆಲಕೆಲವು ಒಳ್ಳೊಳ್ಳೆಯ ದೃಶ್ಯಗಳನ್ನು ವರ್ಣಿಸು ತ್ತೇನೆ. ಅಚ್ಛಾ! ನಮಸ್ತೆ!

———o———

# ಅಹಲ್ಯಾ ಕಲ್ಯಾಣ



ಜನಾಬಾಯಿ ಅಹಲ್ಯೆಯ ಕೋಣೆಯ ಮುಂದೆ ಬೀಸುತ್ತ, ಹಾಡು ಹೇಳುತ್ತಿರುವಳು.)

ಅಡಗೀಯ ಮನಿಯೊಂದು ಗರತೀಯ ಗುಡಿಯವ್ವಾ ।
ಅಡಗೀಯ ಸವಟು ಅಕಿ ಹುಟ್ಟು ।
ಅಡಗೀಯ ಸವಟು ಅಕಿ ಹುಟ್ಟು ಅದರೀಲಿ ।
ಅನ್ನಪೂರಣಿಯ ಮರಸ್ಯಾಳ ॥
ಗರತೀಯ ಮನಿಮುಂದ ಸರಸೋತಿ ಕುಣಿದಾಳ ।
ರತಿಗೂಡ ಸಿರಿಘುಗಡಿ ಆಡ್ಯಾಳ,
ರತಿಗೂಡ ಸಿರಿಘುಗಡಿ ಆಡ್ಯಾಳ ಗರತೀಯ ।
ಗುಣಕ ಮೈಮಣಿಸಿ ಬಾಗ್ಯಾಳ ।

**ಅಹಲ್ಯೆ:**— (ಹೊರಗಿನಿಂದ ಪ್ರವೇಶಿಸುತ್ತ) ಓ! ಸಂತ ಜನಾಬಾಯಿ ಯವರೇ, ಇನ್ನೊಮ್ಮೆ ಹೀಂಗ ಕೇಸರು ಬಾಸರು ಇಡಿಸಿದಿ ಅಂದರ "ಪಬ್ಲಿಕ್ ನುಯಿಜನ್ಸ್" ಅಂತ ನಿನ್ನ ಮ್ಯಾಲೆ ಖಟ್ಲೆ ಹಾಕತೇನಿ ನೋಡು. ನಿನ್ನ ಗರತಿಯ ಗುಡಿಮುಂದ ಕುಣಿದಾಡಿದ ಸರಸ್ವತಿ, ಇದು ನೋಡು ನನ್ನ ಕೋಣೆಯೊಳಗ ಹಿಮಾಲಯದ ಎತ್ತರ ಬಿದ್ದುಕೊಂಡಾಳ. ನಿನ್ನ ಗರತೀ ಹಾಡು ಕೇಳುತಾ ಕೂತರೆ ನಮ್ಮ ಸರಸೋತಿ ಸೆರಗು ಸೊಂಟಕ್ಕೆ ಸುತ್ತಿ ಭಾವಿ ಹಾರಿಕೋಬೇಕಾದೀತು.

**ಜನಾ:**—(ಗದ್ದದ ಮೇಲೆ ಬೊಟ್ಟಿಟ್ಟುಕೊಂಡು) ಅಯ್! ಅಯ್ ನನ ಶಿವನ! ಬಿಡ್ರಿ ಬಾಯಾರ ನೀವು ಬಹಾಳ ಚೇಷ್ಟಿ ಮಾಡುವವರು. ಏನೋ ನಮ್ಮ ಸಣ್ಣ ಬಾಯಿಯವರು ಮನ್ಯಾಗ ಇಲ್ಲಾ ಅಂತ........

**ಅಹಲ್ಯ:**—ನಿನ್ನ ದೊಡ್ಡ ಬಾಯಿ ತೆರೆದು ಹಾಡಲಿಕ್ಕೆ ಹತ್ತಿದ್ದೇನು? ಆಗಲಿ, ಈ ಸಣ್ಣ ಬಾಯಿ ಬಾಯಿ ಮುಚ್ಚಿ ಕಿವಿಯೊಳಗ ಬೊಟ್ಟು ಇಟ್ಟು ಕೊಂಡು ಕಣ್ಣಿನಿಂದಲೆ ಓದುತಾರ ಆಯಿತಿಲ್ಲೋ?

**ಜನಾ:**—ಹೌದರೀ ಬಾಯಿ, ನಿಮ್ಮ ಸಾಲ್ಯಾಗ ಹಿಂತಾ ಹಾಡು ಕಲಿಸಾಂಗ ಇಲ್ಲೇನ್ರಿ? ನಾನೂ ಮೊನ್ನೆ ನಿಮ್ಮನ್ನ ಕರೀಲಾಕಂತ ನಿಮ್ಮ ಸಾಲಿಗೆ ಬಂದಿದ್ನಿರೆವಾ, ಆಗ ನಾನೂ ನೋಡಿದೆ. ಅಯ್ಯ ನನ್ನ ಜೊಗಳೆ! ಇದೇನವ್ವಾ ಅಂತ ಗಾಬರಿಹೋಡದು ನೋಡಿದ್ನಿ. ಹೆಣ್ಣು ಗಂಡು ಕೂಡೆ ಕುಣದಾಡಕೊಂತ ಹಾಡತಿದ್ರು. ಅದೇನು ಇಂಗ್ರೇಜಿ ಹಾಡೆನ್ರಿ? ಇದೆಂಥಾ ಹಾಡ್ರಿ ಬಾಯಿ, ಬೆಕ್ಕು ಕಡಿದಾಡಿದಹಾಂಗ! ಎಲ್ಲಿ ಒಂದು ಜರಾ ಹೇಳ್ರಿ ನೋಡೋಣ, ನೀವು ಹ್ಯಾಂಗ ಹೇಳತೀರಿ?

(ಅಹಲ್ಯೆ ನಗುತ್ತ ಯಾವುದೋ ಒಂದು ಇಂಗ್ಲೀಷ್ ಗೀತೆಯನ್ನು ಹೇಳುವಳು. ಜನಾಬಾಯಿ ಹಿಟ್ಟು ಗುಡಿಸಿ ಬುಟ್ಟಿಯಲ್ಲಿ ತುಂಬಿ "ಅಯ್ ನನ ಗರತೀ ಹಾಡs!" ಎಂದು ಬೆರಗು ಬಟ್ಟು ಒಳಗೆ ಹೋಗುವಳು. ಅಹಲ್ಯೆಯು ಕೋಣೆಯೊಳಗೆ ಪ್ರವೇಶಿಸುವಳು ಓದುವ ಕೋಣೆ ಅಚ್ಚುಕಟ್ಟಾಗಿದೆ ತನ್ನ ಇಂಗ್ಲೀಷ ಪದ್ಯ ಪುಸ್ತಕದ ಹೊಟ್ಟೆಯಲ್ಲಿ "ಖಂಜಾಚಿ"ಯ ಪದ್ಯಾವಳಿ ಇಟ್ಟುಕೊಂಡು "ಲೋಟ್-ಗಯೀ" ಎಂಬ ಹಾಡನ್ನು ಪಾಠ ಮಾಡುತ್ತಿದ್ದಾಳೆ ಆಗಾಗ ಒಮ್ಮೊಮ್ಮೆ ಒಳಗೆ ಇಣಿಕಿ ತಾಯಿಯ ಭೀತಿಯಿಂದ ಯಾವುದೋ ಇಂಗ್ಲೀಷ ಕವಿತೆ ಅನ್ನಹತ್ತುತ್ತಾಳೆ. ಒಮ್ಮೊಮ್ಮೆ "ಲೋಟ್‌ಗಯೀ" ದಾಟಿಯಲ್ಲಿಯೇ ಯಾವುದೋ ಇಂಗ್ಲೀಷ ಗೀತೆಯನ್ನು ಹೇಳುತ್ತಾಳೆ)

**ದುರ್ಗಾಬಾಯಿ:**—(ಒಳಗಿನಿಂದಲೆ, ಅಹಲ್ಲೀ, ಏ (ಅ) ಹಲ್ಲೀ (ಅಹಲ್ಲಿ, ಆಹಲ್ಲಿ ಎಂಬ ಅವಸರದಲ್ಲಿ ಒಮ್ಮೊಮ್ಮೆ "ಅ" ಲೋಪವಾಗಿ ಬರೀ "ಹಲ್ಲಿ" ಎಂದಿಷ್ಟೆ ಕೇಳಬರುವುದು) ಯೇನಯೇ ಹಲ್ಲೀ—

**ಅಹಲ್ಯೆ:**— ಸುರುವಾಯಿತು, ನಮ್ಮ ದುರ್ಗಾದೇವತೆಯ ಅವತಾರ. (ಒಳಗಿನಿಂದ ಮತ್ತೆ 'ಏ ಹಲ್ಲಿ, ಏ ಹಲ್ಲಿs') ತತ್ಸಮ ತದ್ಭವಗಳ ಕೈಪಿಡಿಯೊಳಗ 'ಅಹಲ್ಯಾ' ಇದರ ತದ್ಭವ 'ಹಲ್ಲಿ' ಅಂತ ಒಂದು ಹೊಸಾ ತಿದ್ದುಪಡಿ ಮಾಡಬೇಕಾಯಿತು. ಏನು ಪವಿತ್ರ ಹೆಸರು ಅಂತ ನಮ್ಮ ಅವ್ವ ಅಹಲ್ಯಾ ಅಂತ. ಇಟ್ಟಾಳೆ. ಆಕೆಯ ಸೌಂದರ್ಯ ನೋಡಿ, ಸೋತು ಒಂದು ಕಣ್ಣು ಸಾಲದೆ ಸಾವಿರ ಕಣ್ಣು ಮಾಡಿಕೊಂಡು ನಿಂತಾ ಆ ಇಂದ್ರ. ಇಂದು ಈ ಅಹಲ್ಯೆಯನ್ನು

ನೋಡಲಿಕ್ಕೆ ಯಾವ ಚೆಂದಪ್ಪ ಮೂರನೆಯ ಕಣ್ಣು ತೆರೆದುಕೊಂಡು ಕೂತಾನೊ ಯಾರಿಗೆ ಗೊತ್ತು. ಆ ಚೆಂದಪ್ಪನ ಸಲುವಾಗಿಯೇ ನಮ್ಮವ್ವ ಮೂರುಮಂದಿ ಮಾಸ್ತರ ಜನರನ್ನು ಇಟ್ಟಾಳ. ಯುನಿವರ್ಸಿಟಿ ರಿಜಿಸ್ಟ್ರಾರನ ಚಿಕ್ಕಪ್ಪನಂತೆ ಈ ಚೆಂದಪ್ಪ ನಮ್ಮ ಪರೀಕ್ಷೆ ತೆಗೆದುಕೊಳ್ಳುವನಂತೆ. ಒಂದು ಹೆಣ್ಣಿನ ಕೈ ಹಿಡಿಯಬೇಕಾದರೆ ಆಕೆ ರತಿ ಆಗಿರಬೇಕು, ಸರಸ್ವತಿಯಾಗಿರಬೇಕು, ಲಕ್ಷ್ಮಿ ಯಾಗಿರಬೇಕು. ನಮ್ಮ ಮ್ಯಾಟ್ರಿಕದ ಯುನಿವರ್ಸಿಟಿಗಿಂತಲೂ ಈ ಮದುವೆಯ ಯುನಿವರ್ಸಿಟಿಯೊಳಗ ಪಾಸಾಗಬೇಕಾದರೆ ಪ್ರಾರಬ್ಧ ಬೇಕು ಅದಕ್ಕೂ. ಶಾಲೆಯಲ್ಲಿ ಇಲ್ಲದ ನೃತ್ಯ, ಸಂಗೀತ, ಸುದ್ಧಾ ಈ ಪರೀಕ್ಷೆಗೆ ಕಂಪಲ್‌ಸರಿ. ಸರಿ, ನಾನೇ ಮದುವೆ ಆಗೋದಿಲ್ಲಾ ಅಂದರ ನಮ್ಮಪ್ಪ ಯಾರಿಗೆ ಮದುವೆ ಮಾಡತಾನ? ನಾನೇನೋ ಮ್ಯಾಟ್ರಿಕ್ ಪಾಸಾಗಿ ಮುಂದೆ ಕಾಲೇಜಿಗೆ ಹೋಗಿ M. B. B. S. ಆಗಿ ಬಂದು ಆರ್ಥಿಕ ಸ್ವಾತಂತ್ರ್ಯದಿಂದ ಇರಬೇಕು ಅಂತೇನಿ. ನಮ್ಮವ್ವ ನಾನು ಬೇಗನೆ ಮುತ್ತೈದೆ ಸಾವಿತ್ರಿ ಆಗಿ ಮೂವತ್ತು ಮಕ್ಕಳ ತಾಯಿ ಆಗಬೇಕು ಅಂತಾಳ....ಆಗಲಿ ನಾನು ಡಾಕ್ಟರ ಆಗಿ ಬಂದು ಮೊದಲು ಈ ಸಾಮಾಜಿಕ ಸುಂಕರೋಗಕ್ಕೆ ಸೂಜಿ ಮದ್ದು ಹುಡುಕತೇನೆ. ಈ ಮುಪ್ಪಿನ ಮುತ್ತೈದೆಯರ ಮೂಢತನವನ್ನು ಮೂಲವಾಗಿ ಕಿತ್ತೊಗೆಯಲು ಒಂದು ರಾಮಬಾಣ ಹುಡುಕತೇನೆ. (ಎಂದು ಕಾಗದದ ಮೇಲೆ ಪ್ರೇಕ್ಷಕರಿಗೆ ಕಾಣುವಂತೆ ಒಂದು ಬಾಣದ ಚಿತ್ರ ತೆಗೆಯುವಳು.)

**ದುರ್ಗಾ:**— (ಅಕಸ್ಮಾತನದಿಂದ ಪ್ರವೇಶಿಸಿ) ಅಯ್ ನಮ್ಮವ್ವಾ! ಮಾಸ್ತರು ಬರೋ ಹೊತ್ತಿನ್ಯಾಗ ಚಿತ್ರಾ ತಕ್ಕೊಂತ ಕೂತಾಳ. ಏನು ತಲೀಗಿಲೀ ಕೆಟ್ಟದೇನು ಇದಕ್ಕೆ.

**ಅಹಲ್ಯಾ:**—ಮಿತಿಮೀರಿ ಉಂಡರ ಹೊಟ್ಟಿ ಹ್ಯಾಂಗ ಕೆಡತ್ತದೋ ಹಾಂಗೇ ಮಿತಿಮೀರಿ ಓದಿದರ ತಲೀನೂ ಕೆಡತ್ತದ ಅವ್ವಾ. ಫ್ರಾಯ್ಡಿನ ಮಾನಸಶಾಸ್ತ್ರ ನೀನು ಓದಿಲ್ಲೇನು ? ಮೊನ್ನೆ ನಮ್ಮ ಮಾಸ್ತರ ಬಾಯಿ ಹೇಳತಿದ್ರು-ಅದಕ್ಕೇ ಅಭ್ಯಾಸನೂ ರೇಷನಿಂಗ್ ಪದ್ಧತಿ ಮ್ಯಾಲೆ ಮಾಡಬೇಕು ಅಂತ. ಇನ್ನ ಸರಕಾರದವರೇ ಕಂಟ್ರೋಲ ಹಾಕುವವರು ಇದ್ದಾರ ಸಾಲೆಯ ಅಭ್ಯಾಸಕ್ಕ.

**ದುರ್ಗಾ:**—ನಾಕು ತಲಿತುಂಬ ಹರಟಿಹೊಡೆದೆಂದರ ನೋಡು, ಈಗ ಹೊಂಟಾನೇ ಮರದೇನು. ತೊಗೊಂಡು ಕೂಡು ಪುಸ್ತಕಾನ. ನಾಳೆ ಬೆಳ

ಗಾಗೋದರೊಳಗ ಕನ್ಯಾ ನೋಡಲಿಕ್ಕೆ ಬರತಾರ. ಆಗ ಓದಿಸಿದರ ಒಂದಾರೆ ಪಾಠ ಇಂಗ್ಲೀಷ ಬರಲಿ. ಅಷ್ಟಾರೆ ಓದಿ ಫಟ್ಟ ಮಾಡಿಕೋ. ಒಂದು ಅಲ್ಲದ ಹಾಂಗ ಮೂರು ಮಂದಿ ಮಾಸ್ತರನ್ನ ಇಟ್ಟರೂ ಒಬ್ಬ ವರಾ ಏನು ಪಾಸ ಮಾಡವಲ್ಲಾ. ಅಂಥಾ ರಂಭಾ, ಊರ್ವಶಿ ಅಂತಹಾ ಮಗಳು !

**ಅಹಲ್ಯಾ**:—ಅಂದರ, ನನ್ನ ರಂಭಾ ಊರ್ವಶಿನ್ನ ಮಾಡಲಿಕ್ಕೆ ಅಂತ ಇಟ್ಟೀಯೇನು ಮಾಸ್ತರನ್ನ? ನೃತ್ಯನೂ ಕಲೀತೇನಿ ಅಂದಮ್ಯಾಲೆ ಮೇನ ಕೆಯೂ ಆಗತೀನಿ.

**ದುರ್ಗಾ**:—ಯಾರಿಗೆ ಬೇಕಾಗೇದ ನಮ್ಮವ್ವಾ ಆ ನಿನ್ನ ನೃತ್ಯಾ, ನಿನ್ನ ಸಂಗೀತಾ. ಒಬ್ಬೊಬ್ಬ ವರಾ ಒಂದೊಂದು ಹೆಸರಿಟ್ಟು ಹೋಗತಾನ ಅಂತ ಹೇಳೀ ಸುರುವು ಮಾಡಿದ್ದು. ಸುಡ್ಲಿ, ನಮ್ಮ ಕಾಲಕ್ಕೆಲ್ಲಾ ಈ ನಾಟಕಾ ಸಿನೆಮಾ ನೋಡೇ ಮಾಡಿಕೊಂಡಾರ ?

**ಅಹಲ್ಯಾ**:—ಅಲ್ಲ ಅವ್ವಾ. ಇವತ್ತ ನಮ್ಮ ಮ್ಯಾಟ್ರಿಕ್ ಪರೀಕ್ಷೆಯ ಪರಿಣಾಮ ಅದ. ಇವೊತ್ತಾದರೂ ಒಂದು ದಿವಸ ಸೂಟಿ ಇರಲಿ.

**ದುರ್ಗಾ**:—ಸುಟ್ಟಿತು, ನಿನ್ನ ಮ್ಯಾಟ್ರಿಕ ಪರೀಕ್ಷಾ. ಆ ಮಾಸ್ತರ ಜನರಿಗೇನು ಫುಕಟಿ ರೊಕ್ಕ ಕೊಡಬೇಕೇನು ? ಅವಾಸಿ ದಾನಕ್ಕ ?

**ಅಹಲ್ಯಾ**:—ಅಲ್ಲಾ ಪರೀಕ್ಷೆ ಆಗಿ ಪರಿಣಾಮ ಬಂದರೂ ಇನ್ನೂ ನನ್ನ ಅಭ್ಯಾಸ ಹೇಳಿಸೋದು ಮುಗಿಸವಲ್ಲೀ.

**ದುರ್ಗಾ**:—ಹೆಚ್ಚಿಗೆ ಮಾತಾಡಿದಿ ಅಂದ್ರ ಟೊಂಕಾ ಮುರಿಸಿಕೊಂಡೀ. ಒಂದು ಮದಿವಿ ಆಗೋತನಕಾ ಹೇಳಿಸಿಕೋ ಅಂತsದ. ನಾಳೆ ಮದಿವಿ ಆಗಿಹೋದಿ ಅಂದ್ರ ಅದೇ ಅದ ಅಲ್ಲಾ, ಗುಡ್ಡಮುಟ್ಟಿ ಒಗೆಯೋದು; ಗುಡ್ಡ ಭಾಂಡಿ ತಿಕ್ಕೋದು. ಆ ಮ್ಯಾಲೆ ಯಾರು ಹೇಳಿಸಿಕೊ ಅಂತಾರ ನಿನಗ.

**ಅಹಲ್ಯಾ**:—ಇವೊತ್ತು ಅಂತೂ ನನ್ನ ಮನಸ್ಸು ಬರೋಬರೀ ಇಲ್ಲ, ನಾವೊಲ್ಲೆ.

**ದುರ್ಗಾ**:—ಅಯ್ಯ ಮಳ್ಳೀ ! ಮನಸ್ಸು ಬರೋಬರಿ ಇಲ್ಲಂತ, ಅಂದ ರೇನ ಹಾಂಗ? ಮತ್ತ ಆ ಮಾಸ್ತರ ಜನರ ಹೆಣಕ್ಕ ರೊಕ್ಕ ಬಡಿಯೋದೇನು ಛಂದಕ್ಕೇನು ? ಇವರಿಗೂ ಇಷ್ಟೊತ್ತಿಗೆ ಪೆನ್ಶನ್ ಆಗಿತ್ತು ಅಂದರ ನಿನಗೇನು ಹೇಳುಸತಿದ್ದಿಲ್ಲಾ. ಏನೋ ಇನ್ನೊಂದು ವರ್ಷ ನೋಕರಿ ಅದ ಅಂತ,

**ಅಹಲ್ಯಾ**:—ಚಲೋ ಅದ ನಿನ್ನದೂ ಶಿಕ್ಷಣದ ಧ್ಯೇಯ

**ದುರ್ಗಾ**:—ಸಾಕು ಸುಮ್ನ ಕೂಡು....ಅಕಾ ಮಾಸ್ತರು ಬಂದರೇನೋ ನೋಡು. ಒಂದೇ ಅಭ್ಯಾಸ ಹೇಳಿಸಿಗೊಳ್ಳಲಿಲ್ಲ ಅಂದರ ನೋಡು ಹೇಳಲಿಕ್ಕಿಲ್ಲಾ ಅಂದೀ. (ಎಂದು ಕಣ್ಣು ತೆರೆದು ಹೋಗುವಳು.)

**ಅಹಲ್ಯೆ**:—(ಹಣೆಹಣೆ ಬಡಿದುಕೊಂಡು) ಏನು ಮಾಡಲಿ! ನಮ್ಮ ಅವ್ವನ ಒಬ್ಬ ಹೆಡ್‌ಮಾಸ್ತರ ಆಗ್ಯಾಳ. (ಸುಧಾಬಾಯಿ. ಪ್ರವೇಶಿಸುವಳು. ಕೈಯೊಳಗೆ ಪರ್ಸ, ಚಿತ್ರಚಿತ್ರದ ಒಂದು ಪಾತಾಳು ಉಟ್ಟುಕೊಂಡು ಕಾಲೊಳಗಿನ 'ಶ್ಯೂಜ' ಬಿಚ್ಚಿ ಬರುವಳು.)

**ಸುಧಾ**:— (ಅಹಲ್ಯಾ 'ನಮಸ್ತೆ' ಮಾಡಲಾಗಿ) ನಮಸ್ತೆ, ಅಹಲ್ಯಾ. ಫೇಡೆ ತಯಾರು ಮಾಡೀಯೋ ಇಲ್ಲೊ?

**ಅಹಲ್ಯಾ**— (ಒಳಗೆ ಅವ್ವನನ್ನು ಇಣಕಿ ನೋಡಿ) ಮಾಸ್ತರ ಬಾಯಿ, ನಿಮಗೆ ಒಂದು ಧಡೆ ಫೇಡೆ ಕೊಡುತೀನಿ. ಇವೊತ್ತಾದರೂ ನನ್ನ ತಲೆಗೆ ಸ್ವಲ್ಪ ವಿಶ್ರಾಂತಿ ಕೊಡಿರಿ.

**ಸುಧಾ**:—ಅಗs—ಹಾಂಗೆ ಆಗಲಿ ಹಾಂ? ನಾನೂ ಇವತ್ತು ಸ್ವಲ್ಪ ಪೇಟಿಯೊಳಗ ಹೋಗಬೇಕಾಗೇದ.

(ಒಳಗಿನಿಂದ ದುರ್ಗಾಬಾಯಿ, 'ಹಲ್ಲೀ, ಏ ಹಲ್ಲೀ ಅಭ್ಯಾಸ ಕೇಳಸೋದಿಲ್ಲಲ್ಲ' ಎನ್ನುತ್ತ ಬರುವಳು.)

**ಅಹಲ್ಯಾ**:— ಅವ್ವಾ, (ಮಾಸ್ತರ ಬಾಯಿಯ ಮುಖನೋಡಿ) ಅವ್ವಾ ಇವೊತ್ತೇನೋ ಮಾಸ್ತರಬಾಯಿಗೆ ಸ್ವಲ್ಪ ಕೆಲಸ ಅದ ಅಂತ. (ಬಾಯಿ ಬೇಡ ಬೇಡವೆಂದು ಸನ್ನೆಮಾಡುವಳು.)

**ದುರ್ಗಾ**:—ಆಂ? ಹೌದೇನ್ರಿ ಬಾಯಿ? (ಗದ್ದರಿಸುವಳು)

**ಸುಧಾ**:— (ಗಾಬರಿಯಾಗಿ) ಛೇ, ಛೇ, ಇಲ್ಲಿಲ್ಲ. ಅಹಲ್ಯಾನೇ 'ಬೇಡ ಇವೊತ್ತು ರಿಝುಲ್ಟ ಅದೆ—'

**ದುರ್ಗಾ**:—ಆಕೆ ಏನು ಹೇಳತಾನ, ನೀವೇನು ಕೇಳತೀರಿ? ರೊಕ್ಕಾ ಕೊಡಬೇಕಾದ್ರ, ನಮ್ಮ ಹೊಟ್ಟೆ ಕಡೀತsದ. ಬಿಡಬ್ಯಾಡ್ರಿ ಆಕಿನ್ನ.

**ಸುಧಾ**:— ಹಾಂಗೆ ಆಗ್ಲಿ. ಹೇಳತೇನೆ. (ಅಹಲ್ಯೆಗೆ) ಎಲ್ಲೆ ನಿನ್ನ ಇಂಗ್ಲೀಷ ಪುಸ್ತಕ ತಾ. (ಅಹಲ್ಯೆ ಸಿಟ್ಟಿನಿಂದ ಆವರ ಕೈಗೆ ಕಿವಿಯುವಳು. ಒಳಗಿ

ನಿಂದ 'ಖಜಾಂಚಿ'ಯ ಪದ್ಯಾವಲಿ ಬೀಳುವದು. ಅಹಲ್ಯೆ ಕೂಡಲೇ ಅದನ್ನೆತ್ತಿಕೊಳ್ಳು ವಾಗ ಮಾಸ್ತರಬಾಯಿ ಅದನ್ನು ಕಸಿದುಕೊಳ್ಳುವಳು.) ಬರೇ, ಖಜಾಂಚಿಯೊಳಗಿನ ಕವಿತಾನೇ ಪಾಠ ಮಾಡತೀಯೇನು?

**ದುರ್ಗಾ:**—ಯೇನದು? ಅಭ್ಯಾಸ ಪಾಠ ಮಾಡಲಿಕ್ಕೆ ಒಲ್ಲೆ ಅಂತಾಳ ಹೌದಲ್ಲೋ? (ಅಹಲ್ಯೆಗೆ) ಯಾಕ ಏ ಚೆಮುರಿ! (ಸೋಟ ತಿವಿದು) ಮಾಸ್ತರು ಹೇಳಿದ ಅಭ್ಯಾಸ ಮಾಡಲಿಕ್ಕೆ ಒಲ್ಲೆ ಅಂತೀಯಾ? (ಖಜಾಂಚಿ ಪುಸ್ತಕ ಆವಳ ಕೈಗೆಕೊಟ್ಟು) ತಗೋ ಈ ಪುಸ್ತಕಾನ, ಅದನ್ನೆಲ್ಲಾ ಪಾಠಮಾಡಿ ಒಪ್ಪಿಸು. (ಮಾಸ್ತರಬಾಯಿಗೆ) ಮಾಸ್ತರಬಾಯಿ, ನಾ ಈಗ ಉಡಸಾರಣಿ-ಉಪಗಾರಣಿ ತೀರಿಸಿಗೊಂಡು ಬರೋದರಾಗನೇ ಅದಷ್ಟೆಲ್ಲಾ ಪಾಠ ಮಾಡಿ ಒಪ್ಪಿಸು ಅಂತಾ ಹೇಳ್ರಿ....ಮತ್ತ ಅಷ್ಟು ಒಪ್ಪಿಸಿಗೊಂಡೇ ನೀವೂ ಹೋಗ್ರಿ—ತಿಳಿಯಿತಿಲ್ಲೋ? (ಹೋಗುವಳು.)

**ಬಾಯಿ:**— (ಹಣೆಗೆ ಕೈಹಚ್ಚಿಕೊಂಡು ಸುಮ್ಮನೆ ನಗುವಳು) ಹೂಂ, ಸಂಸ್ಕೃತ ಪುಸ್ತಕ ತೆಗೆ. ಆ ದಮಯಂತಿಯ ಸ್ವಯಂವರ ಓದು. (ಅಹಲ್ಯೆ ಸಂಸ್ಕೃತ ಪುಸ್ತಕ ಕೊಡಲು ಅದರೊಳಗಿಂದ 'ಝೂಲಾ'ದ ಪದ್ಯಾವಲಿ ಕೆಳಗೆ ಬೀಳು ವದು) ಆಂ! ಇದೇನಿದು? ನಿನ್ನ ಇಂಗ್ಲಿಷ ಕವಿತಾ ಅಂದರೆ 'ಖಂಜಾಂಚಿ' ನಿನ್ನ ಸಂಸ್ಕೃತ ಕಾವ್ಯ ಅಂದರೆ 'ಝೂಲಾ!' ಅಂತೂ ನಿಮ್ಮ ತಾಯಿ ಕಣ್ಣು ತಪ್ಪಿಸಿ ಇದೇ ಅಭ್ಯಾಸ ಮಾಡತೀ ಅಲ್ಲವೇ?

**ಅಹಲ್ಯಾ:**—ಹೌದು ಮಾಸ್ತರಬಾಯಿ, ಇಪ್ಪತ್ತನಾಲ್ಕು ತಾಸು, ಹನ್ನೆರಡು ತಿಂಗಳು ಬರೇ ಅಭ್ಯಾಸನೇ ಮಾಡಿದರೆ ತಲಿ ಯಾತಕ್ಕೆ ಬರಬೇಕು? ನನಗ ಕಲಿಸಿ ಕಲಿಸಿ ನೀವೂ ಯಾತಕ್ಕ ಬಂದೀರಿ? ನಮ್ಮ ತಾಯಿಯ ಮುಂದೆ ಈ ಕಪಟ ನಾಟಕ ಹೂಡದಿದ್ದರೆ ನಾವು ಈಗಾಗಲೆ ಹುಚ್ಚರಾಸ್ಪತ್ರಿಗೆ ಸೇರುವ ಹೊತ್ತು ಬರುತಿತ್ತು.

(ಒಳಗಿನಿಂದ ಪೇಟಿಮಾಸ್ತರ್ ಮಂಜುಳಾಬಾಯಿ ಬರುವಳು.

**ಸುಧಾ:**—ಓಹೋ, ನಿಮ್ಮ ಪೇಟಿ ಮಾಸ್ತರರು ಬಂದರು. ಇನ್ನು ನಾನು ಹೊರಡತೇನಿ.

**ಮಂಜುಳಾ:**—ಛೇ, ಛೇ, ನಿಮ್ಮದು ಸಾಗಲಿ. ನನಗೆ ಸ್ವಲ್ಪ ಕೆಲಸ ಅದೆ, ನಾನು ಹೋಗತೇನೆ.

**ಸುಧಾ:**—ಛೇ, ಛೇ, ಬೇಕಾದರೆ ನಾನೇ ಹೋಗುತ್ತೇನೆ. ನೀವು ಸುರುವು ಮಾಡ್ರಿ (ಎಂದು ಒಳಗೆ ಇಣುಕುವಷ್ಟರಲ್ಲಿಯೇ ದುರ್ಗಾಬಾಯಿ ಬರುವಳು) ಛೇ, ಛೇ, (ದುರ್ಗಾಬಾಯಿಯ ಕಡೆಗೆ ನೋಡಿ) ನನ್ನ ಕ್ಲಾಸು ಇನ್ನೂ ಮುಗಿದಿಲ್ಲ.

**ಮಂಜುಳಾ:**—ಬಾಯೀ, ಮತ್ತ ನನಗ ಸ್ವಲ್ಪ ಕೆಲಸ....

**ದುರ್ಗಾ:**—ಆಂ? (ಕಣ್ಣು ತೆರೆದು) ಕೆಲಸಾ! ಮತ್ತೆ ಇದು ಏನು ಕೆಲಸ ಅಲ್ಲೇನು? ಅದೇನಿಲ್ಲಾ. ಈಗ ಕಲಿಸೇ ಹೋಗ್ರಿ.

**ಸುಧಾ:**—ಹಾಗಾದರೆ—

**ದುರ್ಗಾ:**....ಹಾಗಾದರೆ ಏನು ?

**ಸುಧಾ:**—ನಾನೂ ಕಲಿಸೇ ಹೋಗತೇನಿ ಅಂದೆ.

**ದುರ್ಗಾ:**—ಇವೊತ್ತು ಅದಿಷ್ಟು ಘಟ್ಟಿ ಮಾಡುವ ತನಕಾ ಆಕಿನ್ನ ಬಿಟ್ಟುಗಿಟ್ಟೇರಿ. (ಪೇಟಿ ಮಾಸ್ತರರಿಗೆ) ಮಂಜುಳಾಬಾಯಿ, ನಾಳೆ ಮತ್ತೆ ನೋಡಲಿಕ್ಕೆ ಬರುವರು ಇದ್ದಾರೆ. ಒಂದು ಹತ್ತು ಹಾಡು ಆವರೂ ಕಲಿಸಿ ಹೋಗ್ರಿ. (ಹೋಗುವರು)

**ಮಂಜುಳಾ:**—ಹತ್ತು ಹಾಡು ಕಲಿಸೋದರಕಿಂತಾ, ವಧೂಪರೀಕ್ಷೆಯ ಕಾಲಕ್ಕ ನಾನೇ ಹತ್ತು ಹಾಡು ಬಾರಿಸಿ ಹೋಗೋದು ಒಳ್ಳೇದು. ಹೂಂs ಅಹಲ್ಯಾ, ನಿನ್ನಿನ ಯಮುನರಾಗದ ಸ್ವರಗಳೆಲ್ಲಾ ಬಂದವೋ!

**ಅಹಲ್ಯಾ:**—ಇಲ್ಲ, ಆ ಯಮುನ ರಾಗ, ಕಲಿಯೋದರೊಳಗ ನಾವೇ ಯಮುನ ಕಡಿಗೆ ಹೋಗೋ ಹೊತ್ತು ಎಲ್ಲಿ ಬರತsದೋ ಅನಿಸತದೆ. ಅಥವಾ ಅದೂ ಒಳ್ಳೇದೆ. ಯಮುನ ಕಡಿಗ ಹೋದ ಮೇಲೆ ಆ ರಾಗಾ ಕಲಿಯಲಿಕ್ಕೆ ಬರತsದೆ, (ಎನ್ನುತ್ತ ಪೇಟಿ ತೆಗೆದುಕೊಳ್ಳುವಳು)

**ಮಂಜುಳಾ:**—(ಪೇಟಿ ಬಾರಿಸುತ್ತ ಯಮುನ ರಾಗ ಹೇಳುವಳು)

**ಸುಧಾ:**—(ಅಡ್ಡ ಬಾಯು) ಹೂಂ, ಭಾಷಾಂತರ ಮಾಡು.

दमयन्त्याः स्वयंवर काले बहवो राजानो मामिषं वृणीत मामिषं वृणीतेति मन्यमानाः कुण्डिनपुरमागच्छन् ।

**ಅಹಲ್ಯಾ:**— (ಯಾರಿಂದ ಅಭ್ಯಾಸ ಹೇಳಿಸಿಗೊಳ್ಳಬೇಕು ತಿಳಿಯದೆ, ಅಚಿ ಈಚಿ ನೋಡುತ್ತ ಅಭ್ಯಾಸ ತಪ್ಪಿಸುವ ಹಂಚಿಕೆಯಿಂದ) ಮಾಸ್ತರಬಾಯಿ, ದಮ-ಯಂತಿಯ ಕಾಲಕ್ಕ ಸ್ವಯಂವರ ಅರ್ಥಾತ್ ರಿಜಿಸ್ಟರ ಮ್ಯಾರೇಜ ಇತ್ತು ಅಂತಲ್ಲವೇ ?

**ಸುಧಾ:**—ಹೌದು, ಇದ್ದಿರಬೇಕು, ಮೊದಲ ಇದನ್ನ ಭಾಷಾಂತರ ಮಾಡು.

**ಅಹಲ್ಯಾ:**—ಪೇಟಿಯೊಳಗೇ ಭಾಷಾಂತರಮಾಡಿ ಬಾರಿಸಲೇನು ಬೇಕಾದರೆ? ಇಲ್ಲದಿದ್ದರೆ ಇಬ್ಬರು ಮಾಸ್ತರನ್ನ ಏಕಕಾಲಕ್ಕೆ ಹ್ಯಾಗೆ ಏಂಗೇಜ ಮಾಡೋದು ? ಅಥವಾ ಬ್ರಹ್ಮ ನನಗೆ ಎರಡಾದರೂ ತಲೆಗಳನ್ನು ಕೊಟ್ಟಿದ್ದರ ನೆಟ್ಟಗಿತ್ತು. ಪಾಪ! ಪಾಪ! ನಮ್ಮವ್ವ ಏಕಕಾಲಕ್ಕೆ ಇಷ್ಟು ಜನರನ್ನ ಟೂಶನ್‌ಗೆ ಇಡತಾಳಂತ ಆತನಿಗೆ ಮೊದಲೇ ಹೇಗೆ ತಿಳಿಯಬೇಕು ?

**ಸುಧಾ:**— ಅದೆಲ್ಲಾ ಹಚ್ಚಬೇಡಾ. **मन्यमाना:** ಇದು ಯಾವ form ಹೇಳು. ಪರೀಕ್ಷಕ್ಕ ಮತ್ತಿದು ಮಹತ್ವದ್ದು. ಅಂ !

**ಅಹಲ್ಯಾ:**—ಮತ್ತೆ ಯಾವ ಫಾರ್ಮು ಬಾಯಿ ? ಇನ್ನು ಉಳಿದದ್ದು ನನ್ನ ಪಾಲಿಗೆ ಒಂದೇ—ಕ್ಲೋರೋಫಾರ್ಮು. ಹೂಂ, ವಧು ಪರೀಕ್ಷಕರೂ ವ್ಯಾಕರಣನೇ ಕೇಳತಾರೇನು? ಈ ಪರೀಕ್ಷಾ, ಈ ವ್ಯಾಕರಣಾ ತುಂಬಿಕೊಂಡು ತಲೆ ಹಿಮಾಲಯದಂತೆ ಆಗಿಬಿಟ್ಟಿದೆ. ಒಂದು ದಿವಸವಾದರೂ ತಪ್ಪಿ ಕೂಡಾ ಕನ್ನಡ ಕಾವ್ಯ, ಅಥವಾ ಒಂದು ಹೊಲಿಗೆ, ಒಂದು ಹೆಣಿಗೆ ಇಲ್ಲವೇ ಇಲ್ಲ. ('ಬಾಯಿ' ಸ್ವಲ್ಪ ಡೊಂಕು ಮೋರೆ ಮಾಡಲು) ಅಲ್ಲಾ, ಬಾಯೀ, ನಮ್ಮಲ್ಲಿ ಪತಿವ್ರತೆಯರ ಲಿಸ್ಟಿನೊಳಗ ಸೇರಿದ ಅಹಲ್ಯಾ, ದ್ರೌಪದಿ ಅಂತ ಪಂಚಕನ್ಯಾರತ್ನಗಳಿವೆ ಅಲ್ಲಾ! ಅದರಲ್ಲಿ ಒಬ್ಬ ಗಂಡನನ್ನೇ ನಂಬಿಕೊಂಡು ಇದ್ದವರು ಎಷ್ಟು ಜನ ?

**ಸುಧಾ:**—Silence ! ಸಂಸ್ಕೃತದಲ್ಲಿ ಎಷ್ಟು ಭೂತಕಾಲಗಳಿವೆ ?

**ಅಹಲ್ಯಾ:**— ನನಗೆ ಗೊತ್ತಿರೋದಂತು ನಮ್ಮ ಸಂಸಾರದೊಳಗಿನ ಎರಡು ಭೂತಗಳು. ಒಂದು ಅಡಿಗೆ ಮನೆಯ ಭೂತ, ಇನ್ನೊಂದು ಶಾಲೆಯ ಭೂತ. ಅಥವಾ ಸಂಸ್ಕೃತದಂತೆ ಮೂರನೆಯದೊಂದು ಭೂತ ಹೇಳಬೇಕಾದರೆ ಮದುವೆಯ ಭೂತ.

**ಮಂಜುಳಾ:**—(ಬೇಸತ್ತು) ಯಾಕೆ ಅಹಲ್ಯಾ, ಯಮನರಾಗದ ಸ್ವರಗಳನ್ನು ಹೇಳತೀಯೋ ಇಲ್ಲೋ? (ಸುಧಾಬಾಯಿಯನ್ನು ದುರಗುಟ್ಟಿ ನೋಡುವಳು.)

**ಅಹಲ್ಯಾ:**—ಅದೇ ನಾನೂ ವಿಚಾರ ಮಾಡುತಾ ಇದ್ದೇನೆ. ಮನಸ್ಸಿನಲ್ಲೇ ಸಂಸ್ಕೃತ ಮಾಡಿ, ಬಾಯಿಂದ ಸಂಗೀತ ಹೇಳಲಿಕ್ಕೆ ಏನು ಬಂದದ್ದು ಅಂತ....ನನ್ನ ತಾಯೀ, ಸಂಗೀತದೊಳಗಾದರೂ ಆನಂದಕ್ಕೆ ಸಿಕ್ಕೀತು ಅಂದರ, ಅದೂ ಒಂದು ಸತ್ತ ಶಾಸ್ತ್ರನೇ ಕಟೇತಿರೀ ಯಮುನ ರಾಗ ಅಂತ. ಒಂದು ನಾಲ್ಕು ಸೈಗಲ್‌ನ ಹಾಡಾದರೂ ಹೇಳಿದರ ಅಡ್ಡಿ ಇಲ್ಲ. (ಇಷ್ಟರಲ್ಲಿ ಗೀತಾಬಾಯಿ ಬರುವಳು.)

**ಗೀತಾ:**—(ಸೆರಗಿನಿಂದ ಬೆವರು ಒರೆಸಿಕೊಳ್ಳುತ್ತ) ಹೂಂ, ಅಹಲ್ಯಾ ಬೇಗನೇ ಗೆಜ್ಜಿ ಕಟ್ಟಿಕೊ.

**ಅಹಲ್ಯಾ:**—ಬರ್‍ರಿ, ಸುಸ್ವಾಗತಂ! (ಸ್ವಗತ) ವರ್ತಮಾನ ಕಾಲದೊಳಗಿನ ಮೂರು ಭೂತಗಳು ಇಲ್ಲೇ ಕೂಡಿದಂತಾಯಿತು. ಒಂದು ಭೂತಕ್ಕೆ ತಲಿ ಇನ್ನೊಂದು ಭೂತಕ್ಕೆ ಬಾಯಿ ಕೊಟ್ಟದ್ದಾಯಿತು. ಹೌದು, ಕಾಲು ಮಾತ್ರ ಖಾಲಿ ಅವೆ, ಗೆಜ್ಜೆ ಕಟ್ಟಲಿಕ್ಕೆ ಏನೂ ಅಭ್ಯಂತರ ಇಲ್ಲ. ಹುಂ! ಎಲ್ಲರ ತಾಳಕ್ಕೆ ಹೆಜ್ಜೆ ಹಾಕಿಯೆ, ಹೆಂಗಸಿನ ಬುದ್ಧಿ ಮೊಳಕಾಲ ಕೆಳಗೆ ಬಂದಿದೆ.

**ಗೀತಾ:**—ಅಂದರೇನು?

**ಅಹಲ್ಯಾ:**—ಅಂದರೇನು? ಅಡಿಗೆಯ ಮನೆಯಲ್ಲಿ ಅವ್ವನ ತಾಂಡವ ನೃತ್ಯ; ಶಾಲೆಯಲ್ಲಿ ಶಿಕ್ಷಕರ ಪ್ರಳಯ ನೃತ್ಯ; ಪಡಸಾಲೆಯೊಳಗೆ....

**ಗೀತಾ:**—ಯಾಕೆ ಸುಮ್ಮನೆ ಗೆಜ್ಜೆ ಕಟ್ಟಕೋತಿಯೋ, ನಿಮ್ಮ ತಾಯಿಗೆ ತಿಳಿಸಲ್ಯೋ?

**ಸುಧಾ:**—ಯಾಕೆ ಸಂಸ್ಕೃತ ಭಾಷಾಂತರ ಮಾಡುವಿಯೋ ಇಲ್ಲವೋ?

**ಮಂಜುಳಾ:**—ಯಾಕೆ, ಯಮುನ ಕಲ್ಯಾಣ ನಿನಗ ಬೇಕೋಬ್ಯಾಡೋ?

**ಅಹಲ್ಯಾ:**—(ತೀರ ರೋಸಿಗಿಟ್ಟು) ಯಮುನ ಕಲ್ಯಾಣತೊಗೊಂಡು ನಾನೇನು ಮಾಡಲಿ? ನನಗೆ ಬೇಕು ನನ್ನ ಕಲ್ಯಾಣ—ಅಹಲ್ಯಾ ಕಲ್ಯಾಣ, ತಲೆಗೆ ಕೊಡತಿಯ ಪೆಟ್ಟು ಹಾಕುವ ನಿಮ್ಮ ಸಂಗೀತ ನನಗೆ ಬೇಡ.

(ಸುಧಾಬಾಯಿಗೆ) ನಿಮ್ಮ ದಮಯಂತಿಯ ಸ್ವಯಂವರವನ್ನ ವಧೂ ಪರೀಕ್ಷೆಯ ಕಾಲಕ್ಕೆ ಓದಿದರ ಘಟಸ್ಫೋಟವೇ ಆದೀತು ಬೇಡ. (ಗೀತಾಬಾಯಿಗೆ) ಗೀತಾ ಬಾಯಿ, ನಿಮ್ಮ ನೃತ್ಯಪ್ರದರ್ಶನವನ್ನು ವರನ ಮುಂದೆ ಮಾಡಿದರೆ ಹಡೆದ ಹೆಣ್ಣು ಹೆಣ್ಣಿನ ಕುಲಕ್ಕೇ ಹೊರತಾದೀತು ಬೇಡಾ....(ಗಂಭೀರಳಾಗಿ) ಸಾಕು ನಿಮ್ಮ ಶಿಕ್ಷಣಕ್ಕೆ ಶರಣು ಇನ್ನು ಮೇಲೆ. ಎಲ್ಲಾ ಬಾಯಿಗೂ ಗುಡ್‌ಬಾಯ್!.... ಇಂದೇ ನನ್ನ Matric ಪರೀಕ್ಷೆ ಪರಿಣಾಮವಾದ ಮೇಲೆ ನಾನು ಸ್ವತಂತ್ರ ಸ್ತ್ರೀಯಾಗುವೆ. Matric ಆಗುವ ವರೆಗೆ ಮಾತ್ರ ಹೆಣ್ಣು Minor ಆಗಿರ ಬಹುದು. Matric ಪಾಸಾದ ಮೇಲೆ ಯಾರ ಅಧಿಕಾರವೂ ನಡೆಯದು. ನಾನು ನನ್ನ ವೃತ್ತಿಯನ್ನು ನಾನೇ ಹುಡುಕಿಕೊಳ್ಳುವೆ. ಡಾಕ್ಟರಳಾಗುವೆ. ನರ್ಸ ಆಗುವೆ. ಬೇಕಾದರೆ ಮಿಸ್ಟ್ರೆಸ್ ಆಗುವೆ.

**(ಒಕ್ಕಲುಗಿತ್ತಿ ಜನಾಬಾಯಿ ಕಸಪೊರಕೆ ಹಿಡಿದುಕೊಂಡು ಬರಲು, ಮೊದಲು ಅವಳನ್ನು ನೋಡಿ ಅಹಲ್ಯೆ ಭಯವನ್ನು ನಟಿಸುವಳು )**

ಓಹೋ! ನೀನು ಕಸಪೊರಕೆ ಹಿಡಿದುಕೊಂಡು ಬಂದಿಯಾ? ನಮ್ಮ ಮಾತೋಶ್ರೀಯವರು ಅಂತ ಮಾಡಿದ್ದೆ. ಆದರೂ ನಾನೇನು ಅಂಜಿದಿಲ್ಲಾ ಅಂತ ತಿಳಿದುಕೊ. ಯಾಕೆಂದರೆ ತಾಯಿಗಂಜುವ ಮಗಳ ಪಾತ್ರವನ್ನು ಇವೊತ್ತು ಬಿಟ್ಟು ನನ್ನ ಜೀವನನಾಟಕದ ನಾಯಕಿಯ ಪಾತ್ರ ವಹಿಸುವವ ಳಿದ್ದೇನೆ. ಸುಶಿಕ್ಷಿತ ಸ್ತ್ರೀಯು ಸ್ವತಂತ್ರ ವ್ಯಕ್ತಿ ಅಂಬೋದನ್ನ ತೋರಿ ಸುವದಕ್ಕೆ—

**ಜನಾ:**—ಇಲ್ರೀ ಬಾಯಿ-(ಎಂದು ಕಸಪೊರಕೆ ಎತ್ತುವಳು )

**ಅಹಲ್ಯಾ:**—ಮತ್ತೇನು, ನೀನೂ ನನಗ ಟ್ಯೂಶನ್ ಹೇಳಲಿಕ್ಕೆ ಬಂದೇನು ಮತ್ತೆ? ಅತ್ತೆಯ ಮನೆಗೆ ಹೋಗುವ ಹೆಣ್ಣುಮಗಳ ವಿಜಯ ಪತಾಕೆ ಹಿಡಿದುಕೊಂಡೇ ಬಂದೆಯಲ್ಲ! (ಮೂವರು ಮಾಸ್ತರರಿಗೆ) ಅಲ್ರಿ ಬಾಯಿ, ಸುಮ್ಮನೆ ಯಾಕೆ ನನ್ನ ತಲೆ ಕೆಡಸತೀರಿ?

**ಜನಾ:**—ಏಳ್ರೀ ಬಾಯಿ ಕಸಾ ಕೂಡಸತೇನು. ಬಾಯಿ ಸಾಹೇಬ್ರು ಮತ್ತ ಸಿಟ್ಟು ಮಾಡತಾರ.

**ಗೀತಾ:**—ನೀನು ನೃತ್ಯ ಕಲೀದಿದ್ದರೆ ಬಿಡು. ನಾಳಿನಿಂದ ನಾನು ಶಿಕವಣೀಗೆ ಬರೋದಿಲ್ಲ. (ಹೊರಡುವಷ್ಟರಲ್ಲಿ ದುರ್ಗಾಬಾಯಿ ಪ್ರವೇಶಿಸಿ.)

**ದುರ್ಗಾ**:—ಯಾಕ ಮುಗಿಯಿತೇನು ನಾಚಿನ ಕ್ಲಾಸು ?

**ಗೀತಾ**:—ನೋಡಿ ನಿಮ್ಮ ಮುಲಿಗೀಗೆ ಕೇಳ್ರಿ.

**ದುರ್ಗಾ**:—ಮುಲಿಗೆಂತ ! ಆಕಿಗೇನು ಕೇಳತೀರಿ. ನಾಳೆ ಕನ್ಯಾ ನೋಡಲಿಕ್ಕೆ ಬಂದವರಾ, ಹುಡುಗಿ ನಾಚ ಮಾಡತಾಳೇನು ಅಂತ ಕೇಳಿದರ—

**ಅಹಲ್ಯೆ**:—ಅಂತ ಕೇಳಿದರ, ಮೊದಲೇ ನಾಚುವ ಹೆಣ್ಣಿಗೆ ಮತ್ತ ಯಾಕ ನಾಚು ಕಲಿಸಬೇಕು ಅಂತ ಹೇಳಬೇಕು. ಕೈಹಿಡಿಯೋ ವರನನ್ನ ಕಣ್ಣೆತ್ತಿ ಕೂಡಾ ನೋಡಲಿಕ್ಕೆ ನಾಚುವ ಹೆಣ್ಣು ಗಂಡನ ಮುಂದೆ ಗೆಜ್ಜಿ ಕಟ್ಟಿಕೊಂಡು ಕುಣಿಯುವ ಧೈರ್ಯ ಮಾಡಿದರ ಆ ಗಂಡ—

**ಜನಾ**:—ತಾಳಾ ಹಾಕಬೇಕು. ಯಾಕರೀ ಬಾಯಿ ? ನಮ್ಮ ಬಾಯಿ ಬಾಸಿಂಗ ಕಟ್ಟಿಗೊಂಡು ಕುಣೇಲಾಕ ಹತ್ತಿದರ ನವಿಲು ಕಂಡ ಹಾಂಗ ಆಗ ಬೇಕು.

**ದುರ್ಗಾ**:—ಯೇ ಸಂತ ಜನಾಬಾಯಿ, ಅಲ್ಲೆ ಒಂದು ಪಡಿ ಜೋಳ ಕೂತಾವ ನಿನ್ನ ಹೆಸರ್ಲೆ ಭಡಾನೆ ಕಸಾ ಉಡುಗಿ ಅವಷ್ಟು ಬೀಸಿಡು ಅಂತ ಹೇಳಿದರ ಇಲ್ಲಿ ಪಂಟುಬಡಿಯುಲಿಕ್ಕೆ ಬಂದೆಯೇನು ?

**ಅಹಲ್ಯಾ**:— ಹೋಗು ಯೇ ಸಂತ ಜನಾಬಾಯಿ, ಕಲ್ಲು ಬೀಸಿ ಕೃಷ್ಣನ್ನ ಪ್ರತ್ಯಕ್ಷಮಾಡಿದ್ದೇ ಖರೆ ಆದರೆ, ಒಂದು ಪಡಿಜೋಳ ಬೀಸುವದ ರೊಳಗೆ ನಿಮ್ಮ ಬಾಯಿಸಾಹೇಬರ ಮುಂದೆ ಇವೊತ್ತು ಶ್ರೀಕೃಷ್ಣನನ್ನ ಪ್ರತ್ಯಕ್ಷ ಮಾಡಿ ತೋರಿಸು. ಪಾಪ, ಆಕೆ ಬೇಡಿದಷ್ಟು ವರಗಳನ್ನು ಅಂದರ ವರಸನ್ನ ಕೊಡಬಹುದು.

**ದುರ್ಗಾ**:—ಯೇ ಗಂಡರಾಮಿ, ಗೆಜ್ಜಿ ಕಟ್ಟಕೊಂಡು ನಾಚು ಮಾಡೋದುಬಿಟ್ಟು—

**ಅಹಲ್ಯಾ**:—ಅವ್ವಾ ಇವೊತ್ತೇ ಕೊನೆಯ ದಿವಸ ನೋಡು. ಇಷ್ಟು ದಿವಸ ಇಷ್ಟೊತ್ತಿನವರೆಗೂ ಸಹಿಸಿದೆ. ರಿಝುಲ್ಟು ತಿಳಿಯಿತು ಅಂದರ, ಈ ಅಹಲ್ಯೆ ಅಂದರೆ ದುರ್ಗಾಬಾಯಿ ಸಾಕಿದ ಬೆಕ್ಕಿನ ಮರಿ ಅಲ್ಲ—

**ದುರ್ಗಾ**:— (**ಜನಾಬಾಯಿಯ ಕೈಯೊಳಗಿನ ಕಸಪೊರಕೆ ತೆಗೆದುಕೊಂಡು**) ಸುಮ್ಮನ ಈಗ ಗೆಜ್ಜಿ ಕಟ್ಟಿಕೋ, ಇಲ್ಲದಿದ್ರ-(**ಕಸಪೊರಕೆ ಎತ್ತುವಳು.**)

**ಅಹಲ್ಯಾ**:—ಇಕಾ, ಕೊನೆಯ ಸಲ ಕಟ್ಟುತ್ತೇನೆ. (ಗೆಜ್ಜೆ ಕಟ್ಟಿಕೊಂಡು) ಜನಾಬಾಯಿ, ಸಂಯುಕ್ತ ಕರ್ನಾಟಕ ಬಂತೇನೊ ನೋಡಿಬಾ ಹೋಗು (ಜನಾಬಾಯಿ ಹೋಗುವಳು. ಗೆಜ್ಜೆ ಹಾಕಲು ಸುರುವು ಮಾಡುವಳು.)

**ದುರ್ಗಾ**:—ಇವೊತ್ತಿಗೇ ಒಂದು ಎಂಟುಹತ್ತು ಥರದ ನಾಚು ಹೇಳಿ ನೀವು ಹೋಗ್ರಿ.

**ಸುಧಾ**:— ಆಯಿತು. ನೃತ್ಯಕ್ಕೆ ಸಂಗೀತ ಜೋಡು ಆಗಲಿ. (ಹೋಗುವಳು.)

**ಅಹಲ್ಯೆ**:— ದಮಯಂತಿ ಸ್ವಯಂವರ ನಾಳೆ ನಡಿಯಲಿ. ಬಾಯಿ ಜೋಕೆ. ಮೆಲ್ಲನೆ ಹೋಗ್ರಿ, ನೀವೇ ಅನ್ನೋಹೊತ್ತು ಬಂದೀತು. (ಸುಧಾಬಾಯಿ ಹೋಗುವಳು)

**ಗೀತಾ**:—ಹೂಂ! ನಿನ್ನಿನ ಹೆಜ್ಜೆ ಹಾಕು.

**ಅಹಲ್ಯಾ**:—ಬಾಯಿ, ಚಾತಕಪಕ್ಷಿಯಂತೆ ನನ್ನ ಮ್ಯಾಟ್ರಿಕ ರಿಝಲ್ಟಿನ ಮೇಘಮಾಲೆಯನ್ನು ದಾರಿ ಕಾಯುತ್ತಿರುವಾಗ ಒಂದು ಕ್ಷಣಹೊತ್ತು ಆದರೂ ಮೈಮರೆತು 'ನಾಚೋ ನಾಚೋ ಪ್ಯಾರೆ ಮನಕೆ ಮೋರ' ಅಂತ ಭಾವರಂಗ ದಲ್ಲಿ ಹಾಡಿ ಕುಣೀತೇನೆ. ಇದೇ ನನ್ನ ಕೊನೆಯ ನೃತ್ಯ. ಇದೇ ನನ್ನ ಕೊನೆಯ ಸಂಗೀತಾ. (ಎಂದು ಹಾಡುತ್ತ ಮೈಮರೆತು ಕುಣಿಯುವಳು. ಮುಗಿಯುವ ಹೊತ್ತಿಗೆ ದ್ರೌಪತಿ, ಸೀತಾ ಬರುವರು.

**ದ್ರೌ. ಸೀ**:— (ಚಪ್ಪಳೆ ಹಾಕಿ) 'ಮನ್ಕೇ ಮೋರ' 'ಒನ್ಸಮೋರ'; 'ಒನ್ಸಮೋರ'; 'ಒನ್ಸಮೋರ.'

**ಅಹಲ್ಯಾ**:—(ಅನಂದ ಆಶ್ಚರ್ಯದಿಂದ) ಏನು ರಿಝಲ್ಟ ಆಯಿತೆ ?.... ಸಂಯುಕ್ತ ಕರ್ನಾಟಕ ಬಂದಿತೆ?....ಮಾಸ್ತರ ಬಾಯಿ, ಗುಡ್‌ಬಾಯ್.

**ಗೀತಾ**:—ನಾಳೆ ಫೀಜ ಕಳಿಸು ಅಂತ ಹೇಳು. (ಹೋಗುವಳು)

**ಮಂಜುಳಾ**:—ನನಗೆ ಒಂದು ತಿಂಗಳ ಪಗಾರ ಅಡ್‌ವಾನ್ಸ ಬೇಕಂತಾ ಹೇಳು. (ಹೋಗುವಳು)

**ದ್ರೌಪತಿ**:—ಏನು ಮಹಾರಾಯಳೆ, ಪರೀಕ್ಷೆಯ ದಿವಸ ಸಹಾ ನಿನ್ನ ಟ್ಯೂಶನ್ನಿಗೆ ಸೂಟಿ ಇಲ್ಲವೇನು ?

**ಅಹಲ್ಯಾ**:—ನನ್ನ ರಿಝುಲ್ಟು ಅದವ್ಯಾಲೇ ನನಗೆ ಕಾಯಂ ಸೂಟಿ.

**ಸೀತಾ**:—ಅಂದರೆ ?

**ದ್ರೌಪತಿ**:—ಅಂದರೇನು—ಸುಮುಹೂರ್ತೆ ಸಾವಧಾನ.

**ಅಹಲ್ಯಾ**:—Shut-up. ಈ ಅಹಲ್ಯೆ ಇಪ್ಪತ್ತನೆಯ ಶತಮಾನ ದವಳು ಅಂಬೋದು ಗೊತ್ತಿಲ್ಲೇನು? ಹೆಣ್ಣೆಂದರೆ ಕಲ್ಲಾಗಿಬಿದ್ದ ಅಹಲ್ಯೆ ಯಲ್ಲ; ಕಲ್ಲಿನಂಥ ಸಮಾಜದಲ್ಲಿ ಜೀವಂತ ಶಿಲ್ಪಿಯನ್ನು ಕುದುರಿಸುವ ರೂವಾರಿ. ನಾನು ಡಾಕ್ಟರಳಾಗಿ ಬಂದು ಸಾಮಾಜಿಕ ಪಿಡುಗುಗಳಿಗೆ ಸೂಜಿ ಮದ್ದು ಕೊಡುವೆ. ನೀವೇನು ಮಾಡಬೇಕೆನ್ನುವಿರಿ ?

**ದ್ರೌಪತಿ**:—ನಾನಂತೂ 'ಕನ್ನಡ ಜಾಣೆ' ಯಾಗಬೇಕು ಅಂತೀನಿ.

**ಅಹಲ್ಯೆ**:—ಅಂದರೆ, ಈಗ ನೀನು ಮರಾಠಿ ಇಲ್ಲವೆ ಇಂಗ್ಲಿಷ ಜಾಣೆ ಆಗಿರುವೆಯೋ, ಏನು ಕನ್ನಡ ಥಡ್ಡೆಯಾಗಿರುವಿಯೋ ?

**ಸೀತಾ**:—ಕನ್ನಡ ಥಡ್ಡೆಯೇ ನಿಜ.

**ಅಹಲ್ಯಾ**:—ಯಾಕೆ ? ಕನ್ನಡ ಹೆಣ್ಣಿನ ಬುದ್ಧಿ ಮೊಣಕಾಲು ಕೆಳಗೆ ಅಂತೇನು ?

**ದ್ರೌಪತಿ**:—ಹೌದು. ನಮ್ಮ ಶಾಲೆಗಳಲ್ಲಿ ಕನ್ನಡಕ್ಕೆ ಒಳ್ಳೆಯ ಸ್ಥಾನ ವೆಲ್ಲಿದೆ ? ಹನ್ನೆರಡು ತಿಂಗಳವರೆಗೂ ಒಂದು ಗದ್ಯ-ಪದ್ಯ ಸಂಗ್ರಹ ಓದಿಸಿದರೆ, ನಮ್ಮ ಮಾಸ್ತರರು ಒಂದು ಮಹಾಯಜ್ಞ ಮಾಡಿದಂತಾಯಿತೇನು ? ನಮ್ಮ ಪ್ರಾಚೀನ ಮತ್ತು ಆಧುನಿಕ ಕನ್ನಡ ನಮ್ಮ ಮೈಯೊಳಗ ಇಂಗಿ ರಕ್ತದೊಡನೆ ನಾಡಿ ನಾಡಿಯಲ್ಲಿ ಹರಿದಾಡಬೇಕು. ನಮ್ಮ ಕನ್ನಡದ ಉಜ್ವಲ ಇತಿಹಾಸ ನಮ್ಮ ಕಣ್ಣಮುಂದೆ ಜೀವಂತವಾಗಿ ಕುಣಿದಾಡಬೇಕು. ಶಾಲೆ—ಕಾಲೇಜು ಗಳಲ್ಲಿ ಎಲ್ಲಾ ವಿಷಯಗಳನ್ನು ನಮ್ಮ ಕಸ್ತೂರಿಯಂತಹ ಕನ್ನಡದಲ್ಲಿಯೇ ಕಲಿಸಬೇಕು.

**ಅಹಲ್ಯೆ**:—ನಿನ್ನ 'ಕನ್ನಡ ಜಾಣೆ'ಯ ಸರ್ಟಿಫಿಕೆಟ್ ನಾನೇ ಕೊಡತೇನೆ; ಪರೀಕ್ಷೆ ಇಲ್ಲದೇನೆ ಕೊಡತೇನೆ. ಒಬ್ಬ ಕನ್ನಡ ಮುದ್ದಣನಿಗೇ ನೀನು ಮನೋರಮೆಯಾಗು.

**ದ್ರೌಪತಿ**:—ಹೌದು ಸಾಕುಮಾಡು. ನೀನು ಮಾತ್ರ ಮನ್ಮಥನಂಥಾ ಬರ್ನಾರ್ಡಶಾನ್ನೇ ಮಾಡಿಕೋ ಯಾದು ಬ್ಯಾಡಾ ಅಂತಾರ.

**ಸೀತಾ**:—ಇಲ್ಲs, ಆಕೆ (ಅಹಲ್ಯೆಗೆ ಹೋಗಿ) ಆ್ಯನಿ ಬಿಜೆಂಟ ಆಗಬೇಕು ಅಂತಾಳ.

**ಅಹಲ್ಯಾ**:—ಹೌದು ನೀನು ಮಾತ್ರ ಶಿವನ ಬಿಲ್ಲು ಮುರಿಯೋ ರಾಮಚಂದ್ರನನ್ನೇ ಹುಡಿಕಿಕೊಂಡು ಬಾ.

**ದ್ರೌಪತಿ**:—ಶಿವನ ಬಿಲ್ಲೋ, ಏನು ಡಾಕ್ಟರರ ಬಿಲ್ಲೋ!

**ಅಹಲ್ಯಾ**:—ಡಾಕ್ಟರ ಬಿಲ್ಲೇ ನಿಜ. ಯಾಕೆಂದರೆ ಓದಿ ಓದಿ ಹಿಮಾಲಯದಂತಹ ತಲೆ, ಧಾರದಂತಹ ದೇಹ ಮಾಡಿಕೊಂಡು ನಿಂತ ಇಂದಿನ ಗ್ರಾಜುಯೇಟ ರಾಮಚಂದ್ರರು ಮುರಿಯೋದು ಡಾಕ್ಟರ ಬಿಲ್ಲೆ?.

**ಸೀತಾ**:— ಯಾವ ಬಿಲ್ಲೂ ಬೇಡ, ಬಾಣ ಬಿಟ್ಟಹಾಗೆ ಎಲ್ಲಾ ಡಿಪಾರ್ಟಮೆಂಟಗೂ ಒಂದೊಂದು ಅರ್ಜಿ ಹಾಕಬೇಕು ಅಂತೇನಿ.

**ದ್ರೌಪತಿ**:— ಹಾಗಾದರೆ ರೇಲ್ವೆದೊಳಗ ಹಾಕಿಬಿಡು, ರೇಲ್ವೆದಲ್ಲಿ ಸ್ತ್ರೀಯರ ಸ್ಥಾನನಿರ್ಮಾಣ ಮಾಡಿದ ಶ್ರೇಯಸ್ಸು ಬರಲಿ.

**ಅಹಲ್ಯಾ**:—ಇಲ್ಲಾ, Combatant clerk ಆಗಿ ಮಿಲಿಟರಿ ಖಾತೆ ಸೇರು. ಯಾಕಂದರೆ ಜೀವನಸಂಗ್ರಾಮದಲ್ಲಿ ಪುರುಷರೆಂಬ ಅಚ್ಚಿನ ರಾಷ್ಟ್ರದೊಡನೆ ಹೋರಾಡಬೇಕಾದವರ ಸ್ತ್ರೀಯರು Combatant ಏ ಆಗಲಿಕ್ಕೆ ಬೇಕು.

**ಸೀತಾ**:—ಯಾವದೂ ಇಲ್ಲ ನೋಡು. ಮೊದಲ ರೇಶನಿಂಗನೊಳಗೆ ಅರ್ಜಿ ಹಾಕತೇನಿ. ಅಂದರೆ ಕಾಳಿನ ಚೀಲ ನೋಡಿ ತುತ್ತಿನ ಚೀಲ ಆದ್ರೂ ಶಾಂತ ಆದೀತು.

**ದ್ರೌಪತಿ**:—ಅಂತೂ ಅರ್ಜಿ ಎಷ್ಟು ತಯಾರ ಮಾಡೀದಿ ?

**ಸೀತಾ**:—ಎಷ್ಟು ಯಾಕ, ಮ್ಯಾಟ್ರಿಕ ಪರೀಕ್ಷೆಗೆ ಅರ್ಜಿ ಹ್ಯಾಂಗ ಬರಿಯಬೇಕು ಅನ್ನೋದನ್ನ ಕಲಿತು ಝೋಕು ಹಾಕಿದವಳು ಇನ್ನೂ ಮರತೇ ಇಲ್ಲ. ಈಗ Interview ದೊಳಗೆ ಹ್ಯಾಗೆ ಉತ್ತರಾ ಕೊಡಬೇಕು ಅನ್ನೋದನ್ನ ಪಾಠಮಾಡಲಿಕ್ಕೆ ಹತ್ತೇನಿ.

**ದ್ರೌಪತಿ**:—ಹಾಗಾದರೆ ಆಫೀಸರರು Interview ದೊಳಗ Why **dont you marry** ಅಂತ ಕೇಳಿದರ ಏನ ಹೇಳತಿ ?

**ಅಹಲ್ಯಾ:**—ಹಿಯರ್, ಹಿಯರ್-ಇಲ್ಲೋಡು ಇಷ್ಟಾಗೀನೂ ಕೆಲಸ ಆಗಲಿ, ವರಾ ಆಗಲಿ ಸಿಗದಿದ್ರ ನನ್ನ ಕಡಿಗೆ ನರ್ಸ ಆಗಿ ಬಾ. ನಿನ್ನನ್ನೂ ನೌಕರಿಗೆ ಇಟಗೋತೇನಿ ಹೆರಿಗೆಯ ಆಸ್ಪತ್ರೆಯಲ್ಲಿ.

**ದ್ರೌಪತಿ:**—ನಾನಂತೂ ಆದರ್ಶ ಶಿಕ್ಷಿಕೆಯಾಗಿ ಕನ್ನಡಿತಿಯರನ್ನೂ, ಭಾರತದ ಭಾವೀ ಉಜ್ವಲ ಮಹಿಳೆಯರನ್ನು ಮಾಡುತೇನಿ. (ಜನಾಬಾಯಿ ಸಂಯುಕ್ತ ಕರ್ನಾಟಕ ತಂದು ಕೊಡುವಳು )

**ಮೂವರು:**— (ಪೇಪರಿಗಾಗಿ ಕಚ್ಚಾಡುತ್ತ) Hullo, Hullo Congratualtions! (ಎಂದು ಜಗ್ಗಾಡುವದರಲ್ಲಿ ಪೇಪರು ಹರಿಯುವದು.)

**ದ್ರೌಪತಿ:**—(ತನ್ನ ಪಾಲಿಗೆ ಬಂದ ತುಂಡನ್ನು ತೆಗೆದುಕೊಂಡು) Hullo, Congratulations (ಆನಂದೋದ್ವೇಗದಿಂದ) ಇದು ನೋಡು—Miss ದ್ರೌಪತಿ ಅಂತ (ಅಡ್ಡ ಹೆಸರು ಅವಳ ತುಂಡಿನಲ್ಲಿರುವದಿಲ್ಲ. ಸೀತಾನ ಕೈಯೊಳಗಿನ ತುಂಡು ನೋಡಿ ಜೋಡಿಸುತ್ತ) ದ್ರೌಪತಿ ದೇಶಪಾಂಡೆ— ಅಯ್ಯ, ಸುಡ್ಲಿ ದೇಶ ಪಾಂಡೆ ಅಂತ ಕೊಟ್ಟಾರಲ್ಲ, ಕುಲಕರ್ಣಿ ಅನ್ನೋದರ ಬದಲು.

**ಅಹಲ್ಯಾ:**—ಅಂದರ ದ್ರೌಪತಿ ಕುಲಕರ್ಣಿಗೆ V for Victory ಇಲ್ಲಾ ಅಂತ. ಕನ್ನಡ ಜಾಣೆ ಆಗುವವರಿಗೆ M for Matric ಯಾಕೆ ?

**ಸೀತಾ:**—(ಸರಿಯಾಗಿ ಜೋಡಿಸಿ) ಅಯ್ಯ ಹುಚ್ಚಿ, ಇದು ನೋಡು ನಿನ್ನ ಅಡ್ಡ ಹೆಸರು ಕೆಳಗ ಅದ. ಮ್ಯಾಲೆ X. Y Deshpande ಅಂತ ಕೂಡಿ ಹೋದು ಬಿಟ್ಟು Miss ದ್ರೌಪತಿ ದೇಶಪಾಂಡೆ ಅಂತ ಜೋಡಿಸೀದಿ, ಇಕಾ ಇದು ನೋಡ್ರಿ—ಲೇಡಿಜ ಇಟ್ಯಾಲಿಕ್ಸ್ ಅಕ್ಷರ ಹೆಣ್ಣಿನ ಗೆಲುವಿನ ಸುವರ್ಣಾಕ್ಷರ.

**ಅಹಲ್ಯಾ:**— ಇಕಾ ಇಲ್ಲಿ ನೋಡು. ಸೀತಾ ಸರದೇಶಪಾಂಡೆ. Congratulations ! ಹಾರು ರೇಶನಿಂಗಿಗೆ ಅರ್ಜಿ (ತನ್ನ ಹೆಸರು ಹುಡುಕ ಹತ್ತಲು ಸಿಗುವದಿಲ್ಲ ಗಾಬರಿಗೊಂಡು ಅವರ ಕೈಯೊಳಗಿನ ತುಂಡುಗಳನ್ನು ತೆಗೆದು ಕೊಳ್ಳುವಳು )

**ದ್ರೌ. ಸೀತಾ:**—ಯಾಕೆ ನಿನ್ನ ಹೆಸರು ಸಿಗವಲ್ಲದೇನು ? (ಅಹಲ್ಯೆಯ ಮುಖ ಕ್ರಮೇಣ ಪೆಚ್ಚಾಗುವದು )

**ಸೀತಾ:**—ಏನು ವರ್ತಮಾನಪತ್ರದವರೇ ನಿನ್ನ ಹೆಸರಿನ ಮೇಲೆ ಜೋಡಿ ಹೋದನ್ನ ಮರೆತರೋ !

**ದ್ರೌಪತಿ:**—ಹೌದು, ಕನ್ನಡ ಪೇಪರು; ಮೊಳೆ ತೀರಿದ್ದರೂ ತೀರಿರ ಬಹುದು.

**ಸೀತಾ:**—ಅಥವಾ ಯೂನಿವರ್ಸಿಟಿಯೊಳಗೆ 'ನಜರ ಚೂಕ' ಆಗಿರ ಬಹುದು.

**ಅಹಲ್ಯೆ:**—(ನಿರಾಶೆಯಿಂದ ಮುಖವು ಕಪ್ಪಿಟ್ಟು ಉಶ್‌ಶ್.. ಎಂದು ನಿಟ್ಟು ಸಿರಿಟ್ಟು, ಅತ್ಯಂತ ದುಃಖದಿಂದ) ಯಾರೋ ನನ್ನ ಬೇಕೆಂತೇ ನಪಾಸ ಮಾಡಿರ ಬೇಕು.

**ದ್ರೌಪತಿ:**—ಹೌದು. ಇದೂ ನಿಜವೇ ಇರಬೇಕು. ಯಾಕಂದರ ನೀನು Matric ಆಗಿ, M. B. B. S. ಡಾಕ್ಟರ ಆದಿ ಅಂದ್ರ, ಈಗಿದ್ದ ಗಂಡಸ ಡಾಕ್ಟರರ ವೃತ್ತಿಗೆ ಚಕ್ರ ಬಂದೀತು ಅಂತ ಯಾವುದೋ ಒಂದು ಸ್ವಾರ್ಥಪ್ರಾಣಿಯಾದ ಗಂಡಸು ಹೀಗೆ ಮಾಡಿರಬೇಕು.

(ಅಹಲ್ಯೆ ದುಃಖಾವೇಶದಿಂದ ಅಳಹೋಗುವಳು. ಅಳುವು ಬಾರದೆ ಕಣ್ಣು ಕತ್ತಲೆ ಗಟ್ಟಿ ಉಸುರು ನಿಂತಂತಾಗಿ ನೆಲಕ್ಕೆ ದೊಪ್ಪನೇ ಬೀಳುವಳು)

**ದ್ರೌಪತಿ:**—ಅಯ್ಯೋ—Accident—Accdient

**ಸೀತಾ:**—ದುರ್ಗಾಬಾಯಿ, ದುರ್ಗಾಬಾಯಿ ಬೇಗನೇ ಬರ್ರಿ—

**ದುರ್ಗಾ:**—(ದಡಬಡಿಸಿ ಬಂದು) ಯಾಕ ಯಾಕ? ಅಭ್ಯಾಸ ಮಾಡ ಲಿಕ್ಕೆ ಒಲ್ಲೆ ಅಂತಾಳೇನು?

**ಎಲ್ಲರೂ:**— ಇಲ್ಲಾ ಪರೀಕ್ಷೆ ನಪಾಸ ಅಂತಾ ಹೇಳಿ ಮೂರ್ಛೆ ಹೋಗ್ಯಾಳ.

**ದುರ್ಗಾ:**— (ನೋಡಿ, ಗಾಬರಿಯಾಗಿ) ಅಯ್-ಅಯ್, ನನ್ನ ಹಣೇ ಬರಹ ಗಣೇಶ್ವವತೇ! ಯಾರಿಗೆ ಬೇಕಾಗಿತ್ರ ನಮ್ಮವ್ವಾ ಈ ಸುಟ್ಟ ಪರೀಕ್ಷಾ ಸುಡ್ಲಿ. ಸೀತಾ, ಭಡಾನೆ ಹೋಗು ಯಾರ್ನರ ಡಾಕ್ಟರನ್ನ ಕರಕೊಂಡು ಬಾರವಾ. ಬ್ಯಾಡಾ, ಸರಕಾರೀ ಡಾಕ್ಟರನ್ನೇ ಕರಕೊಂಡು ಬಾರವ್ವಾ.

**ಸೀತಾ:**—ಇಲ್ಲಿಯೇ ಮುಂದಿನ ಓಣಿಯೊಳಗ ಕಲ್ಯಾಣ ರಾಯರು ಹೊಸತಾಗಿ M. B. B. S ಆದವರು ಇದ್ದಾರೆ. ನಮ್ಮ Family ಡಾಕ್ಟರ ಅವರು. ಅವರ್ನೇ ಕರಕೊಂಡು ಬರಲ್ಯಾ?

**ದುರ್ಗಾ:**— ಹೋಗು ಹೋಗು ಯಾರನ್ನರೆ ಕರಕೊಂಡು ಬಾ. (ಸೀತಾ ಹೋಗುವಳು.) ದ್ರೌಪಕ್ಕಾ, ಒಂದಿಷ್ಟು ನೀರಾರೆ ತೊಗೊಂಡು ಬಾರವಾ.

ತಲಿಗೆ ಬಡಿಯೋಣ. ಅಯ್ಯ ನನ್ನ ಫಜೀತಿ? ಏನು ಮಾಡಲಿಕ್ಕೆ ಹೋದ್ರ, ಏನಾತೇ ಇದೊಂದು! ಮನೆಯಲ್ಲಾದರೂ ಗಂಡಸರಿಲ್ಲಾ. (ದ್ರೌಪತಿ ನೀರು ತರುವಳು. ತಲೆಗೆ ನೀರು ಬಡಿವು) ಅವ್ವಾ, ಅಹಲ್ಲೀ ಏಳ ಕೂಸ. (ಡಾಕ್ಟರರು ಬರುವರು) ಡಾಕ್ಟರ, ಬರ್ರಿಪಾ. ದೇವರು ಬಂದಹಾಗೆ ಬಂದಿರಿ. ಅಷ್ಟು ನಮ್ಮ ಹುಡುಗಿಯ ಕಲ್ಯಾಣ ಕಟಿಗೊಳ್ಳಿ.

**ಕಲ್ಯಾಣ:**—ಹಾ ಗಾಬರಿಯಾಗಬೇಡ್ರಿ. ಒಂದು ಸ್ವಲ್ಪ ನಿರುಕಾಸಿ ಕೊಂಡು ಬರ್ರಿ. (ಸೀತಾ ಹೂಂಗುಟ್ಟಿ ಹೋಗುವಳು. ಡಾಕ್ಟರು ನಾಡಿ ಹಿಡಿದು 'ಸ್ಟೆಥೊಸ್ಕೋಪ' ಹಚ್ಚಿ) ಒಂದು ಇಂಜಕ್ಶನ್ ಕೊಡುತೇನೆ, ತಾನೇ ಸರಿ ಹೋಗುತ್ತದೆ.

**ದುರ್ಗಾ:**—ಅಷ್ಟು ಮಾಡ್ರಿಪಾ. ದೇವರು ನಿಮಗ ಮನಿತುಂಬ ಮಕ್ಕಳನ್ನು ಕೊಡಲಿ........ನಿಮಗ ಪುಣ್ಯಾ ಬರಲಿ........ನನ್ನ ಕೂಸು. ಹ್ಯಾಂಗ ಮಲಿಗೇದ್ರಲ್ರಿ?

(ಸೀತಾ ನೀರು ತರುವಳು. ಡಾಕ್ಟರರು ಇಂಜಕ್ಶನ್ ಕೊಡುವರು. ಸ್ವಲ್ಪ ಸಾವಧಾನವಾಗಿ ಅಹಲ್ಯೆ ಎದ್ದು ಕೂಡುವಳು.)

**ದುರ್ಗಾ:**— (ಅತ್ಯಂತ ಸಂಭ್ರಮದಿಂದ) ಅಯ್ಯ ನನ್ನ ಕಂದಮ್ಮ. (ಅವಚಿಕೊಂಡು) ಹೋಗ್ಲಿ ಬಿಡು ಆ ಸುಟ್ಟ ಪರೀಕ್ಷೆ ಆಗದಿದ್ರ ಅಷ್ಟೇಹೋತು. ಚೀಟಿಂಗ ಹೇಳಿಸಿಗೋ. ನೋಡಲಿಕ್ಕೆ ಬಂದ ವರಾ ಒಂದು ಪಾಸ ಮಾಡಿದ ರಾಯಿತು. (ಅಹಲ್ಯೆ ಸುಮ್ಮನೆ ತಲೆಗೆ ಕೈಹಚ್ಚಿಕೊಂಡು ತುಟಿ ಕಚ್ಚಿ ಹಿಡಿದು ಕೂಡ್ರುವಳು.) ಏಳು ಡಾಕ್ಟರಿಗೆ ನಮಸ್ಕಾರ ಮಾಡು.

**ಕಲ್ಯಾಣ:**—ಒಳ್ಳೇದು ನಾನು ಬರತೀನಿ, ನಮಸ್ಕಾರ.

**ದುರ್ಗಾ:**—ಅಯ್ಯ ಸ್ವಲ್ಪ ಕೂಡ್ರಿ ಡಾಕ್ಟರ! ದ್ರೌಪಕ್ಕಾ ನೀನೇ ಒಂದು ಕಪ್ಪು ಚಹಾ ಮಾಡಿಕೊಂಡು ಬಾರವಾ. (ದ್ರೌಪತಿ ಹೋಗುವಳು) ನೋಡ್ರಿ ಮನ್ಯಾಗ ಗಂಡಸರು ಕೂಡಾ ಇಲ್ಲಾ. ನೀವೇನು ಸಂಕೋಚ ಮಾಡಿಕೊಳ್ಳಬ್ಯಾಡ್ರಿ. ಕೂತುಗೊಳ್ಳಿ. (ಕಲ್ಯಾಣರಾಯರು 'ಛೇ ಛೇ ಚಹಾ ಆಗೇದ ಬೇಡ—' ಎನ್ನುವರು.) ಭಿಡೆ ಮಾಡಿಕೊ ಬ್ಯಾಡ್ರಿ ಡಾಕ್ಟರ್! (ಡಾಕ್ಟರ್ ಕೂತುಕೊಳ್ಳುವರು. ದುರ್ಗಾಬಾಯಿ ಡಾಕ್ಟರನ್ನು ಕ್ಷಣಹೊತ್ತು ನಿರೀಕ್ಷಿ

ಸುವಳು. ಸೀತೆಯನ್ನು ಕಣ್ಸನ್ನೆಯಿಂದ ಸ್ವಲ್ಪ ದೂರ ಕರೆದು) ಸೀತಾ, ವರಾ ಏನ ಛಲೋ ಇದ್ದಾನ, ತೊಳೆದ ಮುತ್ತಿನಂಥಾ ಮಾರಿ.

**ಸೀತಾ:**— (ಆನಂದದಿಂದ ನಗುತ್ತ) ಇನ್ನೂ ಮದುವಿ ಆಗಿಲ್ಲ. ಒಳ್ಳೇ ಕುಬೇರನಂಥಾ ಸಾವಕಾರ್ರು, ದುರ್ಗಾಬಾಯಿ!

**ದುರ್ಗಾ:**—ಅವರ ಗೋತ್ರ ಏನು ಸ್ವಲ್ಪು ಕೇಳತೀಯೇನು?

**ಸೀತಾ:**—ಓಹೋ! (ಡಾಕ್ಟರ ಹತ್ತಿರ ಬಂದು) ಡಾಕ್ಟರ, ನಿಮ್ಮ ಗೋತ್ರ ಏನ್ರಿ? (ಅಹಲ್ಯೆ ಗಾಬರಿಗೊಂಡು ಸೀತೆಯನ್ನೂ ಡಾಕ್ಟರನ್ನೂ ನೋಡುವಳು)

**ಡಾಕ್ಟರ್:**— ಯಾಕೆ? (ಸಹಜವಾಗಿ ಅಹಲ್ಯೆಯನ್ನು ನೋಡಿ) ನನಗೆ ಹೊತ್ತಾಯಿತು ಬರುತ್ತೇನೆ.

**ದುರ್ಗಾ:**— ಯೇ, ದ್ರುಪ್ಪೀ, ದ್ರುಪ್ಪಕ್ಕಾ-ಲಗೂನೇ ಚಹಾ ತೊಗೊಂಡು ಬಾರs (ದ್ರೌಪತಿ ಚಹಾ ತರುವಳು, ಡಾಕ್ಟರರು ನಿರ್ವಾಹವಿಲ್ಲದೇ ಕುಡಿಯಲು ನೋಡುವರು) ಈಕೆ ಅಲ್ಲ—ಆಕಿ, ತಲೆಗೆ ಕೈಹಚಿಗೊಂಡು ಕೂತಾಳಲ್ಲ! ಸಿಡಿಲು ಬಡೆದವರ ಹಾಂಗ. ಖೋಡಿ ಏನೋ ನಾಪಾಸಾತಂತ. ದಿನಾಲೂ ಹತ್ತೆಂಟು ತಾಸು ಚೀಟಿಂಗ ಹೇಳಿಸತಿದ್ವಿ, ಡಾಕ್ಟರ. ಹಾಡತಾಳ, ಬಾರಸತಾಳ, ನಾಚು ಮಾಡತಾಳ, ಆಮ್ಯಾಲೆ ಕವಿತಾ, ಕಥಿ ಎಲ್ಲಾ ಪಾಠ ಮಾಡ್ತಾಳ. (ಡಾಕ್ಟರರು ನಗುವರು.) ನೋಡ್ರಿ ಡಾಕ್ಟರ್—ಮನೆಯೊಳಗ ಗಂಡಸರಿಲ್ಲಾ, ನೀವೇನು ಸಂಕೋಚಾ ಮಾಡಿಕೋಬ್ಯಾಡ್ರಿ; ಮಕ್ಕಳ ಸಮ ನೀವೂ. ಏನೋ ದೇವರ ಅನುಗ್ರಹ ಆದರ ಅಷ್ಟು ಕಣ್ಣುಮುಚ್ಚೋದರೊಳಗ ತಲೀಮ್ಯಾಲೆ ಅಷ್ಟು ಅಕ್ಕೀಕಾಳು ಹಾಕಬೇಕು ಅಂತೀವಿ....ಡಾಕ್ಟರ, ನಿಮ್ಮ ಗೋತ್ರ ಅಷ್ಟು ಹೇಳಿಬಿಡ್ರಿ.

**ಕಲ್ಯಾಣ:**—ನಮ್ಮ ಗೋತ್ರ ವಶಿಷ್ಠ.

**ದ್ರೌಪತಿ:**—ನಿಮ್ಮದು ಅರುಂಧತಿ ಅಲ್ರೀ ದುರ್ಗಾಬಾಯಿ?

**ದುರ್ಗಾ:**— (ಆನಂದದಲ್ಲಿ) ಅಯ್ ನೋಡ, ದೇವರ ಗೋತ್ರ ಅಂತೂ ಬಿಡತsದ. ಆಯಿತು ಬಿಡ್ರಿ ಇನ್ನು ಮುಂದಿನ ಕೆಲಸಾ ಹ್ಯಾಂಗಾರೆ ಬಗಿಹರಿಸೋಣು. (ಅಹಲ್ಯೆ ಕಳ್ಳ ನೋಟದಿಂದ ಡಾಕ್ಟರರನ್ನು ನೋಡುವಳು ಮುಗುಳು ನಗೆ ನಗುತ್ತ ಡಾಕ್ಟರರೂ ನೋಡುವಾಗ ನಾಚಿ, ಮುಖ ಕೆಳಗೆ ಹಾಕುವಳು. 'ಒಳ್ಳೇದು ನಮಸ್ತೇ ಬರತೇನಿ' ಎನ್ನುವರು) ಹೋಗಿಬರ್ರೆಪ್ಪಾ, ಬಾಸಿಂಗ ಬಳ್ಳಾ ಬದಗಿ

ಬಂದಿದ್ರ ಅಷ್ಟು ಲಗೂನ ಹೋಳಿಗಿ ಹಾಕಿಸಿಬಿಡೋಣ. (ಡಾಕ್ಟರರು ನಮಸ್ಕರಿಸಿ ಹೋಗುವರು. ಅಹಲ್ಯೆಗೆ) ಒಂದಿಷ್ಟು ಶುಂಠಿ ಹಾಕಿ ಹಾಲು ಮಳ್ಳಿಸಿ ತರತೀನಿ ಆಂ? (ಹೋಗುವಳು)

**ದ್ರೌಪತಿ:**—ಪಂಚ ಕನ್ನಿಕೆಯರಲ್ಲಿ ಪ್ರಥಮ ಸ್ಥಾನ ಪಡೆದ ಅಹಲ್ಯಾ ದೇವಿಯವರೇ ಆಯಿತು ಇನ್ನು ತಾವೂ 'ಕನ್ನಡ ಜಾಣೆ'ಯಾಗಿ ಅಡುಗೆಯ ಮನೆಯ ಗರತಿಯಾಗಿರಿ. ಇದೇ ಸ್ತ್ರೀಯರ ರತ್ನ ಸಿಂಹಾಸನ.

**ಸೀತಾ:**—V for Victory. M for Marriage (ಅಹಲ್ಯೆಗೆ) ನೀನು M. B. B. S ಆಗದಿದ್ರೂ M. B B S. ಆದವರ ಅರ್ಧಾಂಗಿ ಯಾಗು ಅಂದರೆ ಅರ್ಧ ಧ್ಯೇಯ ಸಾಧಿಸಿದಂತೇ.

**ಜನಾ:** — (ಪ್ರವೇಶಿಸಿ) ಅಯ್ಯ ನನ್ನ ಶಿವನ! ನಮ್ಮ ಬಾಯಿ ಹ್ಯಾಂಗ ನಪಾಸ ಆದರ್ರಿ ಬಾಯಾರ? ಅವನ ಹೊಟ್ಟೆ ಥಣಗಾಗಲಿ, ಯಾರು ಅವಾ ನಮ್ಮ ಬಾಯ್ರನ್ನ ನಪಾಸು ಮಾಡಿದವಾ.

**ಅಹಲ್ಯೆ:**—(ಸಾವಧಾನದಿಂದ ಚೇತರಿಸಿಕೊಳ್ಳುತ್ತ) ಜನಾಬಾಯಿ, ಹೇಳು ಶ್ರೀಕೃಷ್ಣನನ್ನ ಪ್ರತ್ಯಕ್ಷ ಮಾಡಿಸಿದ ನಿನ್ನ ಬೀಸುಕಲ್ಲಿನ ಒಂದು ಹಾಡು ಹೇಳು

**ದ್ರೌ. ಸೀ:**—ಹೇಳು ಹೇಳು, ನಿಮ್ಮ ಬಾಯರು ಗರತಿಯ ಹಾಡು ಕಲಿಯಲಿ. (ಜನಾಬಾಯಿ ಹೇಳುವಳು.)

—ತೆರೆ

——o——

# ಸಾಹಿತಿಯ ಶ್ರಾದ್ಧ

●

ಪಾತ್ರಗಳು

೧ ಒಬ್ಬ ತರುಣ ಸಾಹಿತಿ

೨ ಮತ್ತೊಬ್ಬ ನುರಿತ ಸಾಹಿತಿ

೩ ಪ್ರಕಾಶಕ ಹಾಗೂ ಸಂಪಾದಕ

●

## ಪ್ರವೇಶ ೧

(ದೃಶ್ಯ:— ಪ್ರಕಾಶಕ-ಸಂಪಾದಕರ ಕಚೇರಿ. ಎದುರಿಗೇ ಒಂದು ದೊಡ್ಡ ಟೇಬಲ್ಲು ಅದರ ಮೇಲೆ ಅನೇಕ 'ಪ್ರೂಫಿ'ನ ಹಾಳೆಗಳು, ದೌತಿ, ಟಾಕು, ಲೆಟರ ಪ್ಯಾಡ್, ಆದೇ ಬಂದ ಪತ್ರಗಳ ರಾಶಿ ಇತ್ಯಾದಿಗಳೆಲ್ಲವೂ ಹರವಿಬಿದ್ದಿವೆ. ಸಂಪಾದಕರ ಎದುರಿಗೇ-ಟೇಬಲ್ಲಿನ ಆಚೆ-ಮತ್ತಿತರ ಕುರ್ಚಿಗಳು ಎಡಬಲದಲ್ಲಿ ಪುಸ್ತಕಗಳ ಸೆಲ್ಫುಗಳೂ 'ಎಕ್ಸಚೇಂಜ' ಪುಸ್ತಕ-ಪತ್ರಿಕೆಗಳೂ ಮತ್ತಿತರ ಗ್ರಂಥಗಳೂ ಅವುಗಳ ಮೇಲಿವೆ. ಸಂಪಾದಕರು 'ಪ್ರೂಫ' ಪಾಸು ಮಾಡುವುದರಲ್ಲಿ ಮಗ್ನರಾಗಿರುವರು.)

ಹೊಗ್ಗೋ ಇವನ! ಒಪ್ಪೋಲೆಯಲ್ಲಿಯೂ ಸಹ ಮುದ್ರಾರಾಕ್ಷಸನ ಕೈಚಳಕ ತಪ್ಪಲಿಲ್ಲ. ಹೀಗೇ ಒಪ್ಪೋಲೆಗೊಂದು ಒಪ್ಪೋಲೆ ಜೋಡಿಸುತಾ ಹೋದರೆ-ಕಾಗದಿಲ್ಲದ ತುಟ್ಟಿಯ ದಿವಸದಲ್ಲಿ-ಟೆಕ್ಸ್ಟ ಬಿಟ್ಟು ಬರಿ ಒಪ್ಪೋಲೆ ಯನ್ನೆ ವಾಚಕರ ಕೈಗೆ ಕೊಡುವ ಪ್ರಸಂಗ ಬಂದೀತು!....ಹುಂ! 'ಸಾಹಿತ್ಯ ಹಂಸ' ಅಂತ ಇದ್ದುದನ್ನ 'ಸಾಹಿತ್ಯಕಂಸ' ಅಂತ ಹೊಡೆದು ಬಿಟ್ಟಾನ ಘಾಥಾಯಾ! ಇದೇನು ಕಂಪೋಜಿಟರನ ಕಲೆಯೋ, ತಲೆಯೊ! ಮತ್ತೇನು

ಮೊಳೆಯಿಲ್ಲದ ಅಚ್ಚಿನ ಖಾನೆಯಾಗಿರಬೇಕು ಇವನ ತಲೆನೂ....ಎಲಾ ! ಪೌರ ನೀತಿ ಇದ್ದದ್ದನ್ನ ಕ್ಷೌರನೀತಿ ಮಾಡ್ಯಾನಲ್ಲಾ ಶಹಬಾಶ್ ! ಮೊಳೆ ಜೋಡಿ-ಸುವವನೊ ಏನು ಜೋಡುಹೊಲಿಯುವವನೊ ಇವ ಎಲ್ಯಾರ....ಇಲ್ಲಾ, ಇವನೂ ಕ್ಷೌರನೀತಿಯವನೆ ಕಾಣಿಸತಾನ-ಪೌರನೇ ಇವ ! 'ವಾಚಕರಲ್ಲಿ ಬಿನ್ನಹ' ಜೋಡಿಸೋದೆ ಮರೆತುಬಿಟ್ಟಾನೊ ಏನು ಮಣ್ಣೊ. ಪ್ರಕಾಶಕರ ಹೊಟ್ಟೆಕಡೆತ ಈ ಮುದ್ರಾರಾಕ್ಷಸಗೇನು ಗೊತ್ತಾಗಬೇಕು. ಏನು ಬಿನ್ನಹಕೆ ಬಾಯಿಲ್ಲವಯ್ಯಾ' ಅಂತ ದಾಸೋಕ್ತಿಯನ್ನ ನೆನೆದು ಬಿಟ್ಟೇಬಿಟ್ಟಾನೊ.... ಎಲ್ಲಾ ಕಠಿಣ ! ಚಂದಾ ಹಣಾಕೊಡೋಬು ಅಂದರ ಪ್ರಕಾಶಕರ ಹೆಣಾ ಚಂದಾಮಾಡೋದು ಅಂತ ಶಪಿಸತಾರ ಈ ವಾಚಕರು. ಈ ಸಾಹಿತಿಗಳಿಗೆ ನೋಡಿದರ ವ್ಯವಹಾರದ ಬುದ್ಧೀನೆ ಇರೋದಿಲ್ಲ. ನೂರು ಪುಟದೊಳಗೆ ಒಂದು ಕಾದಂಬರಿ ಮುಗಿಸಿರಿ ಅಂದರ ಕನಿಷ್ಟ ನಾನೂರು ಪುಟಬೇಕು ಅಂತಾರ ! ಹುಂ ಅಂತ ಬರೆಯೋದು, ಮತ್ತ ಪುಟಕ್ಕ ಎರಡು ರೂಪಾಯಿ ಕೊಡ್ರಿ ಮೂರು ರೂಪಾಯಿ ಕೊಡ್ರಿ. ಸಾಹಿತ್ಯ ಅಂದರ ಸಟ್ಟಾವ್ಯಾಪಾರ ಅಂತ ತಿಳಿದಾರ. ಮತ್ತ ವ್ಯಾಲೆ ನೂರಾಯೆಂಟ್ ಕರಾರು-ಕಾಗದ ಪತ್ರಾ ! ಯಾ ಮಗಾ ಕೇಳತಾನ ಇವರ ಕರಾರು ಕಾಗದ ಪತ್ರ ! ಅಲ್ಲಾ, ಏನೊ ಪ್ರಕಾಶಕರು ಇದ್ದಾರಂತ ಈ ಸಾಹಿತಿಗಳು ಬೆಳಕಿಗೆ ಬಂದಾರ. ಆದರೆ ಇದನ್ನೆ ಮರೆತು ಬಿಡತಾರ ಅವರು !....ಇರಲಿ, ಇರಲಿ ನನ್ನ ಮುಂದ ಏನು ಓಡ್ಯಾರು ಇವರು. ಪ್ರಥಮ ಮುದ್ರಣ ಅಂತ ಎರಡು ಸಾವಿರ ಪ್ರತಿ ಛಾಪಿಸಿಗೊಂಡರ ಈ ಮಕ್ಕಳಿಗೇನು ತಿಳೀಯಬೇಕು. (**ಮತ್ತೆ ಕಾಗದಗಳನ್ನು ಓದುತ್ತ ಕೂಡುವಷ್ಟ ರಲ್ಲಿಯೇ, ಶುಭ್ರವೇಷಧಾರಿಯಾಗಿ ದೇಶಾವರಿ ನಗೆಯನ್ನು ಮಿಂಚಿಸುತ್ತ ಬಗಲೊಳ ಗೊಂದು ಹೆಬ್ಬೊತ್ತಿಗೆಯನ್ನು ಹಿಡಿದುಕೊಂಡು ತರುಣನು ಪ್ರವೇಶಿಸುವನು.**)

**ತರುಣ**:— (ಪ್ರವೇಶಿಸಿ) ಗುಡ್, ಗುಡ್........ಹ-ಹ-ನಮಸ್ತೆ, ನಮಸ್ಕಾರ್ರಿ !

**ಪ್ರಕಾಶಕ**:— (**ದುರುಗುಟ್ಟಿ ನೋಡಿ**) ಬರ್ರಿ. ಯಾರು ನೀವು ? ಕೂತುಕೊಳ್ರಿ.

**ತರುಣ**:— (**ಅತ್ಯಂತ ವಿನಯದಿಂದ**) ಛೆ. ಛೆ. ಛೆ. ಇರ್ಲಿ ಇರ್ಲಿ. ಇಲ್ಲೇ ಇರ್ಲಿ. (**ಎಂದು ನೆಲದ ಮೇಲೆ ಕೂಡ ಹೋಗುವನು.**)

**ಪ್ರಕಾಶಕ:**—ಏನು ಇರ್ಲಿ, ನಮ್ಮ ಮರ್ಯಾದಿ ತೊಗೊಂಡೀರಿ ! ಇತ್ತಕಡೆ ಬಂದು ಕೂಡ್ರಿ. [ಸ್ವ] ಸರಿ, ಈ ವ್ಯಕ್ತಿಯ ದೇಶಾವರಿಯ ವ್ಯಾಲಿಂದ ಇವ ಒಬ್ಬ ಹೊಸಬ ಸಾಹಿತಿನೇ ಇದ್ದಿರಬೇಕು ಅಂತ ತೋರತದ.

**ತರುಣ:**— (ಬಗಲೊಳಗಿನ ಗಂಟುತೆಗೆದು) ಹ-ಹ ! ಇದೊಂದು ಕತೆಗಳ ಸಂಗ್ರಹ ತಂದೀನಿ. ಏನೊ ಮತ್ತ ನಿಮ್ಮಲ್ಲೆ ಚಿಗುರುವ ಸಾಹಿತಿಗಳಿಗೆ ಉತ್ತೇಜನ ಸಿಕ್ಕೀತು ಅಂತ!....ಹ-ಹ-! ನಿಮ್ಮ ಗ್ರಂಥಮಾಲಾ ಅಂದರ ಕರ್ನಾಟಕದೊಳಗೇ ಅದ್ವಿತೀಯವಾದದ್ದು ಅಂದರೆ ಅತಿಶಯೋಕ್ತಿಯಾಗ ಲಿಕ್ಕಿಲ್ಲ. ಅಂತಹದರಲ್ಲಿ ನಮ್ಮದೂ ಒಂದು ಪುಷ್ಪ ಏರಲಿ ಅಂತ.

**ಪ್ರಕಾಶಕ:**—ಛೆ. ಛೆ. ಅವಶ್ಯ ಏರಿಸತೀನಿ ಪುಷ್ಪ.

**ತರುಣ:**— (ದೇಶಾವರಿ ನಗುವನು.) .

**ಪ್ರಕಾಶ:**—[ಸ್ವ] ನಕ್ಕ ! ಸಾಹಿತಿಯಾಗುವ ರೋಗನೇ ಬಡಿದಂತೆ ಕಾಣಿಸತದೆ ಇವನಿಗೆ [ಪ್ರ.] ಎಲ್ಲಿ ನೋಡೋಣ ಇತ್ತಕಡೆ ಚಾಚರಿ ನಿಮ್ಮ ಹೊತ್ತಿಗಿ.

**ತರುಣ:**— (ಅತ್ಯಂತ ಆದರದಿಂದ ಅರ್ಪಿಸುವನು ) ಹ-ಹ !

**ಪ್ರಕಾಶಕ:**— (ಪಾನು ತಿರುವುತ್ತ) ಇವೆಲ್ಲಾ ಕತೆಗಳು ನಿಮ್ಮವೇನೊ?

**ತರುಣ:**—ಹ-ಹ- ಹೌದರಿ. ಇನ್ನೂ ಎಲ್ಲಿಯೂ ಅಚ್ಚಾಗಿಲ್ಲ. ಬರೆದಿಟ್ಟು ಬಹಳ ದಿವಸ ಆಯಿತು.

**ಪ್ರಕಾಶಕ:**—[ಸ್ವ] ಗೆದ್ದಲಿಗಿದ್ದಲಿ ಇಲ್ಲೇನು ನಿಮ್ಮ ಮನಿಯೋಗ ! [ಪ್ರ.] ಆದರೆ ಇದೇನಿದು ಒಂದೊಂದು ಕತೆಗೆ ಒಂದೊಂದು ಪೆನ್‌ನೇಮ ಇಟ್ಟುಕೊಂಡಿರೆಲ್ಲಾ.

**ತರುಣ:**—ಒಂದು ವೈವಿಧ್ಯದ ಸಲುವಾಗಿ ಹಾಗೆ ಇಟ್ಟದ್ದೆ. ಮತ್ತು ಇವುಗಳಲ್ಲಿ ಯಾವ ಹೆಸರು ನೀವು ಶಿಫಾರಸು ಮಾಡುತೀರಿ ಅದನ್ನೆ ಸಂಗ್ರಹಕ್ಕೆ ಇಟ್ಟುಬಿಡಬೇಕೂಂತ.

**ಪ್ರಕಾಶಕ:**—ಇದೇನಿದು S. K D ಅಂದರೇನು ?.

**ತರುಣ:**—S. K. D. ಅಂದರೆ 'ಸಾಹಿತ್ಯ ಕಾರ್ಯ ಧುರೀಣ' ಅಂತ, S. K. D. ಅಂದರೆ 'ಸರಸ್ವತೀ ಕಂಠಾಭರಣ' ಅಂತ.

**ಪ್ರಕಾಶಕ:**—[ಸ್ವ] 'ಸರಸ್ವತೀ ಕಂಠಾಭರಣವೊ' ಏನು ಸರಸ್ವತೀ ಗಂಟಲಗಾಣವೊ. [ಪ್ರ] ಹೂ. ಸಾಗಲಿ.

**ತರುಣ:**—S. S. S. ಅಂತ ಎಸ್‌ಕ್ಲ್ಯಾಬ್ಬ ಇದೆ ನೋಡ್ರಿ. ಅಂದ್ರೆ 'ಸಾಹಿತ್ಯಸೇವಾಸಕ್ತ' ಅಂತ. S. S K. ಅಂತ ಒಂದಿದೆ ನೋಡಿರಿ, ಹಾಗಂದರೆ 'ಸಮಾಜ ಹೃತ್ಸಹಸ್ರದಲಕಮಲ' ಅಂತ ಒಂದು ಕತೆಗೆ ಇಟ್ಟೀನಿ. R. J M. S H. ಅಂತ ಇನ್ನೊಂದಿಕ್ಕದೆ. ಅದೆಂದರೆ 'ರಸಿಕ ಜನ ಮನ ಸಾರ ಸೋತ್ತುಂಗ ಹಂಸ' ಅಂತ S P. ಅಂತ ಎರಡೇ ಅಕ್ಷರ ಉಳ್ಳದ್ದು 'ಸಮಾಜ ಪಂಕೇರುಹ' ಅಂತ. ತಿಳಿಯಿತಲ್ಲ? ಅದ್ಕ್ಯಾಲಿ, ಪ್ರಕಾಶನದ ಪೂರ್ವದಲ್ಲಿ ನಮ್ಮದು ಇನ್ನೊಂದು ವಿನಂತಿ ಇದನ್ನು ನನ್ನ ವಂಶಪಾರಂ-ಪರ್ಯಕ್ಕೆ ಅರ್ಪಣಮಾಡಬೇಕು ಅಂತ ಮನಸ್ಸಿದೆ.

**ಪ್ರಕಾಶಕ:**—ಅಂದರೆ ಪಿತಾ, ಪಿತಾಮಹ, ಪ್ರಪಿತಾ ಮಹ ಇಷ್ಟೇನೊ ಇಲ್ಲವೆ ನಿಮ್ಮ ಗೋತ್ರದ ಋಷಿಮುನಿಕನ್ನೂ ?

**ತರುಣ:**—ಛೆ. ಛೆ. ಅಲ್ಲ. ಅಂದರೆ ನಮ್ಮ ತಂದೆ—ತಾಯಿ, ನಮ್ಮ ಅತ್ತೆ—ಮಾವ, ಅಕ್ಕತಂಗಿ.

**ಪ್ರಕಾಶಕ:**—ಸರಿ, ಸರಿ. ಪಾಪ! ಎಷ್ಟು ಮಂದಿನ್ನ ಕಂಡೊಂಡೀರಿ.

**ತರುಣ:**—ಅಂತೇ ನಮ್ಮ ಜೋಡಿ ನಮ್ಮ ಬಂಧು ಬಳಗದ ಹೆಸರುಗಳೂ—

**ಪ್ರಕಾಶಕ:**—ಆಚಂದ್ರಾರ್ಕವಾಗಿ ನಿಲ್ಲಲಿ ಅಂತ ನಿಮಿಚ್ಛೆ.

**ತರುಣ:**—ಅಧಿಕ ಒಮ್ಮೊಮ್ಮೆ ಸಾಮಾಜಿಕ ಕ್ರಾಂತಿ ಅಂತ ಒಂದು ಹರಿಜನ ಕನ್ಯೆಗೆ ಅರ್ಪಣ ಮಾಡಿಬಿಡಬೇಕೂ ಅಂತನೂ ಅನಿಸತದ.

**ಪ್ರಕಾಶಕ.**—ಅಂದರ ನಿಮ್ಮದೂ ಹರಿಜನ ಕನ್ಯೆಯೊಡನೆ..........

**ತರುಣ:**—ಅಲ್ಲಾ, ನಮ್ಮನೆ ಕಥೆಯೊಳಗ ಇಷ್ಟs. ಹಾಗೆ ನೋಡಿದರೆ ನನ್ನ ಕಥಾಸಂಗ್ರಹದಲ್ಲಿ ಹರಿಜನ ಲವ್ವಸ್ಟೋರೀಜ್ ಯುನಿವ್ಹರ್ಸಿಟಿ ಲವ್ವಸ್ಟೋರಿಜ್, ಮದ್ಯಪಾನದ ಅನಾಹುತ ಇತ್ಯಾದಿ ವೈವಿಧ್ಯವೆಲ್ಲಾ ಇದೆ. ಒಂದೊಂದು ಕತೆಯಲ್ಲಿಯೂ ಒಂದೊಂದು ಬಗೆಯ ಸಾಮಾಜಿಕ ಘೋರ ಸಮ

ಸ್ಯೆಯನ್ನೆ ಸೂರೆಗೊಂಡು ಬಿಟ್ಟಿದ್ದೇನೆ. (ಸ್ವಲ್ಪ ಆವೇಶ ಬಂದಂತಾಗಿ) ಏನು ಇವೊತ್ತು ಈ ಎರಡು ಕಣ್ಣ ಕಾಣತಾವೆ, ದೇವರು ಕೊಟ್ಟಾನಂತ ಎರಡೇ ಕಣ್ಣು—ಬರಗಾಲ, ಬಂಗಾಲ, ಕಂಗಾಲ, ಯುದ್ಧ ಚಳುವಳಿ, ದಾಂಪತ್ಯ, ವಿಧವಾ, ಬಾಲಗಂಧರ್ವ ವಿವಾಹ ಒಟ್ಟೇನು ಎಲ್ಲಾ ಎಲ್ಲಾ ತುಂಬ್ಯಾವ. ಏನು ಮಾಡಲಿ, ಎಲ್ಲಿ ಸರಕಾರದವರು 'ಸೆನ್‌ಸಾರ' ಮಾಡತಾರೊ ಅಂತ ಭಯ. ಮತ್ತು ಒಂದೊಂದರಲ್ಲಿ ಒಂದೊಂದು ಬಗೆಯ ನೂತನ ವಿನೂತನ ಶೈಲಿ ಹೊರಹೊಮ್ಮಿಸಿಬಿಟ್ಟೇನಿ. ಪ್ರತಿಯೊಂದು ಕತೆಯಲ್ಲಿಯೂ ಪಾತ್ರಸೃಷ್ಟಿ, ಪ್ರಕೃತಿವರ್ಣನೆ, ಸಂಭಾಷಣೆ ಕಥಾವಸ್ತು ಎಲ್ಲಾ ಕೆಮಿಕಲ್ ಫಾರ್ಮುಲಾ ಕೂಡಿದ ಹಾಗೆ ಅಷ್ಟೊಂದು ಪಾಸ್ಯ—ತಕ್ಕಡಿಗೆ ಸರಿಯಾಗಿ ಕೂಡಿವೆ. ಒಂದ ರಲ್ಲಿ ಮಾಸ್ತಿಯವರ ಸುಬ್ಬಣ್ಣ, ಇನ್ನೊಂದರಲ್ಲಿ ಆನಂದರ ಮಾಟಗಾತಿ, ಮತ್ತೊಂದರಲ್ಲಿ ಆನಂದಕಂದರ ಬಡತನದ ಬಾಳು ಇವೆಲ್ಲಾ ಕಂಡುಬರುತ್ತವೆ. ಅಂದರೆ, ಆಯಾ ಯೋಗ್ಯತೆಗೆ ಬಂದು ನಿಲ್ಲುತ್ತವೆ ಅಂತ....ಅಲ್ಲದೆ, ಎಲ್ಲ ಸಾಹಿತಿಗಳಂತೆ ನಾನೂ ಒಂದೇಮಗ್ಗಲು ಖಾಲಿ ಇದ್ದ ಹಾಳೆಯ ಮೇಲೆ ಬರೆದೀನಿ.

**ಪ್ರಕಾಶಕ:**—ಆದರೆ ಸದ್ಯಕ್ಕ ನಾವು ಕಥಾಸಂಗ್ರಹ ಹಾಕುವಂತಿಲ್ಲ ವಲ್ರಿ ?

**ತರುಣ:**— ನೀವು ಬಿಡ್ರಿ. ನಾನು ರೊಕ್ಕ ಕೊಡಿಸತೀನಿ ಹಾಕರಿ. ನೀವು ಅದಕ್ಕೇನೂ ಕಾಳಜಿಮಾಡಬೇಡ್ರಿ. ಇವೊತ್ತು ಈ ಕವಿಗೆ ದೊರೆಯ ಬೇಕಾದ ರಾಜಾಶ್ರಯ ಅಂದರೆ ಕೇವಲ ನಿಮ್ಮ ಉತ್ತೇಜನ....ಮತ್ತೆ ನೀವು ಕತೆ ಬೇಡ ಅಂದರೆ ಕಾದಂಬರಿನೂ ಒಂದು ಬರೆದಿಟ್ಟೇನೆ. ಕೇವಲ sex problem ತಗೊಂಡು ಬರೆದಿಟ್ಟೇನಿ. ಅಥವ ಮಾರಾಟವಾಗುತ್ತಿದ್ದರೆ ಬರಿ sex ಮೇಲೇ ನಿಮಗೆ ಶಾಸ್ತ್ರೀಯ ಗ್ರಂಥ ಬರೆದುಕೊಡುತ್ತೇನೆ. ಬೇಕಾದರೆ ಬರ್ಥ ಕಂಟ್ರೋಲ್, ಬೇಕಾದರೆ ರಜಿಸ್ಟರ ಮ್ಯಾರೇಜ್ ಬೇಕಾದರೆ ಸಮಾಜ ಶಾಸ್ತ್ರ....ಒಟ್ಟೇನು ನಮ್ಮದೊಂದು ಹೊತ್ತಿಗೆ ನಿಮ್ಮ ಮಾಲಾದೊಳಗ ಬೀಳಲಿ ಅಂತ....ಛೆ. ಛೆ. ನಿಮ್ಮ ಮಾಲಾದೊಳಗಿನ ಎಲ್ಲಾ ಗ್ರಂಥಗಳನ್ನು ಓದೀನಿ. ಒಂದೊಂದು ಅದ್ವಿತೀಯ ಗ್ರಂಥನೇ.

**ಪ್ರಕಾಶಕ:**—ಅದಕ್ಕೆ ವಿಷಾದ ಅನಿಸತದರೀ.

**ತರುಣ**:—ಛೆ! ಅದಕ್ಕೇಕೆ ವಿಷಾದರಿ. ಪುಸ್ತಕ ಅದ್ವಿತೀಯ ಅಂದರ ವಿಷಾದೇನು?....ಮತ್ತೆ, ಅಂತೇ ನಾನು ನಿಮ್ಮ ಗ್ರಂಥಮಾಲೆಗೆ ಕಾಯಂ ಚಂದಾದಾರನಾಗಬೇಕೆಂದಿದ್ದೇನೆ. ಬೇಕಾದರೆ ನಿಮ್ಮ ಮಾಲೆಗೆ ನನ್ನನ್ನು ಆಜೀವ ಸದಸ್ಯನನ್ನಾಗಿ ಮಾಡಿಕೊಳ್ಳಿರಿ. ಬೇಕಾದರೆ ಪೋಷಕನನ್ನಾಗಿಯೂ ಮಾಡಿಕೊಳ್ಳಬಹುದು. ಅಲ್ಲಾ, ಬೇಕಾದರೆ ಆಜೀವ ಸಲಹೆಗಾರ, ಲೇಖಕ ಅಂತನೂ ಮಾಡಿಕೊಳ್ಳಬಹುದು.

**ಪ್ರಕಾಶಕ**:—ಹು. ಬೇಕಾದರೆ ಬೇಕಾದ್ದೂ ಮಾಡತೀವಿ ಬಿಡ್ರಿ. ಅಲ್ಲಾ ಏನೊ ಒಂದು ಐವತ್ತು ಚಂದಾದಾರರನ್ನಾದರೂ ಮಾಡಿಕೊಟ್ಟರ ಅಡ್ಡಿಯಿಲ್ಲ.

**ತರುಣ**:— ಐವತ್ತಂತೆ! ಐನೂರು ಚಂದಾದಾರ್ರನ್ನ ಮಾಡಿಕೊಡತೀತಿ. ನನ್ನ ಸಾಹಿತ್ಯ ಪ್ರಕಟ ಮಾಡತೀರೇನು? ಬೇಕಾದರೆ ನಿಂತಕಾಲ ಮ್ಯಾಲೆ ಹಣಾರೋಖ ಎಣಸತೀನಿ.

**ಪ್ರಕಾಶಕ**:— (ಬಾಯಲ್ಲಿ ನೀರುಬಿಟ್ಟು) ಅಡ್ಡಿಯಿಲ್ಲ. ಜರೂರು ಜರೂರು ನಿಮ್ಮ ಸಾಹಿತ್ಯ ಪ್ರಕಟಮಾಡತೀನಿ.

**ತರುಣ**:—ಮೆನಿ ಥ್ಯಾಂಕ್ಸ! ಭಾವೀ ರಾಷ್ಟ್ರ ಭಾಷೆಯಲ್ಲಿ ಶುಕ್ರಿಯಾ, ಅಚ್ಚಗನ್ನಡದಲ್ಲಿ ಒಳ್ಗಿಯ್ಮೆ.

**ಪ್ರಕಾಶಕ**:—ನಿಮ್ಮಂತಹ ಲೇಖಕರೂ ಚಂದಾದಾರರೂ ನಮಗೆ ದೊರೆತರೆ ನಾಳೆ ಕನ್ನಡವು ಉದ್ಧಾರವಾಗುವುದು.

**ತರುಣ**:—ಸಿರಿಗನ್ನಡಂ ಗೆಲ್ಗೆ....ಚಹಾ ಗಿಹಾ ತೊಗೋತೀರೇನು?

**ಪ್ರಕಾಶಕ**:—ಛೆ. ಛೆ. ನಾವು ಚಹಾದವರು ಅಲ್ಲ.

**ತರುಣ**:—ಹಾಗಾದರೆ ಪುರಿ? ಸಿರಿಕಂಡ?

**ಪ್ರಕಾಶಕ**:—ಆಗಬಹುದು. ಆದರೂ ಯಾಕೆ?

**ತರುಣ**:—ಛೆ. ಛೆ. ಸಿರಿಕಂಡಮುಂ ಮೆಲ್ಗೆ....ಎಲ್ಲಾ ಅಂತಡಿ ಹಾಗಾದರೆ ಯಾವುದು ನಿಶ್ಚಿತ ಆದಂತಾಯಿತು? ಕಥಾಸಂಗ್ರಹವೊ? sex ಕಾದಂಬರಿಯೊ? ಅಥವ....

**ಪ್ರಕಾಶಕ**:—ಯಾಕೆ, ಎಲ್ಲಾ ಕೂಡಿಸಿ ನಿಮ್ಮದೊಂದು 'ಆಮ್ನಿಬಸ್' ಹೊತ್ತಿಗೆಯನ್ನೆ ಹೊರಡಿಸೋಣ ನಡೆಯಿರಿ—ಅಲ್ಲಾ ಮತ್ತ ರೂಪಾಯಿ.... ಏನೋ ಸ್ವಲ್ಪ ಅಡಚಣಿ.

**ತರುಣ**:— ಮನೆಯವರಿಗಾದರೂ ಬರತೀರೋ ಇಲ್ಲೋ? ಹೇಳಿದೆನಲ್ಲಾ, ನಮ್ಮ ತೀರ್ಥರೂಪರು ಮೊನ್ನೆ ಮೊನ್ನೆ ಕೀರ್ತಿಶೇಷರಾಗಿ ಭಂಡಾರದ ಬೀಗದ ಕೈಯನ್ನೆ ಕೊಟ್ಟು ಹೋಗಿದ್ದಾರೆ.

**ಪ್ರಕಾಶಕ**:— ಅವಶ್ಯ. ಅವಶ್ಯ! ಅಂದಮೇಲೆ ಅವರಿಗೇ ನೀವು 'ಡೆಡಿಕೇಟ್' ಮಾಡಿರಿ ನಿಮ್ಮ ಉದ್ಗ್ರಂಥ!

**ತರುಣ**:— ಹಾಗಾದರೆ ಹೊರಡೋಣ ನಡೆಯಿರಿ. (ಹೋಗುವರು)

## [ ಪ್ರವೇಶ ೨ ]

(ನಾಲ್ವತ್ತು ವಯಸ್ಸಿನ ಸುರಿತ ಸಾಹಿತಿಯೊಬ್ಬ ಕೆದರಿದ ತಲೆ, ಪಂಚೆ ಉಟ್ಟುಕೊಂಡು ಮೈಯಲ್ಲಿ ಬಿಂದ ಅಂಗಿ ತೊಟ್ಟುಕೊಂಡು ಕ್ಷುಬ್ಧ ಮಹಾಸಾಗರದಂತೆ ತಾಳಬದ್ಧವಾಗಿ ಹೊಯ್ದಾಡುತ್ತ ತನ್ನ ಕೋಣೆಯ ಸೆಲ್ಫು, ಕಪಾಟುಗಳಿಂದೆಲ್ಲಾ ತನ್ನ ಬರಹಗಳನ್ನು ತೆಗೆತೆಗೆದು ನೆಲದ ಮೇಲೆ ರಾಶಿ ಹಾಕುತ್ತ 'ಕಡಲು ಬಂತೋ, ಕುಣಿಯುತಾನ! ಬಗಲಿಗಿಲ್ಲೊ ಕಾಸುತಾನ! ಹೊಡಿ ಹೊಡಿ ಹೂಡಿ ನಗಾರಿ ಮೇಲೆ ಕೈ!' ಎಂದು ದಮರು ಬಾರಿಸುತ್ತ ಕುಣಿಯುತ್ತ ಹಾಡುವುದಾದ ಮೇಲೆ) ಇಂದು ನನ್ನ ಸಾಹಿತ್ಯ ಪುರುಷನ ಶ್ರಾದ್ಧ! ಅವನ ತಿಲಾಂಜಲಿ ಇದು! ಅವನ ದಹನದ ಚಿತೆಯಿದು. ಸಾಹಿತ್ಯ ಬ್ರಹ್ಮನಾಗಿ ಸೃಷ್ಟಿಸಿದೆ, ಸಾಹಿತ್ಯ ವಿಷ್ಣುವಾಗಿ ಗೆದ್ದಲಿ ಹುತ್ತದಿಂದ ಕಾಪಾಡಿದೆ, ಇಂದು ಸಾಹಿತ್ಯ ರುದ್ರನಾಗಿ ನಾಶಮಾಡುವೆ. ಇಂದೇ ಸಾಹಿತ್ಯದ ಪ್ರಳಯಕಾಲ. ಎಲೈ 'ಸಾಯಿತಿ'ಯೇ ನಟನಾಗಿ ನಿನ್ನ ಡೊಂಬರ ತಾಂಡವನ್ನಾರಂಭಿಸು (ಎಂದು ಡಮರು ಬಾರಿಸುತ್ತ ಹೊಟ್ಟೆ ಹೊಡೆಯುತ್ತ ಕುಣಿಯುತ್ತಿರುವನು) ಯಾವ ಸಾಹಿತ್ಯ ಈ ಗೇಣು ಹೊಟ್ಟೆಯನ್ನು ತುಂಬುವುದಿಲ್ಲವೋ ಆ ಸಾಹಿತ್ಯದ ಪ್ರಯೋಜನವೇನು? ಯಾವ ಆನಂದಕ್ಕಾಗಿ ಸಾಹಿತ್ಯವನ್ನು ಹುಟ್ಟಿಸಲಿ?....ಜನರ ಸಂತೋಷಕ್ಕಾಗಿ ಬರೆಯಲೆ? ಈ ನೀಚ ನಿಷ್ಕರುಣ ಜಗತ್ತನ್ನು ಸಂತುಷ್ಟಗೊಳಿಸಿದರೆ ನನಗೇನು ಬರಬೇಕಾಗಿದೆ? ನನಗೆ ಬೇಕು ಅರ್ಥ, ನನಗೆ ಬೇಕು ಸ್ವಾರ್ಥ! ಸ್ವಾರ್ಥದ ಗೋರಿಯ ಮೇಲೆ ಪರಾರ್ಥದ ಗುಮುಟವನ್ನು ನಿಲ್ಲಿಸಲೆ? ಇದು ಶಕ್ಯವಿಲ್ಲ. ಇದು ಸಾಧ್ಯವಿಲ್ಲ, ಎಲೈ ನೀಚ ಸಮಾಜವೇ, ಇದು ನೋಡು ನಿನಗೆ ಇದರ ಬೂದಿಯು ಸಹ ಸಿಗದಂತೆ ಇವನ್ನು ಹೋಳಿ ಮಾಡಿ ಹುಡಿಗೂಡಿಸಿ ಬಿಡುವೆ.... (ವಿಚಾರಿಸಿ) ಕೀರ್ತಿಗಾಗಿ ಸಾಹಿತ್ಯವೆ! ಎಲೈ ಕೀರ್ತಿ ಶನಿಯೆ ನಿನ್ನಿಂದ ಪಾರಾ

ಗುವುದಕ್ಕಾಗಿಯೇ ನನ್ನ ಸಾಹಿತ್ಯದೊಡನೆ ನಿನ್ನನ್ನೂ ಭಸ್ಮೀಭೂತಗೊಳಿಸುವೆ.... ಸಮಾಜವನ್ನು ತಿದ್ದಬೇಕೆಂದು ಸಾಹಿತ್ಯ ನಿರ್ಮಿಸಿದೆ, ಸಮಾಜದ ಮಂಕು ಹೆಚ್ಚಾಯಿತು, ಡೊಂಕು ಹಿರಿದಾಯಿತು. ಸಮಾಜವನ್ನು ಸಂಗಡಿಸಬೇಕೆಂದೆ, ಹಿಂಗಡಿಸಿ ಹೋಯಿತು. ಹೊಟ್ಟೆ ಬರಿದಾಯಿತು. ಇನ್ನು ಮೇಲೆ ಯಾಕೆ ಬರೆಯಲಿ? ಇಗೊ! ಸಾಹಿತ್ಯ ಪುರುಷನೆ ಇದೇ ನಿನ್ನ ಕೊನೆಮೊದಲ ತಿಲಾಂಜಲಿ. (ಎಳ್ಳು ನೀರು ತಂದು ಬಿಡುವನು) ಇದೇ ಸಾಹಿತಿಯ ಶ್ರಾದ್ಧ! ಇನ್ನು ನಾನು ಬದುಕುವುದು ಮಾನವನಾಗಿ!....ಹುಂ! ಇನ್ನೇಕೆ ತಡ? ಫಲಂ, ಪುಷ್ಪಂ, ದೀಪಂ ಸಮರ್ಪಯಾಮಿ, (ಎಂದು ಕಡ್ಡಿಕೊರೆದು ಒಂದು ಪಂಜಿಗೆ ಹಚ್ಚಿ ಆ ಪಂಜಿನಿಂದ ಸಾಹಿತ್ಯ ರಾಶಿಯನ್ನು ಕೈಯಲ್ಲಿ ಹಿಡಿದುಕೊಂಡು ಇನ್ನೊಂದು ಕೈಯಿಂದ ಡಮರು ಬಾರಿಸುತ್ತ ಮತ್ತೆ ಮೇಲಿನ ಹಾಡನ್ನು ಹಾಡುತ್ತ ಕುಣಿಯ ಹತ್ತುವನು. ಅಷ್ಟರಲ್ಲಿಯೇ ಪ್ರಕಾಶಕನು ಬಂದು)

**ಪ್ರಕಾಶಕ:**—ಎಲ! ಇದೇನು ಸಾಹಿತ್ಯದ ತಾಂಡವನೃತ್ಯ ಏನು?

**ಸಾಹಿತಿ:**—ಅಲ್ಲ, ಹೊಟ್ಟೆಯ ಡೊಂಬರ ನೃತ್ಯ.

**ಪ್ರಕಾಶಕ:**—ಏನು ಸಾಹಿತ್ಯದ ರೌದ್ರಾವತಾರ ಇದು? ಇದೇನಿದು ಕೈಯೊಳಗ?

**ಸಾಹಿತಿ:**— ಅದು ಸಾಹಿತ್ಯದ ಪ್ರಳಯಾಗ್ನಿ—ಆಯಿತು. ಸಾಹಿತ್ಯ ದಹನದ ಕಾಲಕ್ಕೆ ಪಾಂಚಜನ್ಯ ಪುಟಿಸುವ ನೀನೊಬ್ಬ ಪ್ರಕಾಶಕ ಇಲ್ಲಿ ನಿಲ್ಲು.

**ಪ್ರಕಾಶಕ:**— (ಕೈಯೊಳಗಿನ ಪಂಜು ಬೀಸಿ ಒಗೆದು, ಸಾಹಿತ್ಯದ ರಾಶಿಯನ್ನು ಶೇಖರಿಸಲು ಹೋಗುವನು)

**ಸಾಹಿತಿ:**—ಹಾ! ಮುಟ್ಟಿದರೆ ಬ್ರಹ್ಮನ ಆಣೆ!

**ಪ್ರಕಾಶಕ:**—ಅಲ್ಲೊ, ಸುಮ್ಮನೆ ಸುಟ್ಟುಹಾಕಿದರೆ ಬಂತೇನು? ನನಗಾದರೂ ಕೊಡಲ್ಲ.

**ಸಾಹಿತಿ:**—ನಿನ್ನ ಕೈಗೆ ಸಿಗಬಾರದೆಂದೇ ಈ ಉಗ್ರೋಪಾಯ

**ಪ್ರಕಾಶಕ:**—ಯಾಕೆ, ನಿನ್ನ ಸಾಹಿತ್ಯವನ್ನು ಜಗತ್ತು, ಓದಿ ನಲಿದು ಆನಂದ ಹೊಂದಬಾರದೇನು? ಅಷ್ಟೊಂದು ಸ್ವಾರ್ಥ ಯಾಕೆ ನಿನಗೆ?.... ಕನಿಷ್ಟ ಪಕ್ಷಕ್ಕೆ ಕಿರಾಣಿ ಅಂಗಡಿಗಾದರೂ ಹಾಕಿದರೆ ನಾಲ್ಕು ದುಡ್ಡು ಬರಬಹುದಲ್ಲ, ಹಾಳಿಯ ಕಿಮ್ಮತ್ತಿಗಾಗಿ.

**ಸಾಹಿತಿ:**—ನನ್ನ ಸಾಹಿತ್ಯ ನಾನು ಸುಡುವುದು ಸ್ವಾರ್ಥದ ಪ್ರಭಾವ ಅಲ್ಲ, ಅರ್ಥದ ಅಭಾವ! ಹೇಳು ಅರ್ಥಕೊಡುವ ತ್ರಾಣ ನಿನ್ನಲ್ಲಿದ್ದರೆ.

**ಪ್ರಕಾಶಕ:**— ಎಷ್ಟಾದರೂ ಕೊಡಬೇಕಂತೀದಿ?....ನೋಡು ನಿನ್ನ ಸಾಹಿತ್ಯ ಹ್ಯಾಗೇ ಇರಲಿ, ನನಗೆ ನಿನ್ನ ನಾಮದ ಬಲವೊಂದಿದ್ದರೆ ಸಾಕು! ನಾನು ರೊಕ್ಕ ಕೊಡುವುದು ನಿನ್ನ ಹೆಸರಿಗಾಗಿ: ಮೂರು ಅಕ್ಷರಕ್ಕಾಗಿ.

**ಸಾಹಿತಿ:**—ನನ್ನ ಹೆಸರಿನ ಮೂರಕ್ಷರಕ್ಕಾಗಿ ನೀನೂ ಮೂರಕ್ಷರ ಬಿಟ್ಟೀ ಕೇಳತೀಯೇನು? ನಾವು ಸಾಹಿತ್ಯದಲ್ಲಿ ಗಾಳಿಗೋಪುರ ಕಟ್ಟಿದ್ದರೆ ನಮ್ಮ ಸಾಹಿತ್ಯದ ಮಾರಾಟದಿಂದ ನೀನು ಚಿನ್ನದ ಗೋಪುರ ಕಟ್ಟಿದೆಯಲ್ಲೊ!

**ಪ್ರಕಾಶಕ:**—ಹೇಳಿದೆನಲ್ಲಾ, ಹೆಸರು ಬಿದ್ದ ಸಾಹಿತಿ ಇದ್ದರೆ ಗ್ರಂಥಕ್ಕೆ ಐವತ್ತು ಪ್ರತಿಗಳು ಅಂತ.

**ಸಾಹಿತಿ:**—ಆ ಐವತ್ತು ಗ್ರಂಥಗಳ ಒಂದು ಮಾಲೆ ಮಾಡಿ ಕೊರಳಿಗೆ ಹಾಕಿಕೋ ಅಂತಿಯೇನು? ಸುಡು ನಿನ್ನ ಐವತ್ತು ಗ್ರಂಥ. ನನ್ನ ಸಾಹಿತ್ಯದ ಒಂದೊಂದು ಅಕ್ಷರವನ್ನು ಎದೆಯ ನೆತ್ತರದಲ್ಲಿ ಎದ್ದಿ ಬರೆದೀನಿ. ನಿನ್ನ ಐವತ್ತು ಗ್ರಂಥ ಮಾರಿದರೆ ಒಂದು ಪೌಂಡ ಮಾಂಸ ಸಹ ಕೊಡುವುದಿಲ್ಲ ನನ್ನ ದೇಹಕ್ಕೆ.

**ಪ್ರಕಾಶಕ:**—ಅಂದರ, ನೀನು ಗ್ರಂಥ ಮುಗಿಸುವವರೆಗೂ ನಿನ್ನ ಬೋರ್ಡಿಂಗಲಾಜಿಂಗ ಖರ್ಚೂ ಕೊಡು ಅಂದೇನು?....ನಾಳೆ ಮತ್ತ ಕಾದಂ-ಬರಿಯೊಳಗೆ ಗೌರೀಶಂಕರ ವರ್ಣನೆ ಬರತದ-ಅದಕ್ಕಾಗಿ ಹಿಮಾಲಯ ನೋಡಿ ಬರತೇನಿ ಅಂದೇವರ?....ಅದೂ ಹೋಗಲಿ ನಾನೇ ನಿನ್ನ ಸಾಹಿತ್ಯ ಪ್ರಕಟ ಗೊಳಿಸಲಿಲ್ಲಾ ಅಂದರ ನಿನ್ನ ಹೆಸರು ಇಷ್ಟರಲ್ಲಿ ಹೀಗೆ ಕರ್ನಾಟಕದ ನಾಲ್ಕು ದಿಕ್ಕಿನಲ್ಲಿಯೂ ಮೊಳಗುತ್ತಿತ್ತೇನು?

**ಸಾಹಿತಿ:**—ಆ ಹೆಸರು ಮೊಳಗದಂತೆ ಮಾಡಲಿಕ್ಕೇ ಈ ಉಪಾಯ ಕೈಕೊಂಡೀನಿ. ನಡೆ, ನೀನಿನ್ನು ಹೊರಡು. ನನ್ನ ಸಾಹಿತ್ಯದ ಪ್ರಕಾಶಕ ನಾನು ಸತ್ತ ಮೇಲೆ ಹುಟ್ಟಿ ಬರಲಿ. ಈಗ ಮಾತ್ರ ಈ ಸೇಡು ತೀರಿಸದೆ ಬಿಡುವುದಿಲ್ಲ. (ಎಂದು ಮತ್ತೆ ಪಂಜನ್ನು ತೆಗೆದುಕೊಳ್ಳುವನು.)

**ಪ್ರಕಾಶ:**—ಬಿಡು, ಜಗತ್ತಿನಲ್ಲಿ ನೀನೊಬ್ಬನೇ ಸಾಹಿತ್ಯ ಬ್ರಹ್ಮನಲ್ಲ.... ಸ್ವತ: ನಾನೇ ಬ್ರಹ್ಮನಾಗತೀನಿ ಇನ್ನ.

**ಸಾಹಿತಿ:**—ಹೂಂ, ಎರಡನೆಯ ಬ್ರಹ್ಮರ ಹಸ್ತ ಲಿಖಿತ್ವನ್ನಿ ಕೈಯೊಳಗೇ ಇರುವಾಗ ನೀನೂ ಬ್ರಹ್ಮನಾಗುವುದೇನು ಆಶ್ಚರ್ಯ !

**ಪ್ರಕಾಶಕ:**— ಹಸ್ತಲಿಖಿತ ಯಾಕೆ, ವಿಧಿಲಿಖಿತವೇ ಇರುತ್ತದೆ ನನ್ನ ಕೈಯಲ್ಲಿ.

**ಸಾಹಿತಿ:**—ಯೆ ಯೇ ಸ್ವಲ್ಪ ಬಗಿಪಿಡಿಯೋ ನಾಲಗೀನ. ಜೀವಂತ ಇದ್ದಾಗಲೆ ಸಾಹಿತಿಯ ಶ್ರಾದ್ಧ ಮಾಡಬ್ಯಾಡ.

**ಪ್ರಕಾಶಕ:**—ಜೀವಂತ ಇದ್ದಾಗಲೆ ನಿನ್ನ ಶ್ರಾದ್ಧ ಮಾಡುವವ ನಾ ಅಲ್ಲಾ, ನಿನ್ನ ಸಾಹಿತ್ಯದ ಮಲ್ಲಿನಾಥ. ........ಕವಿಯ ಶ್ರಾದ್ಧ ಮಾಡುವವ ಅರ್ಥವರಿಯದ ಗಮಕಿ, ನಾಟಕಕಾರರನ ಶ್ರಾದ್ಧ ಮಾಡುವವ ನರಪ್ರೇತನಟ, ಉದ್ಧಾರಕನೆಂದರೆ ನಾನೇ, ತಿಳಿಯಿತಿಲ್ಲೊ. ಆದರೆ ಈಗಳೆ ಎಲ್ಲಾ ಹೊಗಳಿ ಬಿಟ್ಟರೆ ನಾಳೆ ನೀನು ಸತ್ತ ಮೇಲೆ ನಿನ್ನ ಕಂಡೋಲನ್ಸಿಗೆ ಸ್ವಲ್ಪಾ ಉಳಿಯಲಿಕ್ಕಿಲ್ಲಾ ಅಂತ ಈಗ ತೆಗಳತೇನಿ.

**ಸಾಹಿತಿ:**— ನಾನು ಸತ್ತಮ್ಯಾಲೆ ನನ್ನ ಹೊಗಳಿದರೇನು ತೆಗಳಿದರೇನು ? ಆದರೆ ನಾನು ಜೀವಂತ ಇದ್ದಾಗಲೆ ನನ್ನ ಹೊಟ್ಟಿಗೆ ಕಾಲು ಕೊಟ್ಟು ನಿನ್ನ ಕಾಲ ನಾಟ್ಯವನ್ನು ನನ್ನ ಹೊಟ್ಟೆಯ ರಂಗಭೂಮಿಯ ಮೇಲೆ—

**ಪ್ರಕಾಶಕ:**—ಒಳ್ಳೇ ಕಲ್ಪನೆ ! ನೀನು ಸಾಹಿತ್ಯ ರುದ್ರ ! ನಾನು ಕಾಲ ನಟ ! ಅಡ್ಡಿಯಿಲ್ಲ—ಇನ್ನು ನಿಮ್ಮಂತಹ ಸಾಹಿತಿಗಳ ಮರ್ಜಿ ಹಿಡಿಯೋ ಕಾರಣವೇ ಇಲ್ಲ. ಈ ಪ್ರಕಾಶನೇ ಇನ್ನು ಸಾಹಿತಿಯಾಗುವನು.

**ಸಾಹಿತಿ:**—(ಸಂತಾಪವೇರಿ) ನಿರ್ಲಜ್ಜಾ ! ಸಾಹಿತಿಯ ಬಾಯ್ದಂಬುಲಕ್ಕೆ ಕೈಚಾಚಿ ಅವನ ಎಂಜಲ ತಿಂದು ಬದುಕಬೇಕೆನ್ನುವ ನಿನಗೆ ಧಿಕ್ಕಾರವಿರಲಿ.

**ಪ್ರಕಾಶಕ:**—ನೀನು ಹೀಗೇ ನಿನ್ನ ಸಾಹಿತ್ಯದ ಶರಪಂಜರದ ಮೇಲೆ ಒರಗಿಕೊ, ನಿನ್ನಿ ಮಣಿದ ಹೊಟ್ಟೆ ಗಗನಕ್ಕೆ ನೆಗೆದು ಕಾಮನಬಿಲ್ಲಾಗಲಿ ಆಯಿತು, ಇದೇ ನಿನ್ನ ನಾಟಕಾನ 'ಸಾಹಿತಿಯ ಶ್ರಾದ್ಧ' ಅಂತ ಹೆಸರಿಟ್ಟು ನಾನೇ ಬರೆದು ಛಾಪಿಸತೀನಿ ! (ಹೊರಡುವನು.)

(ಸಾಹಿತಿ ತನ್ನ ಸಾಹಿತ್ಯದ ರಾಶಿಗೆ ಪಂಜು ಕೊಟ್ಟು ಕೈಯಲ್ಲಿ ಡಮರು ತೆಗೆದುಕೊಂಡು ಐದೇ ಪದ ಹಾಡುತ್ತ ದುಂಡಗೆ ಕುಣಿಯುಹತ್ತುವನು.)

—ತೆರೆ

# ಹಿನ್ನಡೆದ ವೀರ



**ವೀರ:**---೨೮ ವರ್ಷದ ಯುವಕ.

**ಪ್ರಾಣೇಶ್ವರಿ:**---ಯುವಕನ ಸುಶಿಕ್ಷಿತ ಹೆಂಡತಿ.



(ಯುವಕನ ಮನೆ ಬಾಗಿಲು ಹಾಕಿದೆ ಯುವಕ, ಅದೇ ಯುದ್ಧ ಭೂಮಿ ಯಿಂದ, ಯೋಧನ ವೇಷದಲ್ಲಿಯೆ, ಮರಳಿ ಬರುವನು. ಕೊರಳೊಳಗೊಂದು ಮಾಲೆ, ಕೈಯಲ್ಲಿ ತುಪಾಕಿ, ಟೊಪ್ಪಿಗೆಗೆ, ಎದೆಗೆ 'V' ಎಂಬ ಗುರುತು.)

**ಯುವಕ:**— ('ಚಲ್ ಚಲ್ರೆ ನವಜವಾನ'—ಎಂದು ಸಿಳ್ಳುಹಾಕಿ ಹಾಡುತ್ತ ಪ್ರವೇಶಿಸುವನು...ಹುರುಪಿನ ಹುಮ್ಮಸದಲ್ಲಿ ''V' for Victory' ''V' for Victory' ಎಂದು ಕೂಗುತ್ತ ಬಾಗಿಲು ಧಡಧಡ ಬಡೆಯುವನು.. ಒಳಗಿ ಸಿಂದ ಏನೂ ಉತ್ತರವೇ ಬಾರದಿರಲು ಕ್ಷಣಕ್ಷಣಕ್ಕೆ ಮುಖದ ಮೇಲೆ ಸ್ವಲ್ಪ ಸ್ವಲ್ಪ ಆಶ್ಚರ್ಯ, ನಿರಾಶೆಯ ಕಳೆ ಮೂಡಿ ಮೂಡಿ ಮುಳುಗುವುದು )

ಪ್ರಿಯೆ, ಪ್ರಾಣೇಶ್ವರಿ (ಬಾಗಿಲು ಬಡಿದು) ತೆರೆ, ಬಾಗಿಲು ತೆರೆ, ನಿನ್ನ ಹೃದಯದ ಬಾಗಿಲು ತೆರೆ....ಪ್ರೇಮ ದೇವತೆಯ ಪೂಜೆಗಾಗಿ ಭಕ್ತನು ಬಂದಿರು ವನು, ಪ್ರೇಮಮಂದಿರದ ಬಾಗಿಲು ತೆರೆ.

('ಪ್ರೇಮಕಿ ಪ್ಯಾಸಿ ಬಸಿ ಬನವಾಸಿ' ಎಂದು ಗುಣುಗುಡುವನು.)

...(ಬಾಗಿಲ ತೆರೆಯದಿರಲು ಸಿಟ್ಟಿಗೆದ್ದು) ಯೇ—ಏನ ಯೇ—ಬಾಗಿಲಾ ತೆಗೆ ಅಂದೇ........(ಒಳಗಿನಿಂದ 'ಯಾರವರು ?' ಎಂದು ದನಿ ಕೇಳುವದು.) ಆಂ ?.... ಅಂದರ ? ನಾನು! ಯಶಸ್ವಿಯಾಗಿ ಹಿಂತಿರುಗಿದ ವೀರ !

(ಒಳಗಿನಿಂದ- 'ಅವರು ಊರಲ್ಲಿಲ್ಲ' ಎಂದು ಕೂಗು.)

**ವೀರ:**— ಆಂ! ಆವರು ಅಂದರ ಯಾರಪಾ ಮತ್ತ.... (ಮತ್ತೇನೊ ಯೋಚಿಸಿ ಹುಬ್ಬು ಹಾರಿಸುತ್ತ) ಇದೇನು ಪ್ರಾಣೇಶ್ವರಿ, ನಾನು ವೈರಿಗಳಿಗೆ ಬೆನ್ನು ತೋರಿಸಿ ಬಂದಿರುವೆನೆಂದು ಬಗೆದು-ರಜಪೂತ ರಮಣಿಯಂತೆ, ನಾನು ನಿನ್ನ ನಲ್ಲನಲ್ಲ ಎಂದು ಹೇಳುತ್ತಿರುವೆಯಾ?.......ನಾನು ಹಿಂತಿರುಗಿ ಬಂದೆನೆಂದು [illegible] ನೆಂದು ತಿಳಿದಿಯೇನು? ನಿನಗಾಗಿ ಒಬ್ಬ ಸವತಿಯನ್ನು ಗೆದ್ದು ತಂದ ವೀರ ನಾನು. ಏಳು, ಬಾಗಿಲು ತೆರೆ, ದಾರಿಕಾಯುತ್ತಿರುವ ನಿನ್ನ ಸವತಿಗೆ ಸ್ವಾಗತ ಮಾಡು.

(ಧಡಕ್ಕನೆ ಬಾಗಿಲು ತೆರೆಯುವುದು)

**ಹೆಂಡತಿ:**— (ಆಶ್ಚರ್ಯದಿಂದ ಗದ್ದದ ಮೇಲೆ ಬೊಟ್ಟಿಟ್ಟುಕೊಂಡು) ಅಪ್ಪಯ್ಯ!

**ವೀರ:**— 'ಪ್ರೇಮಕೆ ಮಂದಿರ [illegible] ಹೃದಯಕೆ ಮಂದಿರ ಖೋಲಿಯೊ' [illegible]!....... (ಎಂದು ಹಾಡುತ್ತ **ಹೆಂಡತಿಯ** ಮುಖ ನೋಡುತ್ತ ನಿಲ್ಲುವನು)

**ಹೆಂಡತಿ:**— ಮತ್ತೆ ಆಕೆ ಎಲ್ಲಿ?

**ವೀರ:**— 'ಪ್ರೀತಿಚಾ ಭಿಕಾರಿ ಆಲಾ ತುಝ್ಯಾ ದರ್ಶನಾಲಾ'

**ಹೆಂಡತಿ:**— ಸಾಕು ನಿಮ್ಮ ಹುಡುಗಾಟಿಕೆ. ಯಾವಾಗ ಬಂದಿರಿ, ಏನು ತಂದಿರಿ ಯಾವುದೂ ಮಾತೇ ಇಲ್ಲೇನು?

**ವೀರ:**— ಪ್ರಿಯೆ, ಹಸಿವೆ ಹಸಿವೆ! ಬಂಗಾರದ ಹಸಿವೆ ಅಲ್ಲ, ಉ[illegible]ದ ಹಸಿವು....ಈ ದಿನ ಭಕ್ತನನ್ನು ನಿನ್ನ ಹೃದಯದ ಜಗುಲಿಯ ಮೇಲೆ ಪ್ರತಿಷ್ಠಾಪಿಸು.

**ಹೆಂಡತಿ.**— ಅಲ್ಲಾ ಬರುವದು ಮೊದಲೇ ತಿಳಿಸಬಾರದೇನು?

**ವೀರ:**— ಅದೇ ತಪ್ಪಾಯಿತು. ಕಾಳಿದಾಸನ ಸಂಘವ, ಅಲ್ಲ ಯಕ್ಷ ಸಂಘವ ಒಂದು ಮೋಡದ ಜೊತೆಗೆ ಟಪಾಲು ಕಳಿಸಿದನಂತೆ!....ಬೇಕಾದ ಹಾಗೆ ವಾಯರಲೆಸ್ ಇದ್ದರೂ ನಿನಗೆ ಒಂದು ಸಂದೇಶ ತಿಳಿಸದೆ ಇದ್ದದ್ದು ತಪ್ಪಾಯಿತು. ಯಾಕಂದರೆ, ಸಂದೇಶದಕ್ಕಿಂತಲೂ ನಾನೇ ಮೊದಲು ಬರತೀನಿ ಅಂತ ಅನಿಸಿತು. ಯಾಕಂದರ, ಹೆಂಡತಿಗೆ ಹಾಕೋ 'ಲವ್‌ಲೆಟರು

'ಸೆನ್‌ಸಾರ' ಮಾಡಬಹುದು. ಆದರೆ ಹೆಂಡತಿಯು ಕಡೆಗೆ ಹೋಗೋ ಯುದ್ಧವೀರನನ್ನ ಯಾರು ಸೆನ್‌ಸಾರ ಮಾಡುವವರು ಅಂತ ಬಿಂಕದಿಂದ ಬಂದೆ ನೋಡು........ಅಲ್ಲದೆ ನಾವು ಹೊರಟ ಕೂಡಲೆ ನನ್ನ ಹೃದಯ ತಂತಿಯ ಟೆಲಿಗ್ರಾಂ ನಿನ್ನ ಅಂತರಂಗಕ್ಕ ಮುಟ್ಟಿ ನಿನ್ನ ಎಡಗಣ್ಣು ಹಾರಿರಬೇಕು ಅಂತಲೂ ವಿಶ್ವಾಸ ಇತ್ತು........ಆದರೆ ದುರ್ದೈವದಿಂದ ನನ್ನದೇ ಎಡಗಣ್ಣು ಹಾರಿತು ಗಾಡಿಯೊಳಗ. ಅನಕ್ಕೇ ಅಂದುಕೊಂಡೆ ಸಮತಿಮತ್ಸರ ಸುರುವಾಗು ತದ ಅಂತ.

**ಹೆಂಡತಿ:**— ಅದು ಎಂಥಾ ಮುದ್ದುಮ್ಮನ್ನಾರೆ ಕರೆದುಕೊಂಡು ಬಂದೀರಿ, ಕರೆಯಿರಿ ಒಳಗೆ. ಒಂದಿಷ್ಟು ಕಣ್ತುಂಬ ನೋಡಿ ಆದರೂ ನೋಡ ತೀನಿ....ಈ ಗಂಡಸರು ಮನೆಬಿಟ್ಟು ಹೋದರೇ ಈಪರಿ. ಊರು-ಕೇರಿಬಿಟ್ಟು ಪರದೇಶಕ್ಕೆ ಹೋದರಂತೂ ತೀರಿಯೆ ಹೋಯಿತು.

**ವೀರ:**— (ಅವಳ ಮುಖವನ್ನು ದಿಟ್ಟಿಸಿ ನೋಡುತ್ತ ನಿಂತು) ನೋಡು, ನೋಡು—ಇಲ್ಲೇ ಇದ್ದಾಳೆ ಅರಿಷಿಣ—ಕುಂಕುಮ ಹಚ್ಚಿ. (**ಕೊರಳೊಳಗಿನ ಹಾರ ತೂಗಾಡುವುದು.**) ನೋಡಿದೆಯೊ ಇಲ್ಲೋ ?

**ಹೆಂಡತಿ:**— ಏನು ನೋಡಲಿ, ನಿಮ್ಮ ಕಣ್ಣೊಳಗ ನನ್ನ ಫೋಟೊ.

**ವೀರ:**— ನನ್ನ ಕಣ್ಣೊಳಗ ನಿನ್ನ ಫೋಟೊ. ನನ್ನ ಹೃದಯದ ಕನ್ನಡಿಯೊಳಗ ನಿನ್ನ ಫೋಟೊ.

**ಹೆಂಡತಿ:**— ಆ ನಿಮ್ಮ ಮುದ್ದುಮ್ಮನ ಫೋಟೊ ಎಲ್ಲಿ ಅದೆ ತೋರಿಸಿರಿ. ಯುದ್ಧ ಆಡಿ ಬರೇ ಮುದ್ದುಮ್ಮನ್ನ ಗೆದ್ದುಕೊಂಡು ಬಂದಹಾಂಗ ಕಾಣತದ.

**ವೀರ:**— Exactly. ಮಿತ್ರರಾಷ್ಟ್ರಗಳೆಲ್ಲಾ ಕೂಡಿ **'ವಿಜಯ ಶ್ರೀ'** ಎಂಬ ಮುದ್ದುಮ್ಮನನ್ನ ಗೆದ್ದು ತಂದಿವೆ ಯುದ್ಧ ಭೂಮಿಯಿಂದ. ನಿನ್ನ ಸವತಿ ಅಂದರೆ ಇಕೊ, ನನ್ನ ಕೊರಳಿನಲ್ಲಿ ಉಯ್ಯಾಲೆ ಆಡುತ್ತಿದ್ದಾಳೆ ನೋಡು, ಶಿವನ ಜಡೆಯ ಮೇಲಿನ ಗಂಗೆಯಂತೆ. (**ಮಾಲೆ ತೆಗೆದು ಹೆಂಡತಿಯ ಕೊರಳಿಗೆ ಹಾಕುತ್ತ**) ತೊಗೊ, ನಿನ್ನ ಸವತಿಯನ್ನು ನಿನ್ನ ತಲೆಯ ಮೇಲೆ ಕೂಡಿಸಿಕೊ.

**ಹೆಂಡತಿ**—: ಸವತಿ ಅಂದರ ಇದೇನೆ ! ಪಿಶ್—

**ವೀರ:—** ಸವತಿ ಅಂಬೋ ಮಾತಿಗೇನೇ ಭೂತ ಬಂತೇನೋ ಮೈಯಾಗ ಅನಿಸತದ. ಸವತೀನ ಬಂಗರಂತೂ ತೀರಿಯೆ ಹೋಯಿತು........ ಪ್ರಿಯೆ, ಈ ಯುದ್ಧ ವೀರರನ್ನು ಇನ್ನಾದರೂ ಸ್ವಾಗತಮಾಡು.

**ಹೆಂಡತಿ:—** ಆಹಾ! ಯುದ್ಧ ಮಾಡಿ ರಕ್ತದ ಕಾಲಿವೆ ಹರಿಸಿ ಬಿಟ್ಟಿದ್ದೀರಿ ಅಲ್ಲವೆ?

**ವೀರ:—** ಊ ಹೂಂ! ಈಗ ಮಾತ್ರ ಕೇಳಬೇಡ....ಮಹಾತ್ಮ ಗಾಂಧಿಯ ಅಹಿಂಸಾವ್ರತವನ್ನು ಕೈಕೊಂಡ ಈ ವೀರ ಒಂದಾದರೂ ಹಿಂಸೆ ಮಾಡುವದು ಸಾಧ್ಯವಿದೆಯೆ?....ಪ್ರಿಯೆ, ನನ್ನ ಯುದ್ಧವೆಂದರೆ ದ್ವಿತೀಯ ರಂಗದಲ್ಲಿ—ನಿನ್ನ ವಿರಹಜ್ವರದೊಡನೆ. ಹೆಜ್ಜೆ ಹೆಜ್ಜೆಗೆ ಹೂಬಾಣಗಳನ್ನು ಬಿಡುತ್ತಿರುವ ಈ ಮನ್ಮಥನೊಡನೆ ನಾನು ಇಷ್ಟು ದಿವಸ ಮುಕ್ಕಣ್ಣನಾಗಿ ಹೋರಾಡಿ ಇಂದು ಯಶಸ್ವಿಯಾಗಿ ಮರಳಿದ್ದೇನೆ. ಪ್ರಾಣೇಶ್ವರಿ, ಮಿತ್ರ ರಾಷ್ಟ್ರಗಳೆಲ್ಲಾ ವಿಜಯದ ಭೇರಿಯನ್ನು ಹತ್ತೂ ದಿಕ್ಕಿನಲ್ಲಿ ಮೊಳಗಿಸುತ್ತಿರುವಾಗ ನಮಗೂ ಹಬ್ಬ ಬೇಡವೆ?

**ಹೆಂಡತಿ:—** ಯುದ್ಧ ಮುಗಿಯಿತು. ನಿಮ್ಮ ನೌಕರೀನೂ ಮುಗಿಯಿತು. ನಾಳೆ ಹೊಟ್ಟೆಗೇನು?

**ವೀರ:—** ಪ್ರಿಯೆ, ನಿನ್ನನ್ನು ನೋಡಿದಾಗಲೆ ನನ್ನ ಹೊಟ್ಟೆ ತುಂಬಿ ಬಿಟ್ಟಿದೆ. ರೇಶನ್ನಿನ ಕೂಳು ತಿನ್ನುವದಕ್ಕಿಂತ ನಿನ್ನ ಪ್ರೇಮಾಲಾಪವನ್ನು ಕೇಳುವುದೆ ಈ ಬೆಂದ ಹೃದಯಕ್ಕೆ ಹಿತವಾದ ಆಹಾರ.

**ಹೆಂಡತಿ:—** ನಿಮ್ಮ ಮಾತಾಯಿತು. ನಮ್ಮ ಗತಿಯೇನು?

**ವೀರ:—** ಅಂದರ? ನನ್ನ ಮಾರಿ ನೋಡಿದರ ನಿನಗ ಹೊಟ್ಟಿ ತುಂಬುವದಿಲ್ಲ ಅಂತಾಯಿತಲ್ಲ? ಈ ಯುದ್ಧ ವೀರನನ್ನು ನೋಡಿ ನಿನಗೆ ಹಸಿವೆ ಹಿಂಗುವದಿಲ್ಲವೆ?

**ಹೆಂಡತಿ:—** ನೀವೇನು ಯುದ್ಧ ಮಾಡುತೀರೊ, ನಾಟಕದೊಳಗಿನ ಪಾರ್ಟುಮಾಡಿದ ಹಾಂಗ. ನಾಟಕ ಮುಗಿದ ಕೂಡಲೆ ಮತ್ತೆ ಮೊದಲು ಇದ್ದ ಹಾಗೇ.

**ವೀರ**:— ಖಡ್ಗವನ್ನು ಎದುರಿಸಿದ ಈ ವೀರನು ಇನ್ನು ಮೇಲೆ ನಿನ್ನ ನಾಲಗೆಯನ್ನು ಸಹಜವಾಗಿ ಎದುರಿಸುವನು....ಆದರೂ ನಾನು ಯುದ್ಧಕ್ಕೆ ಹೋಗಿದ್ದೆ ಅಂತ ಯಾರು ಹೇಳಿದರು. ಮುಂಬೈ ವಿಶ್ವವಿದ್ಯಾಲಯದ ಗ್ರ್ಯಾಜುಯೇಟ ಆಗಿ ನನಗೆ ಹುಂಬರ ಹಾಗೆ ಯುದ್ಧ ಮಾಡು ಅಂದಿಯೇನು? ನಾನೇನು ಹದಿನಾರು ರೂಪಾಯಿಯ 'ರಿಕ್ರೂಟ' ಆಗಿ ಹೋಗಿದ್ದೆ ಅಂತ ಮಾಡಿಯೇನು?....'Pen is mighter than the sword'— ನೀನು ಇಂಗ್ಲೀಷ ಕಲಿಯೋ ಮುಂದ ಈ ಗಾದೆಯ ಮಾತು ಕಲಿತೀಯೊ ಇಲ್ಲೊ? ಅಂದರೆ ಯುದ್ಧ ಮಾಡೋ ರಿಕ್ರೂಟಗಿಂತ, ಅಕೌಂಟೆಂಟ ಕ್ಲಾರ್ಕರೇ ಹೆಚ್ಚಿನವರು ಅಂತ!....ಆದರೆ Combatant military clerk ಆಗಿದ್ದೆ ಅಂತ ಅವಶ್ಯವಾದ A. R. P feats ಎಲ್ಲಾ ಕಲಿತಿದ್ದೆ.... ಅಲ್ಲ, ನಾನು ಮಿಲಿಟರಿ ಅಕೌಂಟ್ಸನಲ್ಲಿ ಕ್ಲಾರ್ಕ ಆಗಿ ಹೋದದ್ದರ ಉದ್ದೇಶ ಆದರೂ ಏನೂ ಅಂತ ಮಾಡಿದ್ದಿ?........ಥರ್ಡಕ್ಲಾಸ ಗ್ರ್ಯಾಜುಯೇಟ್ ಆದ್ದರಿಂದ ಶಾಲೆಯ ಮಾಸ್ತರಗಿರಿಗೆ ಸುದ್ಧಾ ನಾವು, ನಾಲಾಯಕು. ಇಪ್ಪತ್ತೈದು ವರ್ಷ ಮಿಕ್ಕಿದ್ದರಿಂದ ರೆವೆನ್ಯೂ ಅಂತೂ ಬ್ಲಾಕು. ಮತ್ತೇನು ಮಾಡಬೇಕು—ಜಪಾನಕ್ಕೆ ಓಡಿಹೋಗಬೇಕು, ಇಲ್ಲಾ ಕಾಂಗ್ರೆಸ್ ಸೇರಬೇಕು, ಇಲ್ಲಾ ಮಿಲಿಟರಿ ಖಾತೆ! ಜಪಾನಕ್ಕೆ ಓಡಿಹೋಗೋ ಅಂಥಾ ದೇಶದ್ರೋಹಿ ಈ ವೀರನಲ್ಲ. ಕಾಂಗ್ರೆಸ್ ಸೇರಿದರೆ ಮಾಡೋ ಸರ್ವಿಸ್ ಎಲ್ಲಾ ಗೌರವ ಕಾರ್ಯದರ್ಶಿ ಅಂತ. ಆದರೆ ಮಹಾತ್ಮಾ ಗಾಂಧಿಯವರ ಅಹಿಂಸಾತತ್ವದಲ್ಲಿ ನಂಬಿಗೆ ಇದ್ದದ್ದರಿಂದ ಯುದ್ಧಕ್ಕೆ ರಿಕ್ರೂಟ ಆಗದೆ, ಲೆಕ್ಕಿಗನಾಗಿ ಮಿಲಿಟರಿ ಅಕೌಂಟ್ಸ ಸೇರಿದೆ. ಇದರಿಂದ ಹೊರನಾಡಿನ ಜೀವನ ಎಲ್ಲಾ ಪರಿಚಯ ಆಯಿತು. ಹೊರನಾಡಿನಲ್ಲಿ ನಮ್ಮ ಕನ್ನಡಮ್ಮನ ಪ್ರಚಾರ ಆಯಿತು........ ಅಲ್ಲದೆ ಇನ್ನೂ ಒಂದು ಮಹತ್ವದ ವಿಷಯ! ನನ್ನಲ್ಲಿ ಮೊದಲಿನಿಂತಲೂ ಸ್ವಲ್ಪ ಮಟ್ಟಿಗೆ ಕಾವ್ಯಪ್ರತಿಭಾ ಇತ್ತು ನಿನಗೆ ನೆನಪು ಅದೆಯೊ ಇಲ್ಲೊ?........ ಅದೇ ನೀನು ಮೊದಲುಗಿತ್ತಿಯಾಗಿ ಬಂದಿದ್ದಿ. ಹಸಿರು ಬಳೆ, ಹಸಿರು ಸೀರೆ, ಗುಲಾಬಿ ಗಲ್ಲ—

**ಹೆಂಡತಿ**:— ಥೂ ಸುಡ್ಲಿ, ಇದೇನು ಅಸಹ್ಯ!

**ವೀರ**:— ಇಲ್ಲ, ವರ್ಣನಾ ಮಾಡತಾಮಾಡತಾ ರೋಮಾಂಚ ಬಂತು.—ರೋಮೂನ್ಸ ಅಲ್ಲ ಮತ್ತೆ. ಅಂದರೆ, ನಾನು ಹೇಳೋ ಉದ್ದೇ:

ಅಂದರೆ ಇಷ್ಟೆ. ಕಾವ್ಯಪ್ರತಿಭೆ ಇತ್ತು. ಆದರೆ ಕಾವ್ಯ ಬರೆಯಲಿಕ್ಕೆ ಸಾಮ-
ಗ್ರೀನೆ ಇದ್ದಿಲ್ಲ. ಏಕೆಂದರೆ, ಮತ್ತೂ ವಿಧವೆಯ ಗೋಳು, ಬಡವರ ಗೋಳು,
ನಿರುದ್ಯೋಗಿಗಳ ಗೋಳು, ಕನ್ನಡಮ್ಮ ಗೋಳು, ಭಾರತ ಮಾತೆಯ
ಗೋಳು—ಅಂತೇ ಈ ಗೋಳು -ಗುಮ್ಮಟದೊಳಗಿಂದ ಪಾರಾಗಿ ಯುದ್ಧ
ಭೂಮಿಗೆ ಹೋದರ ಕಾವ್ಯ ಸಾಮಗ್ರಿಯ ಖಣಿಯೇ ಹತ್ತಬಹುದು ಅಂದು-
ಕೊಂಡೆ....ಇನ್ನು ತೊಗೊ ದಿನಾ ಕಾಗದದ ಮೇಲೆ ನನ್ನ ಕವಿತೆ ಮೊದಲು
ಮೂಡುತದೊ ಮುಗಿಲ ಮೇಲೆ ಸೂರ್ಯ ಮೊದಲು ಮೂಡುತಾನೊ........
ಪ್ರಾಣೇಶ್ವರಿ, ನಿನ್ನನ್ನು ಅಗಲಿ ಕಾಳಿದಾಸನ ಯಕ್ಷನ ಹಾಗೆ ಅರಣ್ಯರೋಧನ
ಮಾಡುತ್ತ ಚಾತಕದಂತೆ ನಿತ್ಯವೂ ನಿನ್ನ ಟಪಾಲಿನ ಮೇಘ ಮಾಲೆಗೆ ಬಾಯ್ತೆ-
ರೆದು ಕೂತಾಗ, ಮೇಘ ಮಾಲೆ ಬರುತ್ತಿರಲಿಲ್ಲ - ಸಿಡಿಲು ಮಾತ್ರ ಬಡೆಯು
ತ್ತಿತ್ತು....ಪ್ರೇಯಸಿ, ದಿನಾಲು ನಾನು ಹಗಲಿರುಳೂ–Office time ನಲ್ಲಿ
ಕೂಡ– ಹೆಣೆಯುತ್ತಿರುವ ಹೊಂಗನಸುಗಳಷ್ಟು ಸರಕಾರದವರು ಹಿಂದುಸ್ತಾ
ನದ ಬಗ್ಗೆ Post war plan ಹಾಕುತ್ತಿದ್ದರು, ನಾನು ನಮ್ಮ ಭಾವೀ
ದಾಂಪತ್ಯ ಜೀವನದ Post war plan ಹಾಕುತ್ತಿದ್ದೆ. ಯುದ್ಧೋತ್ತರ
ಪುನರ್ರಚನೆಯಲ್ಲಿ ನಮ್ಮ ಮನೆಯಲ್ಲಿಯೂ ಪ್ರಜಾಪ್ರಭುತ್ವ ಬೆಳೆಯಬೇಕು,
ಪ್ರಜಾಭಿವೃದ್ಧಿಗೆ ಕಂಟ್ರೋಲ್ ಹಾಕಬಾರದು ಎಂದು ಎಣಿಕೆ ಹಾಕುತ್ತಿದ್ದೆ.
ರಶಿಯಾ ದೇಶವು ಮಿತ್ರರಾಷ್ಟ್ರವಾದ್ದರಿಂದ ಅದರ ರಾಜಕೀಯ ತತ್ವಗಳನ್ನು
ಯುದ್ಧೋತ್ತರ ಪುನರ್ರಚನೆಯಲ್ಲಿ ನಮ್ಮ ಮನೆಯಲ್ಲಿ ತರಬೇಕೆಂದು ವಿಚಾರಿ-
ಸುತ್ತಿದ್ದೆ. ನಾವು ಸಮತಾವಾದಿಗಳಾದರೆ, ನಾನಿನ್ನು ನಿರುದ್ಯೋಗಿಯಾದರೆ
ನೀನು Supply Department ನಲ್ಲಿ ನೌಕರಿ ಮಾಡಲಿಕ್ಕೆ ಯಾವ
ಅಭ್ಯಂತರವೂ ಇಲ್ಲ. ಆಗ ನಾನು ಮನೆಯ Kitchen department
ವಹಿಸಿಕೊಳ್ಳಬಹುದು....ಎಲಾ! ಕಾವ್ಯದಿಂದ ಕಿಚನ್ ಡಿಪಾರ್ಟಮೆಂಟಿಗೆ
ಬಂದೆನಲ್ಲ.

**ಹೆಂಡತಿ:**— ಅಡಿಗೆ ಸಿದ್ಧವಾಗಿದೆ ಏಳ್ರಿ ಅಂದೆ.

**ವೀರ:**— ಹೌದು. ಅಂದರೆ ಅಲ್ಲ; ನಾನೀಗ ನನ್ನ ಕಾವ್ಯ ಸಾಮ-
ಗ್ರಿಯ ಬಗ್ಗೆ ಹೇಳುತ್ತಿದ್ದೆನಲ್ಲ? ಆ ಕಾವ್ಯ ಸಾಮಗ್ರಿಯಿಂದ ಇನ್ನ ತೆಗೆದುಕೊ
ನನ್ನದೇ War-time literature ಹೊರಡಿಸುತೀನಿ. ಸಾಹಿತ್ಯ ಸಾಮ್ರಾಜ

ದಲ್ಲಿ ಅಭೂತಪೂರ್ವಕ್ರಾಂತಿ!........ಅಂದ ಮೇಲೆ ಹೊಟ್ಟೆ ಪ್ರಶ್ನೆ ಯಾಕ? ಇಷ್ಟೊಂದು ಕಾವ್ಯಸೃಷ್ಟಿ ಆದ ಮೇಲೆ ಹೊಟ್ಟೆ ತಾನೇ ತುಂಬುವದಲ್ಲ. ಅಂದರೆ ಕಾವ್ಯ ಮಾರಾಟ ಆಗಿ ಅಲ್ಲ, ಕಾವ್ಯ ಓದಿ, ಬ್ರಹ್ಮಾನಂದ ಪಡೆದು.

**ಹೆಂಡತಿ:**— ಬ್ರಹ್ಮಾನಂದರಿಗೆ ಹಸಿವೆ ಆಗಿಲ್ಲೇನೊ.

**ವೀರ:**— ಆಹಾ! (ನೆನಸಿಕೊಂಡು) ಒಮ್ಮೆ ಒಂದು ರೆಕ್ಕೆಯ ಬಾಂಬು ಹೀಗೆ ಹಾರಿತು-ಶೆಲಿ ಕವಿಯು ಆ ಕ್ಷಣಕ್ಕಿದ್ದರೆ Skylark ಬಿಟ್ಟು ರೆಕ್ಕೆಯ ಬಾಂಬಿನ ಮೇಲೆ ಕಾವ್ಯ ಬರೆಯುತ್ತಿದ್ದ.

**ಹೆಂಡತಿ:**— ಹೌದು, ನೀವೇನು ಕೃತಕೃತ್ಯ ಮಾಡಿದಿರಿ?

**ವೀರ:**— ಪ್ರಿಯೆ, ನಿನ್ನ ನಾಲಗೆ ಸ್ವಲ್ಪ ಉದ್ದ ಹೋಯಿತು, ಇರಲಿ. ರಶಿಯಾದ ಸಮತಾವಾದ ಒಪ್ಪಿಕೊಂಡು ಸುಮ್ಮನೆ ಇರುತೀನಿ........ನನ್ನ ನೌಕರಿ ಮುಗಿಯಿತು ಅಂತ ನಾನು ನಿರುದ್ಯೋಗಿಯೆ ಆದೆ ಅಂತ ತಿಳಿದು ಬಿಟ್ಟೆಯೋನು? D. S. P. ಆಫೀಸಿನಲ್ಲಿ Vacancy ಬಿದ್ದರ ನನಗೇ ಮೊದಲನೇ Preference ಉ!........ಯಾವ ಜಾಗೆ ಅಂದಿ? Constable ಅಲ್ಲ ಮತ್ತೆ, Clerical ಉ!....'ಲೆಕ್ಕಿಗ ಮಿತಾಕ್ಷರರು ಬೆಳೆದು ಮೆರೆದಿಹ ನಾಡು!....ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು!'....

**ಹೆಂಡತಿ:**— ಇದೇ ನಿಮ್ಮ ಶೂರತನ ಹಾಗಾದರೆ.

**ವೀರ:**— ಹುಂ! ಶೂರತನಾ ಅಂತ. ನಿನ್ನ ಗಂಡ ಜೀವ ಉಳಿಸಿಕೊಂಡು ಪಾರಾಗಿ ಬಂದ. ನಿನ್ನ ಕುಂಕುಮ ಬಲ ಬಲವತ್ತರ ಇದೆ ಅಂತ ತಿಳಿ....ಒಂದು ದಿವಸ ನಮ್ಮ ಆಫೀಸಿನಿಂದ ಐಸು ದೂರದಲ್ಲಿಯೆ ಒಂದು ಜಪಾನೀ ಬಾಂಬು ಬಿತ್ತು. ಏನು ವರ್ಣಿಸಲಿ ಆಗಿನ ಅಭೂತಪೂರ್ವವಾದ ಕರುಣಾಜನಕ ದೃಶ್ಯ! ತಕ್ಷಣ ಅಡ್ಡ ಬಿದ್ದು ಪ್ರಾಣಾಯಾಮ ಸುರುವು ಮಾಡಿದೆ. A R. P. ಮಂತ್ರಗಳನ್ನೆಲ್ಲ ಧ್ಯಾನಮಾಡಿದೆ. ಕುತ್ತು ಪಾರಾದೆ. ಈಗ ಯಶಸ್ವಿಯಾಗಿ ಹಿಂತಿರುಗಿ ಬಂದು ನಿನ್ನ ಮುಂದೆ ನಿಂತೀನಿ....ಚಕ್ರವ್ಯೂಹವನ್ನು ಭೇದಿಸಲಿಕ್ಕೆ ಹೋದ ಅಭಿಮನ್ಯು ಪುನಃ ಉತ್ತರೆಯ ಮುಖಕಾಣಲಿಲ್ಲ. ಅದೇ ಅಭಿಮನ್ಯು 'V' for Victory ಹಚ್ಚಿಕೊಂಡು ವಿಜಯದ ಬಾವುಟವನ್ನು ಹಾರಾಡಿಸುತ್ತ ಹಿಂತಿರುಗಿದ್ದರೆ ಉತ್ತರೆಯ ಯಾವ ಒಂದು ಉತ್ಕಟ

ಹರ್ಷವಾಗುತ್ತಿತು ಊಹಿಸಬಲ್ಲೆಯಾ?....ಪ್ರೇಯಸಿ, ಯಶಸ್ವಿಯಾಗಿ ಹಿಂತಿರುಗುವುದೆಂದರೇನು ಕಡಿಮೆ ಪರಾಕ್ರಮವೆಂದು ತಿಳಿದೆಯಾ?.... ನಾನೇನು ಎರಡನೆಯ ಉತ್ತರ ಕುವರಾರ ಅಂತ ಮಾಡಿದೆಯೇನು?.... ಇವು ಹಿಂದಿನ ಕತೆಯ ಕ್ಷತ್ರಿಯ ಯುದ್ಧ ಅಲ್ಲ. ಇಂದಿನ ಕಮರ್ಸಿಯಲ್ ಯುದ್ಧ. Economic wars ಅಂತಾರ ಇವಕ್ಕೆ....ವೈರಿಗಳ ಸೆರೆಯಿಂದ ಪಾರಾಗಿ, ಜೀವ ಉಳಿಸಿಕೊಂಡು ಬಂದವರಿಗೆಲ್ಲಾ ಬ್ರಿಟಿಷ್ ಸರಕಾರದವರು ಅಭಿನಂದನಪೂರ್ವವಾದ ಮೆಚ್ಚು-ಕಾಣಿಕೆಗಳನ್ನು ಸಲ್ಲಿಸಿರುವರು. ನನಗೂ ಈ ಹಾರ ಹಾಕಿದವರು ಯಾರೆಂದು ತಿಳಿದಿರುವಿ?........ವಿಜಯಶ್ರೀಯೊಡನೆ ನನ್ನ ರಜಿಸ್ಟರ ವಿವಾಹ ಮಾಡಿದರೇನೊ ಎಂಬಂತೆ ಇಲ್ಲಿಯ ಕಲೆಕ್ಟರರೇ ಯುದ್ಧದಿಂದ ಯಶಸ್ವಿಯಾಗಿ ಮರಳಿಬಂದ ಯುವಕರಿಗೆಲ್ಲ ವಿಜಯ ಹಾರಗಳನ್ನರ್ಪಿಸಿದರು. ಪ್ರಿಯೆ, ಸಾವಿನ ದವಡೆಯಿಂದ ಪಾರಾಗಿ ಬರುವದೆಂದರೇನು ಸಣ್ಣಮಾತೆ?....ಇಷ್ಟೊಂದು ಗೌರವಾರ್ಹನಾಗಿ ನಾನು ಹೊರಗೆ ಬಂದು ಬಾಗಿಲು ಬಡೆದರೂ ಬೇಗನೆ ನಿನ್ನ ಪ್ರೇಮಮಂದಿರದ ಬಾಗಿಲವನ್ನು ತೆರೆಯಲಿಲ್ಲ.

**ಹೆಂಡತಿ:**— ಹೇಗೆ ತೆರೆಯಲಿ, ಮೈ ತೊಳೆಯುತ್ತಿದ್ದೆ.

**ವೀರ:**— ಹಾಗಾದರೆ ಪ್ರಿಯೆ, ಮೈ ತೊಳೆದು ನಿರ್ಮಲವಾದ ಅಂತಃಕರಣದಿಂದ ಈ ನಿನ್ನ ಶೃಂಗಾರ ದೇವತೆಯನ್ನು ಪ್ರೇಮಪಂಚಾಮೃತದಿಂದ ಆರಾಧಿಸಲಾರೆಯಾ? (ಹಾರ ತೆಗೆದು ಕೈಯಲ್ಲಿ ಹಿಡಿಯುವನು)

**ಹೆಂಡತಿ:**— ಆಯಿತು, ಯುದ್ಧಪರ್ವ ಮುಗಿಸಿರಿ. ಇನ್ನು ಶಾಂತಿಪರ್ವ ಅಂತ ಮನೆಹಿಡಿದು ಕೂಡಿರಿ.

**ವೀರ:**— ಅದಕ್ಕ ಮೊದಲು ಸ್ತ್ರೀಪರ್ವ ಅಂತ ನೀನು ನನ್ನ ಕೊರಳಲ್ಲಿ ಮಾಲೆ ಹಾಕು.

**ಹೆಂಡತಿ:**— ಅಹಿಂಸೆಯನ್ನು ಪಾಲಿಸಿ ಯಶಸ್ವಿಯಾಗಿ ಹಿಂತಿರುಗಿ ಬಂದ ಈ ವೀರ ಅಭಿಮನ್ಯುವಿಗೆ ಈ ಸಿರುತ್ತರೆಯು ಹೂಮಾಲೆ ಹಾಕುವಳು.

[ ತೆರೆ ]

# ಯು. ಟಿ. ಸಿ, ಪರಿಷತ್ತು ‡



**ಪ್ರಮುಖ ಪಾತ್ರಗಳು:**

೧. **ವೆಂಕಟೇಶಾಚಾರ್ಯ:**— ಮೈಸೂರಿನ 'ಮಹಾತ್ಮಾ ಗಾಂಧಿ ಕೇಫೆ' ಯ ಒಡೆಯರು—ಪರಿಷತ್ತಿನ ಅಧ್ಯಕ್ಷರು. ಸುಮಾರು ೫೦ ವಯಸ್ಸಿನ ಮುಂಡು ಮೋರೆಯ ಹುಬ್ಬುಗಲ್ಲದ ಜೊಂಡು ಮೀಸೆಯ ಆಜಾನುಭಾಹುಗಳು.

೨. **ಶ್ರೀನಿವಾಸಾಚಾರ್ಯ:**— ಕೊಲ್ಲಾಪುರದ ಪ್ರತಿನಿಧಿ 'ಆನಂದ ಭುವನ'ದ ಮಾಲಿಕರು.

೩. **ಹಯಗ್ರೀವಾಚಾರ್ಯ:** -- ಬಳ್ಳಾರಿಯ ಪ್ರತಿನಿಧಿ 'ಪ್ಯಾರಿಸ ಇಂದೂ ಓಟ್ಲ' ನ ಒಡೆಯರು.

೪. **ವೇದವ್ಯಾಸಾಚಾರ್ಯರು:**— ಹೈದರಾಬಾದ ಪ್ರತಿನಿಧಿ, 'ಶ್ರೀ ಕೃಷ್ಣ ರೆಸ್ಟೋರೆಂಟ' ದ ಒಡೆಯರು.

೫. **ಸುಬ್ರಹ್ಮಣ್ಯಾಚಾರ್ಯ:** — ಹುಬ್ಬಳ್ಳಿ 'ಮಾರುತಿ ವಿಲಾಸ' ಮಾಲಕರು.

೬. **ನರಹರಿಯಾಚಾರ್ಯ:**— ದಾವಣಗೇರೆಯ 'ಬೊಂಬಾಯಿ ಟೀ ಕ್ಲಬ್' ನ ಒಡೆಯರು —ಸ್ವಾಗತಾಧ್ಯಕ್ಷರು, ಸ್ಥಾಲಕಾಯರು.

೭. **ಕವಿ ಆಂಜನೇಯಾಚಾರ್ಯ:**— ಸ್ವಾಗತಾಧ್ಯಕ್ಷರ ಹೋಟೆಲ್ ಮ್ಯಾನೇಜರರು. ಗೌರವ ಕಾರ್ಯದರ್ಶಿಗಳು.

(ಇವಲ್ಲದೆ ಸೊಲ್ಲಾಪೂರ, ಬೆಳಗಿ, ಲೋಂಡಾ, ಹುಬ್ಬಳ್ಳಿ, ಹರಿಹರ ಮುಂತಾದ ರೇಲ್ವೇ ಸ್ಟೇಶನ್ ರೆಸ್ಟೊರೆಂಟಗಳ ಮಾಲಕರೂ ಉಳಿದ ಅನೇಕ ಸ್ಥಳಗಳಿಂದ ಬಂದ ಪ್ರತಿನಿಧಿಗಳು ಅಲಂಕಾರ ಪ್ರೇಕ್ಷಕಗಳಾಗಿ ಕೂಡಿದ್ದಾರೆ.)

[ಆರಂಭದಲ್ಲಿ ಇಬ್ಬರು ಮಾಣಿಗಳು ಬಂದು ಕರ್ನಾಟಕ ಗೀತೆಗಳನ್ನು ಹಾಡುವರು]

---

‡-ಸಿಮ್ಲಾ ಪರಿಷತ್ತು, ಯುನೋ ಪರಿಷತ್ತುಗಳು ನಡೆದ ಕಾಲಕ್ಕೇ ಉತ್ತರ ಕರ್ನಾಟಕ ದಕ್ಷಿಣ ಕರ್ನಾಟಕಗಳ ಸೀಮಾ ರೇಖೆಯಂತಿದ್ದ ಹರಿಹರದಲ್ಲಿ ಅಖಿಲ ಕರ್ನಾಟಕ ಉಡುಪಿಯ ಟೀ ಕ್ಲಬ್ಬುಗಳ ಪರಿಷತ್ತು ನಡೆಯಿತು ಅದರ ಒಂದು ಅಧಿವೇಶನದ ಚಿತ್ರ ಇದು.

ಉದಯವಾಗಲಿ ನಮ್ಮ ಉಡುಪಿಯ ಕೃಷ್ಣನ ನಾಡು
ಉಣಿಸುತಿನಿಸಿನ ಸಿಧಿಯು ಸೊಗಸು ದೋಸೆಯ ಗೂಡು ॥ ಪ ॥

ಬಾವನ್ನ ದುಸಿರ ಮೀರಿಸುವ ಮೈಸೂರ ಪಾಕು
ಆ ಜಲಧಿಯನೆ ಜಿಗಿದ ಇಡಲಿ ವಡೆಗಳ ನೋಂಕು
ಭಾಜಿಯಿಂ ಕಾವ್ಯರಸಗಳ ಮೀರಿಸಿದ ಪಾಕು
ಭೋಜನವೆ ಬೇಡೆನಿಸ ಭಾರಿ ಬೋಂಡವೆ ಬೇಕು ॥ ೧ ॥

ಲೆಕ್ಕಿಗರ ನೋಲಿಸುವ ಹಿರಿಯ ಉದ್ದರಿ ಬೀಡು
ಜಕ್ಕಣನ ಶಿಲ್ಪಿ ವಚ್ಚಿನ ಚಕ್ಕುಲಿಯ ಗೂಡು
ಮಧ್ವಮತವನು ಸಾರಿದವರಿಗಿದು ತವರೂರು
ಬಕ್ಕಣವ ಬರಿದೆನಿಸಿ ಸಿರಿಯುಂ ನಲಿಯುವ ತೇರು ॥ ೨ ॥

ಕಾವೇರಿಯಿಂದ ಗೋದಾವರಿಯ ಕಟ್ಟೋನಿದು
ಆಸೇತು ಹಿಮಾಚಲವ ವ್ಯಾಪಿಸಿದ ಕುಲನಾಡು
ಆವಗಂ ಕಬ್ಬಿಗರ ಸ್ಫೂರ್ತಿಸುವ ಚಪ ನೋಡು
ಕಾವ ಉಡುಪಿಯ ವೀರ ಶ್ರೀಕೃಷ್ಣನಾ ಬೀಡು ॥ ೩ ॥

**ಕವಿ ಆಂಜನೇಯಾಚಾರ್ಯರು:**-- (ಎಪ್ದ ಸಂತು) ಮಹನೀಯರುಗಳಲ್ಲಿ ಈ ಅಲ್ಪಮತಿಯೂ ಒಂದು ಪಿಷ್ಟಾಪಸ. ಏನೋ ಅಂತಲಿ ನಾನಾ ಅಂತಾ ನಾನೂ ಸಾಹಿತ್ಯಸೇವೆ ಮಾಡಬೇಕೂಂತಾ ನಾಟಿ ಕಟ್ಟಿ ನಿಂತಿದ್ದೇನೆ. ಉಡುಪಿಯ ಶ್ರೀಕೃಷ್ಣನ ಮೇಲೆ, ಬ್ರಹ್ಮನಂದರ ಮೇಲೆ ಅನೇಕ ಆರುತಿಯ ಹಾಡುಗಳನ್ನು ನಾನು ರಚಿಸಿದ್ದೇನೆ. ನನ್ನ ಕೀರ್ತನೆಗಳ ಸಂಗ್ರಹ ಎಲ್ಲಾ ಅಚ್ಚೂನೂ ಹಾಕಿಸಿದ್ದೇನೆ. ಕಿಮ್ಮತ್ತು, ಒಂದು ಮಸಾಲೆ ದೋಸೆಗಿಂತಾ ಕಡಿಮೆ --ಒಂದಾಣೆ ಮೂರ್ಕಾಸು ಮಾತ್ರ. ಕಳೆದ ಐದಾರು ವರ್ಷಗಳಲ್ಲಿ ಪ್ರತಿ ವರುಷ ಅಖಿಲ ಕರ್ನಾಟಕ ಸಾಹಿತ್ಯಸಮ್ಮೇಲನ ನಡೆಯುವಲ್ಲೆಲ್ಲಾ ನಾನು ಹೋಟ್ಲು ಇಡುತ್ತಾ ಬಂದು, ಇತ್ತೀಚೆಗೆ ಸಾಹಿತ್ಯಸೇವಾನೂ ಮಾಡಬೇಕು ಅಂತಾ ಸದ್ಬುದ್ಧಿ ತೋರ್ತಾ ಇದೆ. ಏನೋ ಶ್ರೀಹರಿಯ ಪ್ರೇರಣೆ, ನಿಮ್ಮೆಲ್ಲರ ಸುದೈವ, ಈ ಸಲ ನಾನೂ ಸಾಹಿತ್ಯ ಸಮ್ಮೇಲನದ ಕಾವ್ಯಗೋಷ್ಠಿಯಲ್ಲಿ ಒಂದು ಹಾಡ ಕವನಾ ಕಟ್ಟಿ, ಯಮಕನಿಂದ ಗಮಕಾ ಮಾಡಿ ತೋರಿಸಿದೆ.

ಆ ಬಗ್ಗೆ ನನಗೊಂದು ಮೆಡ್ಲ್ ಸಿಕ್ಕಿದೆ. (ಎದೆಗೆ ಹಚ್ಚಿಕೊಂಡದ್ದನ್ನು ತೋರಿಸುವನು.) ಇದೇ ಈಗ ಈ ಇಬ್ರು ಬಾಲಕರು ಏನು ತಮ್ಮ ಮುಂದೆ ತೊದಲ್ನುಡಿಯಲ್ಲಿ ಹೇಳಿ ತೋರಿಸಿದರಲ್ಲಾ ಅದೇ ಕವನಾ—ನಾನೇ ಕಟ್ಟಿದ್ದು ನೋಡ್ರಿ. ಜಗತ್ತಿನೊಳಗಿನ ಎಲ್ಲಾ ಬೆಳಕು ಆ ವಿಶ್ವಜ್ಯೋತಿಯ ಪ್ರತಿನಿಧಿಗಳು ಅನ್ನೋ ಹಾಂಗೇ ಗದುಗಿನ ಹಿರಿಯರೊಬ್ಬರು ಇದೇ ಧರ್ತಿಯ ನಾಡಕವನಾ ಕಟ್ಟಿದಾರೆ. ಅದಕ್ಕಾಗಿ ಅವರ ಪತಿಯಿಂದ ತಮ್ಮಲ್ಲಿ ಕ್ಷಮೆ ಕೋರುತ್ತೇನೆ........ ಕಂಠಾ ಸರಿಯಾಗಿಲ್ಲ. ಇಲ್ದಿದ್ರೆ ನಾನೇ ಹೇಳಿ ತೋರಿಸುತ್ತಿದ್ದೆ. ಇಷ್ಟು ಹೇಳಿ ನನ್ನ ಪೀಠನಾ ಅಲಂಕರಿಸುತ್ತೇನೆ.

**ಸ್ವಾಗತಾಧ್ಯಕ್ಷರು:**—(ಎದ್ದು ನಿಂತು ರೀತಿಯಿಂದ **ಸುತ್ತಲೂ ನೋಟ ಬೀರಿ, ಕೈಯೊಳಗಿನ ಭಾಷಣವನ್ನು ಓದುವರು**) ಮಾನ್ಯರೆ, ಮಹನೀಯರೆ, ಸಮಾನಶೀಲರೆ, ಕಾಸ್ಟ್ರೇಡುಗಳೆ,—ಈ ಹೊತ್ತಿನ ಅಖಿಲ ಕರ್ನಾಟಕ ಉಡುಪಿಯ ಕ್ಲಬ್ಬುಗಳ ಸಮ್ಮೇಳನಕ್ಕೆ ತಮ್ಮನ್ನು ಬರಮಾಡಿಕೊಳ್ಳಲಿಕ್ಕೆ ಈ ಹೃದಯ ಮುಂದ ಬರತಾ ಇದೆ. (**ಹೊಟ್ಟೆಯ ಮೇಲೆ ಕೈಯಾಡಿಸಿಕೊಳ್ಳುವರು**) ಹರಿಹರೇಶ್ವರನ ಸಾನ್ನಿಧ್ಯದಲ್ಲಿ ನಾವು ದ್ವೈತಾನುಯಾಯಿಗಳೆಲ್ಲಾ ದ್ವೈತ ದೇಹಿಗಳಾದರೂ ಅದ್ವೈತ ಮನಸ್ಸಿನಿಂದ ಬೆರೆತಿದ್ದೇವೆ. ಹರಿಹರ ಪ್ರಾಚೀನ ಕರ್ನಾಟಕದ ಬೀಡು, ತುಂಗಭದ್ರೆಯು ಮೈತೊಳೆವ ಭದ್ರವಾದ ನೆಲ........ ಇದು ಕಲಿಯುಗ, ಕ್ರಾಂತಿ-ಕೋಲಾಹಲಗಳ ಯುಗ. ಜಗತ್ತಿನ ರಂಗಭೂಮಿಯ ಮೇಲೆ ಬರಿ ಯುದ್ಧ ಪರಿಷತ್ತುಗಳು ನಡೆದಿವೆ. ಕೂಲಿಕಾರರಿಂದ ಕವಿಚಕ್ರವರ್ತಿಗಳ ವರಗೆ ಸಂಘ-ಸಂಸ್ಥೆಗಳು ದಿನದಿನಕ್ಕೆ ಶ್ವಾನಶ್ವೇತಛತ್ರಗಳಂತ ಉದಯವಾಗುತ್ತಲಿವೆ—ನಮ್ಮ ಕವಿಪುಂಗವ ಆಂಜನೇಯಾಚಾರ್ಯರು ಹೇಳಿದಂತೆ ನಾವೂ 'ಉದಯವಾಗಲಿ ನಮ್ಮ ಉಡುಪಿ ಕೃಷ್ಣನ ನಾಡು' ಎಂದು ಯಾಕ ಹಾಡಬಾರದು? ನಮ್ಮಷ್ಟು ಪ್ರಪಂಚ ಸುತ್ತಾಡಿ ದವರು ಯಾರೂ ಇಲ್ಲ. ನಮ್ಮ ಉಡುಪಿಯ ಹುಟ್ಟೂರು ಬಿಟ್ಟು ಆಸೇತು ಹಿಮಾಚಲದ ವರೆಗೆ ವ್ಯಾಪಿಸಿದ್ದೇವೆ ನೊನ್ನೆ ಮೊನ್ನೆ ಸೀಮಾ ಪರಿಷತ್ತು ನಡೆದಾಗ ಅಲ್ಲಿಯೂ ನಮ್ಮ ಬಂಧುಗಳು ಆಶ್ರಮ ತೆಗೆದಿದ್ದರು. ಆಂಧ್ರ-ಮಹಾರಾಷ್ಟ್ರ—ಅರುವ ನಾಡಿನಲ್ಲೆಲ್ಲಾ ನಮ್ಮ ಹೋಳಿಗೆಗಳು ತಲೆತಲೆಯಿಂದ ವಾಸಮಾಡಿ ಕನ್ನಡವನ್ನು ಕೂಡಾ ಮರೆತು, ತೆಲಗು, ಮರಾಠಿ, ಅರುವ ಮಾತಾಡುತ್ತಿ

ದ್ದಾರೆ. ಇದಕ್ಕೂ ಹೆಚ್ಚಿನ ಸಾಹಸಾ ಕನ್ನಡಿಗರಿಗೆ ಏನು ಬೇಕು ? ನಾವೂ ಒಕ್ಕಟ್ಟಾಗಬೇಕು, ನಾವೂ ಬಿಕ್ಕಟ್ಟಾಗಬೇಕು — ಪುಕ್ಕಟ್ಟಾಗಬಾರದು. " ಪಾಕಿಸ್ತಾನ " ಬರುವ ಮೊದಲು " ಉಡುಪಿಸ್ತಾನ " ವಾಗಬೇಕು ಎಂಬ ಉದ್ದೇಶದಿಂದ ಈ ಸಮ್ಮೇಳನವನ್ನು ಕರೆದಿದ್ದೇವೆ........... ಹ ! ಹ ! ಇನ್ನು ಮುಂದಿನ ಭಾಷಣ ಇನ್ನೂ ಅಚ್ಚಾಗಿ ಬಂದಿಲ್ಲಾ. ಇಲ್ಲಿ ಪ್ರಿಂಟಿಂಗ್ ಪ್ರೆಸ್ಸುಗಳದೊಂದು ತುಂಬಾ ತೊಂದ್ರೆ, ಸ್ವಾಮಿ, ತುಂಬಾ ತೊಂದ್ರೆ. ನಮಗೆ ಬಿಲ್ಲು-ವಾವತಿ-ಪುಸ್ತಕ ಅಚ್ಚು ಮಾಡಿಸಲಿಕ್ಕೆ ಕೂಡ ತುಂಬ ಪ್ರಯಾಸ. ಸಿಕ್ಕ ಸ್ವಲ್ಪ ಅವಧಿಯಲ್ಲಿ ಇಷ್ಟಾದರೂ ತುರ್ತಿಗೆ ಅಚ್ಚು ಮಾಡಿಕೊಟ್ಟ ಮಾರಾಯಾ, ಅವನಿಗೆ ಸಮ್ಮೇಲನದ ವತಿಯಿಂದ ಆಭಾರಮನ್ನಣೆ ಮಾಡುತ್ತೇನೆ........... ಇಷ್ಟು ಹೇಳಿ ಅಧ್ಯಕ್ಷರು ತಮ್ಮ ಭಾಷಣ ಆರಂಭ ಮಾಡಬೇಕು ಅಂತ ವಿಜ್ಞಾ-ಪನೆ ಮಾಡಿಕೊಳ್ಳುತ್ತೇನೆ........ಮೊದಲು ಅಧ್ಯಕ್ಷರ ಆಯ್ಕೆ, ಆಗಿಂದ ಭಾಷಣ.

**(ಎಲ್ಲ ಪ್ರತಿನಿಧಿಗಳೂ ತಂತಮ್ಮ ಹೊಟ್ಟೆಗಳ ಹೆಸರುಗೊಂಡು ಆ ವತಿಯಿಂದ ಅಧ್ಯಕ್ಷರ ಆಯ್ಕೆ ಮಾಡಿದ ಮೇಲೆ)**

**ಅಧ್ಯಕ್ಷರು:—** (ಗಂಭೀರವಾಗಿ ಎದ್ದು ನಿಂತು) ಕನ್ನಡಮ್ಮನ ಅಚ್ಚು-ಮೆಚ್ಚಿನ ಸಹೋದರ (ಸ್ವಾ. ಧ್ಯಕ್ಷರಿಗೆ) ಸಹೋದರರಷ್ಟೇ ತಾನೆ ? **(ತಂಬಾಕು ಬಾಯ್ತುಂಬ ಬರಲು ಹೋಗಿ ಉಗುಳಿ ಬಂದು)** ಏನೋ ಸುದೈವಕ್ಕೆ ನನ್ನ ಉಜ್ವಲ ಭಾಷಣವನ್ನು ಮೈಸೂರಿನಲ್ಲಿಯೇ ಬರೆಯಿಸಿ **(ನಾಲಿಗೆ ಕಚ್ಚಿಕೊಂಡು)** ಅಂದರೆ ನಕಲು ಮಾಡಿಸಿ ಅಚ್ಚು ಹಾಕಿಸಿಕೊಂಡು ಬಂದಿದ್ದೇನೆ........ನಿಮಗೆ ಅಚ್ಚಾದ ಭಾಷಣದ ಪ್ರತಿಗಳು ಸಿಕ್ಕುವದರಿಂದ ಸಾರಾಂಶವನ್ನಷ್ಟೇ ಹೇಳಿ-ಬಿಡುತ್ತೇನೆ........ನೀವೆಲ್ಲಾ ಎಷ್ಟೋ ಪ್ರತಿನಿಧಿಗಳು. ಕೊಲ್ಲಾಪುರಾ, ಸೊಲ್ಲಾಪುರಾ, ಹೈದರಾಬಾದು, ಬಳ್ಳಾರಿ, ಹುಬ್ಬಳ್ಳಿ ಮೊದಲಾದ ಕನ್ನಡ-ಮ್ಮನ ಗಡಿನಾಡಿನಿಂದ ಬಂದಿದ್ದೀರಿ........ಮೈಸೂರಿನ ಮಹಾತ್ಮಾ ಗಾಂಧಿ ಕೆಫೆ ಎಂದರೆ ಸತತವಾಗಿ ೨೫ ವರ್ಷಗಳ ವರೆಗೆ—ಅದರ ಬೆಳ್ಳಿಯ ಹಬ್ಬವನ್ನು ಮೊನ್ನೆ ಮೊನ್ನೆ ನೆರವೇರಿಸಿದ್ದೇವೆ, ವಿಜೃಂಭಣೆಯಿಂದಲೇ ಮತ್ತೆ — ಹಾಗೆ ನಮ್ಮ ಮಹಾತ್ಮಾ ಗಾಂಧಿ ಕೆಫೆ ಸತತವಾಗಿ ನಮ್ಮ ಕನ್ನಡಮ್ಮನ ಸೇವೆ ಮಾಡುತ್ತ ಬಂದಿದೆ........ನಮ್ಮ ಕನ್ನಡಮ್ಮ, ಅಯ್ಯೋ ನಮ್ಮ ಕನ್ನಡಮ್ಮ ನಿಶ್ಚೇಷ್ಟಳಾಗಿ ಬಿದ್ದುಕೊಂಡಿದ್ದಾಳೆ, ಬಾಡಿದ ಕೊಡಬಳೆಯಂತೆ........ನಾಲ್ಕು

ಜನರು ಕೂಡಿ ಒಂದೇ ಪ್ಲೇಟು ಬಕ್ಕರಿಸಲಿಕ್ಕೆ ಕೂತರೆ ಹೇಗಾಗಬೇಕೋ ಹಾಗೆ ನಮ್ಮ ಕನ್ನಡಮ್ಮ ಹಂಚಿಹೋಗಿದ್ದಾಳೆ. ಚಟ್ನಿ ಒಂದೆಡೆ, ಪಲ್ಯಾ ಇನ್ನೊಂದೆಡೆಗೆ, ದೋಸೆ ನಾಲ್ಕು ಕಡೆಗೆ.......... (ಮುಷ್ಟಿಗೈ ಎತ್ತಿ) ಕರ್ನಾಟಕ ಏಕೀಕರಣವಾಗುವದೇ ಕನ್ನಡಮ್ಮನ ಹಣೆಯಲ್ಲಿ ಬರೆದಿದ್ದರೆ ಅದು ನಾವು ಓಟ್ಲೊಡೆಯರಿಂದಲೇ ಆಗಬೇಕು. ಕರ್ನಾಟಕದಲ್ಲಿ ಉಡುಪಿ-ಮಂಗಳೂರು ಓಟ್ಲನವರು ಬಂದು ಶ್ರಮವಹಿಸಿ ಯಾವ ಒಂದು ಹುರುಪಿನಿಂದ ಕೆಲಸ ಮಾಡುತ್ತಿದ್ದಾರೋ ಅದನು ಬೇರೆ ಯಾರೂ ಮಾಡುತ್ತಿಲ್ಲ ಅಂತ ಹೇಳಲು ನಿಮ್ಮೆಲ್ಲರ ವತಿಯಿಂದ ನನಗೆ ಬಹಳ ಅಭಿಮಾನ ಅಂಬೋದು ಅನಿಸುತ್ತದೆ....... .... ನಮ್ಮಷ್ಟು ಕಷ್ಟಜೀವಿಗಳು ಯಾರು? ಕರ್ನಾಟಕದಲ್ಲಿ ಔದ್ಯೋಗೀಕರಣವಾಗಬೇಕಾದರೆ ಕೇವಲ ನಮ್ಮ ಉದ್ಯೋಗವನ್ನೇ ಸ್ವೀಕರಿಸಬೇಕು. ಅಂದರೇನೇ ಬಂಡ್ವಾಳಿಲ್ಲದೆ ಕನ್ನಡಮ್ಮನ ಸೇವೆ ಮಾಡಲಿಕ್ಕೆ ಬರುತ್ತದೆ. ಬಂಡ್ವಾಳಿಲ್ಲದೆ ನಮ್ಮ ಉದ್ಯೋಗ ಅಂದ ಮೇಲೆ ಬಂಡವಾಳಶಾಹಿಗಳನ್ನು ಬಗ್ಗು ಬಡಿಯೋ ಸೇವೆಯೂ ನಮ್ಮಿಂದ ಆಗುತ್ತದೆ. ಇತ್ತೀಡೆಗೇನೊ ಸಾಹಿತಿಗಳು--ಹಾಗೆ ನಿತ್ಯ ಬರೋ ಖಾಯಂ ಉದ್ದರಿ ಗಿರಾಕಿಗಳಾದ ಕೆಲವು ಸಾಹಿತಿಗಳು ಮಾತಾಡುತ್ತಾ ಇರುತ್ತಾರೆ—ಶ್ರಮಜೀವಿಗಳ ಉದ್ಧಾರಕ್ಕಾಗಿ ಸಾಹಿತ್ಯ ಬರಿಯಬೇಕು ಅಂತಿದ್ದಾರಂತೆ! ಸಂತೋಷ. ಇದಕ್ಕಾಗಿ ನಾವು ಒಂದು ಅಭಿನಂದನಪರ ಗೊತ್ತುವಳಿಯನ್ನು ಸಾಹಿತ್ಯಪರಿಷತ್ತಿಗೆ ಕಳಿಸೋಣ ನಾವು ಕಷ್ಟಜೀವಿಗಳು ಅಂತಾ ಹೇಳಲಿಕ್ಕೆ ನನಗೆ ತುಂಬಾ ಹೆಮ್ಮೆ. ಯಾವ ಫ್ಯಾಕ್ಟ್ರಿಗಳು, ಯಾವ ಮಿಲ್ಸು, ಯಾವ ಸ್ಕೂಲ್ಸು ನಮ್ಮ ಹಾಗೆ ದುಡಿಮೆ ಮಾಡತಾವೆ? ನಿತ್ಯ ನಾವು ಎದ್ದೇ ಕೊಳಿಗಳನ್ನು ಎಬ್ಬಿಸುತ್ತೇವೆ. ಚುಮುಚುಮು ನಸುಕಿನಲ್ಲಿ ಬಂದು ಹೋಟೆಲ್ ಪ್ರವೇಶ ಮಾಡಿರಿ. ನೇರ ಅಡುಗೆ ಮನೆಗೇ ಹೋಗಿರಿ—ಒಬ್ಬ ದೋಸೆ ಹುಯ್ಯುತ್ತಾನೆ, ಇನ್ನೊಬ್ಬ ನಾಳಿನ ಹಿಟ್ಟು ರುಬ್ಬುತಾನೆ, ಮತ್ತೊಬ್ಬ ಉಂಡಿ ಕಟ್ಟುತಾನೆ........ಇಷ್ಟೊಂದು ತಿಂಡಿತೀರ್ಥಗಳನ್ನು ಸಿದ್ಧಪಡಿಸಿದರೂ ಕರ್ಮ ಮಾಡಿಯೂ ಅನಾಸಕ್ತಿಯನ್ನು ವಹಿಸುವ ಯೋಗಿಯಂತೆ ಒಂದನ್ನೂ ರುಚಿ ನೋಡದೆ ಇರುವರು. ಚಿಕ್ಕ ಚಿಕ್ಕ ಬಾಲಕ ಮಾಣಿಗಳು ಕಪ್ಪುಬಸಿಗಳ ಕಿಂಕಿಣಿ ನಾದದೊಡನೆ ತನ್ನ ಬಕೆಟ್ ಕೈಯಲ್ಲಿ ತೆಗೆದುಕೊಂಡು ಸ್ಯಾನಿಟರಿ ಇನ್ಸಪೆಕ್ಟರನಾಗಿ ನಿಂತಿರುತ್ತಾನೆ........ಪುಟ್ಟ ಪುಟ್ಟ ಎಳೆಯ ಮಕ್ಕಳು ಶಾಲೆಗೆ

ಹೋಗೋದಿಲ್ಲ – ನಮ್ಮಲ್ಲಿ ಬರುತ್ತವೆ; ನಮ್ಮ ಕರ್ನಾಟಕ ವಿಶ್ವವಿದ್ಯಾನಿ-ಲಯ !........ಇದೇ ಅಂಗಡಿಯಲ್ಲಿ ಮಾಣಿಯಾಗಿದ್ದವರು ಈಗ ಕುಬೇರರಾಗಿ ನಮ್ಮೆದುರಿಗೇ ದೊಡ್ಡ ದೊಡ್ಡ ಅಂಗಡಿಗಳನ್ನು ತೆಗೆದು ನಮ್ಮ ಜೊತೆಗೇ ಕಾಂಪಿಟಿಷನ್ ಮಾಡುತ್ತಿದ್ದಾರೆ. ಅವರು ಹೀಗೆ ಕೃತಘ್ನರಾಗಬಾರದು. ಆ ಮಾತು ಬೇರೆ. ನಾನು ಹೇಳೋ ತಾತ್ಪರ್ಯ ಅಂದರೆ ಮನುಷ್ಯ ಸ್ವಾತಂತ್ರ ನಾಗಿ ಬದುಕು ಮಾಡಬೇಕು. ಅಂದರೆ ಅದು ನಮ್ಮಲ್ಲೇ ವಿನಾ ಇನ್ನೆಲ್ಲಿಯೂ ಇಲ್ಲ........ಒಂದು ಹೋಟ್ಲು ಅಂದರೆ ಒಂದು ದೊಡ್ಡ ಕುಟುಂಬಾ ಇದ್ದ ಹಾಗೆ. ಹಾಗೆ ಇಡೀ ಕರ್ನಾಟಕವೇ ಒಂದು ಹೋಟ್ಲು ಅಂತ ಆದಾಗ, ಆ ಭಾವನೆ ನಮ್ಮಲ್ಲಿ ಬೇರೂರಿದಾಗ ಮಾತ್ರ ಕನ್ನಡಕುಲ ಒಂದು ಅಂತ ಅನ್ನೋ-ದಕ್ಕೆ ನಮಗೂ ಹೆಮ್ಮೆ ಬರುತ್ತದೆ........ಹೀಗೆ ಮಾರ್ಕ್ಸು, ಸೀಪ್ಸಿರ್ ಮೊದಲಾದ ವರ ತತ್ವಗಳನ್ನೆಲ್ಲಾ ಅಳವಡಿಸಿಕೊಂಡು—ಅಳವಡಿಸಿಕೊಂಡ್ರೂ ಮಧ್ವಾ-ಚಾರ್ಯ, ಶಂಕರಾಚಾರ್ಯರ ಮತಗಳನ್ನು ಬಿಡದೆ—ಸಮತಾವಾದ, ಸೋಶಿಯಾಲಿಝುಂ,—ಕಮ್ಯುನಿಜಂ........(ಮರೆತು ಪುಸ್ತಕ ತೆಗೆಯಲು ಹೋಗಿ ಮತ್ತೆ ಬಿಟ್ಟು) ಫ್ಯಾಶಿಝುಂ—ಹೀಗೇನೋ ಎಲ್ಲಾ ಇಸುಮುಗಳು ಅಂತಾರಲ್ಲಾ ಅವನ್ನೆಲ್ಲಾ ಅಳವಡಿಸಿಕೊಂಡು ಕ್ರಾಂತಿಸಂಕ್ರಾಂತ್ರಿಗೆ ಕೈಚಾಚಿ ನಿಂತ ಸಮಾಜಾ ಅಂದರೆ ಉಡುಪಿಯ ಸಂಘಗಳು ಅಂತಾ ಹೇಳಿ........ಯುದ್ಧೋ-ತ್ತರ ಪುನರ್ರಚನೆಯಲ್ಲಿ ಆಗಬೇಕಾದ ಸುಧಾರಣೆಗಳನ್ನೆಲ್ಲಾ ಕುರಿತು ನಾವು ಮೊದಲು ವಿಚಾರವಿನಿಮಯ ಮಾಡಿ ಗೊತ್ತುವಳಿಗಳನ್ನು ತಯಾರಿಸಿ ಮುಂದಿನ ಕೆಲಸಕ್ಕೆ ತೊಡಗೋಣಾ ಅಂತ ಸೂಚಿಸುತ್ತೇನೆ........(ಸ್ವಾ. ಧ್ಯಕ್ಷರಿಗೆ) ಥ್ಯಾಂಕ್ಸು ಅಂತಾ ಒಟ್ಟು ಕೊನೆಗೇ ಹೇಳಿ ಬಿಡುತ್ತೇನೆ? ಆಗಬಹುದಲ್ಲವೆ? (ಅವರು 'ಆಗಬಹುದು' ಎಂದು ಗೋಣು ಹಾಕುವರು. ಅಧ್ಯಕ್ಷರು ಕೂತುಕೊಳ್ಳುವರು)

**ಶ್ರೀನಿವಾಸಾಚಾರ್ಯ**:—ಪರಪ್ರಾಂತಗಳಲ್ಲಿ ನೆಲೆಸಿರುವ ನಮ್ಮಂಥವರಿಗೆ ಪರಕೀಯರ ದಬ್ಬಾಳಿಕೆಗೆ ರಕ್ಷಾಕವಚವಾಗಿ ಒಂದು ಭದ್ರವಾದ ಗೊತ್ತು-ವಳಿಯನ್ನು ಪಾಸು ಮಾಡಬೇಕು. ಮರಾಠೀ ಜನರು ಕೊಲ್ಲಾಪುರದ ನಮ್ಮ ಹೋಟ್ಲಿಗೆ ಬಂದಾಗ ಸಾಮಾನುಗಳ ಹೆಸರನ್ನು ನಾವು ಅಚ್ಚಗನ್ನಡದಲ್ಲಿಯೇ ಹೇಳಬೇಕೋ ಇಲ್ಲವೇ ಪರಭಾಷೆಯಲ್ಲಿ ಹೇಳಬೇಕೊ?

**ಸುಬ್ರಮ್ಹಣ್ಯಾಚಾರ್ಯ**:— ಊಹೂಂ—ಅದಾಗದು, ಅದಾಗದು. ನಮ್ಮ ಹುಬ್ಬಳ್ಳಿಯ ಮಾರುತೀ ನಿಲಾಸಕ್ಕೆ ಅನೇಕ ಭಾಷೆಯ ಜನರು ಬರ-

ತಾರೆ. ಅವೇಗೆ ನಾವು ಕನ್ನಡದಲ್ಲೇ ಸಾಮಾನುಗಳ ಹೆಸರು ಹೇಳುತ್ತೇವೆ. ತಿಂಡಿಗಳ ರುಚಿಯೊಡನೆ ಕನ್ನಡದ ರುಚಿಯೂ ಹೊರನಾಡಿನವರಿಗೆ ತಿಳಿಯಲಿ. ಹೀಗೆ ಕನ್ನಡ ಪ್ರಚಾರ ನಾವು ಉಡುಪಿಯ ಜನರು ಮಾಡುವಷ್ಟು ಯಾವ ಸಂಘಸಂಸ್ಥೆಯವರೂ ಮಾಡಲಾರರು ಅಂತ ನನ್ನ ನಂಬಿಕೆ.

**ಶ್ರೀನಿವಾಸಾಚಾರ್ಯ:**— ಒಪ್ಪಿಗೆ ಅಂತಲೇ ನಾನೂ ಕೇಳಿದ್ದು, ದೋಸೆ ಅಂಬೋ ಮಧುರವಾದ ಸೊಗಸಾದ ಹೆಸರಿಗೆ ಬೆಳಗಾಂವಿಯಿಂದ ನಮ್ಮ ವರೆಗೂ ಅಪ್‌ಬೋಳಿ ಅಂತಾರೆ. ಇದು ಕನ್ನಡದಲ್ಲಿ ಅಪಾರ್ಥವಾಗುವದರಿಂದ ಈ ಹೆಸರನ್ನು ಯಾರೂ ಉಚ್ಚರಿಸಬಾರದು.

**ವೇದವ್ಯಾಸಾಚಾರ್ಯ:**— ನಮ್ಮ ಹೈದರಾಬಾದ ಹೋಟೆಲಿಗೆ ಬರುವ ಹಿಂದೂ ಕನ್ನಡ ಜನಗಳು ಕೂಡ ಉಪ್ಪಿಟ್ಟಿಗೆ ಉಪಮಾ ಅಂತಲೇ ಹೇಳುತ್ತಾರೆ. ಇದೇನೋ ಕಾವ್ಯಗಳಲ್ಲಿ ಒಂದು ಅಲಂಕಾರ ಅಂತ ನಾನು ಕೇಳಿದ್ದೇನೆ. ಈ ಶಬ್ದದ ಉತ್ಪತ್ತಿಯ ಬಗ್ಗೆ ಸಂಶೋಧಕರಿಂದ ವಿಚಾರ ಆಗಬೇಕು.

**ಆಂಜನೇಚಾರ್ಯ:**— ಆಹಾ! ಸೊಗಸಾದ ವಿಚಾರಾ! ಸೊಗಸಾದ ವಿಚಾರಾ! ನನ್ನ ತಿಳುವಳಿಕೆಯಲ್ಲಿ ಉಪಮಾ-ರೂಪಕ-ಉತ್ಪ್ರೇಕ್ಷೆಗಳಿಂದು ಹೆಸರಿಟ್ಟರೆ ನಮ್ಮ ಸಂಸ್ಕೃತಿ ಘನವಾಗಿ ಹೆಚ್ಚುವದು ಅಲ್ಲವೆ?

**ಸುಬ್ರಹ್ಮಣ್ಯಾಚಾರ್ಯ:**— ಇದ್ಯೋಡ್ರಿ ಆಂಜನೇಯಾಚಾರ್ಯರೆ, ಉಪಮಾ ಇದರ ಅಪಭ್ರಂಶ ಉಪ್ಪಿಟ್ಟು ಅಂದಿರಿ—ಮಹಿಮಾ ಇದರ ಅಪಭ್ರಂಶ ಮೆಂತೆಹಿಟ್ಟು ಅಂತಿರೋ?

**ವೇದವ್ಯಾಸಾಚಾರ್ಯ:**— ಅದು ಹೋಗ್ಲಿ. ನಮ್ಮದು ಇನ್ನೊಂದು ಸೂಚನೆ. ಹೊಟ್ಲಿನ ಹೆಸರು ಇಡೋವಾಗ ಮೈಸೂರಿನಲ್ಲಿದ್ದವರು 'ಮದ್ರಾಸ ರೆಸ್ಟೋರೆಂಟ' ಅನ್ನುವದು, ಬಳ್ಳಾರಿಯಲ್ಲಿದ್ದವರು 'ಪ್ಯಾರಿಸ್ ಓಟ್ಲು' ಅನ್ನುವದು ಉಚಿತವಲ್ಲ. ಆಯಾ ಸ್ಥಳವಾಚಕ ನಾಮಪದಗಳನ್ನೆ ಜೋಡಿಸಬೇಕು. ಮತ್ತು ಎಲ್ಲ ಸ್ಥಳಗಳಲ್ಲಿ ಸರಿಯಾದ ಕನ್ನಡ ಬೋರ್ಡು ಇರುವದಿಲ್ಲ. ಅದಕ್ಕೇ ಹುಬ್ಬಳ್ಳಿ-ಧಾರವಾಡದವರು ಹೊರಪ್ರಾಂತದವರಿಗೆ ಭಾಷಾದೋಷವಾಗದಂತೆ ಬೋರ್ಡು ಬರೆದು ಕಳಿಸಬೇಕು.

**ಆಂಜನೆಯಾಚಾರ್ಯ:**— ಯುದ್ಧೋತ್ತರ ಪುನರ್ರಚನೆಯಲ್ಲಿ ಯಶಸ್ವಿಯಾಗಿ ಮರಳಿ ಬಂದ ಯೋಧರಿಗೆ ಹೊಸ ಉಪಹಾರಗಳನ್ನು ಒದಗಿಸ

ಬೇಕೆಂಬ ಉದ್ದೇಶದಿಂದ ಉಡುಪಿಯ ಕೇಂದ್ರದಲ್ಲಿ ತಿಂಡಿ-ತಿನಿಸುಗಳ ಒಂದು ಸಂಶೋಧನ ಕಚೇರಿ ಏರ್ಪಡಿಸಬೇಕು.

**ಹೈಗ್ರೀವಾಚಾರ್ಯ:** — ಬಳ್ಳಾರಿಯಂಥಾ ಗಡಿನಾಡ ಸೀಮೆಯಲ್ಲಿ ನಮ್ಮ ಹೊಟ್ಲಿಗೆ ಬರೋ ಅನೇಕ ಸಂಕಟಗಳನ್ನು ತಮ್ಮ ಮುಂದೆ ಇಡಬೇಕು ಅಂತ ನನ್ನ ಮನಸ್ಸು. ನಮ್ಮ ಅಂಗಡಿಯ ಮಗ್ಗಲಿಗೆ ಒಂದು ಹಿಂದೂ ಮಿಲಿಟರಿ ಹೋಟ್ಲು ಉಂಟು. ಎಷ್ಟೋ ಜನ ನಮ್ಮ ಹೋಟ್ಲಿಗೆ ಬಂದು 'ಕಟ್‌ಲೆಟ್' ಕೊಡ್ರಿ, 'ಆಮ್ಲೆಟ್' ಕೊಡ್ರಿ, 'ಕರಿ' ಕೊಡ್ರಿ, 'ಬಿಳಿ' ಕೊಡ್ರಿ ಅಂತಾ ಕೇಳತಾರೆ. ಇಲ್ಲಾಂದರೆ ಈ ಗಟ್ಟದ ನಾಬಿಗಳು ಸುಮ್ಮನೆ ಹೋಗದೆ ಇಲ್ಲದ ತಂಟೇನೇ ಹೂಡುತ್ತಾರೆ. ಇನ್ನೊಂದು ಸಂಕಟ ಅಂದ್ರೆ ನಾವು ರೇಡಿಯೋದಲ್ಲಿ ಬೊಂಬ್ಬೈ ಸ್ಟೇಶನ್ ಸಂಗೀತ ಹಚ್ಚಿದರೆ, ಅವರು ದಿಲ್ಲೀ ಸ್ಟೇಶನ್ ಕವಾಲಿ ಸಂಗೀತ ಶುರುಮಾಡಿ ಬಿಡತಾರೆ. ಹೀಗಾಗಿ ಆಲಾಪ-ವಿಲಾಪ ಕೂಡಿ ಬೇತಾಳ ಕುಣಿದಂತೆ ಆಗಿಬಿಡುತ್ತದೆ. ಆದುದರಿಂದ ಈ ಜಿನ್ನಾ ಸಾಹೇಬರನ್ನ ನಮ್ಮ ಸಮ್ಮೇಳನದ ಪ್ರತಿನಿಧಿಗಳನ್ನಾಗಿ ಮಾಡಿಕೊಂಡು ಸೌಹಾರ್ದ ಬೆಳಿಸಿಕೊಬೇಕು, ಒಂದು; ಇಲ್ಲದಿದ್ದರೆ ಅವರನ್ನ ದೂರ ಅಟ್ಟ-ಬೇಕು..... ...ಅಥವಾ ನಾವೇ ಕಂಬಿ ಕಿತ್ತಬೇಕು.....ಈ ಎಲ್ಲ ಸಮಸ್ಯೆಗಳದೂ ಸೂಕ್ಷ್ಮವಿಚಾರಾ ಅನ್ನೋದು ನಡೀಬೇಕೂ ಅಂತ ನನ್ನ ಸೂಚನೆ.

**ಆಂಜನೇಯಾಚಾರ್ಯ:** — ಇದಕ್ಕಿಂತ ಒಂದು ಬೇರೆ ನಮೂನೆಯ ಸೂಚನೆ ನನ್ನದು. ಅದೊಂದು ದೊಡ್ಡ ಸಾಮಾಜಿಕ ಸಮಸ್ಯೆ ಅಂತಾ ನಿಮ್ಮ ಮುಂದೆ ಇಡತಾ ಇದ್ದೇನೆ. ಸಮಾಜದ ಅಭಿರುಚಿಗೆ ತಕ್ಕಂತೆ ಒಳ್ಳೊಳ್ಳೆಯ ಉಪ-ಹಾರ, ಫಲಹಾರ, ತಿಂಡಿ-ತೀರ್ಥಗಳನ್ನು ಪೂರೈಸಿ ಕವಿಗಳಿಗಿಂತ ಮಿಗಿಲಾದ ಬ್ರಹ್ಮಾನಂದವನ್ನು ಕೊಡುತ್ತ ಸಮಾಜದ ನಾಲಗೆಯನ್ನು ಸುಸಂಸ್ಕೃತಗೊಳಿ-ಸುತ್ತ ಬಂದವರು ನಾವು. ಆದರೆ ಅದೇ ಸಮಾಜದ ನಾಲಿಗೆ ಹೋಟ್ಲಿನ ಮಾಣಿ ಗಳು ಎಂದೊಡನೆ ಅಸಹೇಳನ ಮಾಡುತ್ತದೆ. ಸಮಾಜದ ಸಮತಾವಾದದಲ್ಲಿ ಈ ತಾರತಮ್ಯಭಾವನೆ ಸರಿಯಾದುದು ತಾರತಮ್ಯವನ್ನೊಪ್ಪಿಕೊಂಡ ಮಧ್ವಾ ಚಾರ್ಯರು ಕೂಡ ಉಡುಪಿಯವರನ್ನು ತಮ್ಮ ಶಿಷ್ಯವತ್ಸಲರನ್ನಾಗಿ ಮಾಡಿ ಕೊಂಡಿದ್ದಾರೆ ಇಂದಿನ ಸಮಾಜದ ಸಂಸ್ಕೃತಿಗೆ ಉಡುಪಿಯ ಹೊಟ್ಲೇ ಅಡಿ-ಗಲ್ಲು ಎಂದರೆ ಏನೂ ತಪ್ಪಿಲ್ಲ. ನಡೆ-ನುಡಿ, ಉಡುಪು-ತೊಡಪು ಇವುಗಳ

ಸಂತೆ ನಡೆಯುವುದು ಹೋಟ್ಲಿನಲ್ಲಿಯೇ. ಹೋಟ್ಲಿನ ತಿಂಡಿ-ತೀರ್ಥಗಳಿಲ್ಲದೆ ಯಾವ ಸಮ್ಮೇಲನದ ಯಂತ್ರವೂ ನಡೆಯುವಂತಿಲ್ಲ. ಇಂಗ್ಲಂಡಿನಲ್ಲ ಸಾಹಿತ್ಯ ನಿರ್ಮಾಣವಾದುದು ಹೋಟ್ಲಿನಲ್ಲಿಯೇ! — ಆದುದರಿಂದ ಹೋಟ್ಲಿನ ಮಾಲಿಕರಿಗೂ ಮಾಣಿಗಳಿಗೂ ಯಾವದೇ ಉಚ್ಚ ಸಮಾಜವಲ್ಲಿ ಅಗ್ರಪಟ್ಟ ದೊರೆಯಬೇಕೆಂದು ನನ್ನ ಸೂಚನೆ. ಇದಕ್ಕೆ ಸಮಾಜ ಒಪ್ಪಿಕೊಳ್ಳದಿದ್ದರೆ ಮುಂದಿನ ವರುಷ ಇದಕ್ಕೂ ಕಠಿಣವಾದ ಗೊತ್ತುವಳಿ ಮಾಡಾದೀತು ಎಂದು ಬೆದರಿಕೆ ಹಾಕಬೇಕು........ಮತ್ತು ಈ ತಾರತಮ್ಯ ದೃಷ್ಟಿಯಿಂದಲೇ ಎಷ್ಟೋ ಮಾಣಿಗಳು ಆಮರಣ ಅನಿವಾರ್ಯ ಬ್ರಮ್ಹಚಾರಿಗಳಾಗಿ ಉಳಿಯುವ ದುರ್ಘಟನೆಯ ಪ್ರಸಂಗ ಬರುತ್ತದೆ. ಇದೂ ಹೋಗಲಾಡಿಸಲ್ಪಡಬೇಕು.

**ಅಧ್ಯಕ್ಷರು:**— ಸರಿ, ಎಲ್ಲ ಸೂಚನೆಗಳೂ ಸಾಮೂಹಿಕವಾಗಿ ಸ್ವೀಕೃತವಾಗಿವೆ ಅಂತಾ ಇಟ್ಟುಕೊಳ್ಳೋಣ. ನನಗೆ ಮತ್ತೆ ಕೆಲಕೆಲವು ಹೊಸ ಸೂಚನೆಗಳನ್ನು ಮಾಡುವದಿದೆ. ಯುದ್ಧೋತ್ತರ ಪುನರ್ರಚನೆಯಲ್ಲಿ ನಮ್ಮ ಕೈಕೆಳಗಿನ ಮಾಣಿಗಳಿಗೂ ಕ್ಲೀನರ್‌ಗಳಿಗೂ ಯೋಗ್ಯವಾದ ಸಂಬಳ ಕೊಟ್ಟು ಅವರೂ ಕುಟುಂಬಿಗಳಾಗಿ ಮನೆತನ ಮಾಡಿಕೊಂಡಿರೋ ಹಾಗೆ ಅನುಕೂಲ ಮಾಡಿಕೊಡಬೇಕು ಅಂತಾ ಸೂಚಿಸುತ್ತೇನೆ.

**ಆಂಜನೇಯಾಚಾರ್ಯ:**— ಹಿಯರ್-ಹಿಯರ್ ! ಅಷ್ಟೇ ಅಲ್ಲ ಸ್ವಾಮಿ, ನಮ್ಮಂಥ ಮೇನೇಜರರಿಗೂ ಮಾಣಿಗಳಿಗೂ ಪ್ರಾವಿಡೆಂಟ್ ಫಂಡ್ ಮತ್ತು ಪೆನ್ಶನ್‌ಗಳ ಲಾಭ ದೊರೆಯಬೇಕು........ನಮಗೆ ಆರ್ಥಿಕ ಬಲ ಒದಗದಿದ್ದರೆ ನಮಗೆ ವಧುಗಳು ದೊರೆಯದೆ ನಾವೇ ಕೈಯಿಂದ ಅನ್ನ ಕುಚ್ಚಿಕೊಂಡು ತಬ್ಬಲಿಗಳಾಗಿರಬೇಕಾಗುತ್ತದೆ........ಅಥವಾ ನಿಮ್ಮಂಥಹ ಒಡೆಯರು ನಮ್ಮನ್ನು ಜೀವಮಾತ್ಮಗಳನ್ನಾಗಿ ಮಾಡಿಕೊಳ್ಳದಿದ್ದರೆ ಕನ್ನಡಮ್ಮನ ಗತಿಯೇನು ? ಕರ್ನಾಟಕದಲ್ಲಿ ಕನ್ನಡಿಗರ ಪ್ರಜಾಪ್ರಭುತ್ವ ಬೆಳೆಯಬೇಕಾದಲ್ಲಿ ಕನ್ನಡ ನಾಟಕ ಕಂಪನಿಗಳ ನಟರೂ ನಮ್ಮಂತಹ ಮಾಣಿಗಳೂ ಬೇಗನೆ ಸಂಸಾರ ನೌಕೆಯನ್ನೇರಬೇಕು.

**ಶ್ರೀನಿವಾಸಾಚಾರ್ಯ:**— ಸ್ವಾಮಿ, ಹೋಟ್ಲು ಇಟ್ಟವರು, ಅಡಿಗೆ ವ್ಯವಸಾಯ, ಖಾನಾವಳಿ ವ್ಯವಸಾಯ ವಗೈರೆ ಏನೂ ನಡೆಸಬಾರದು. ಅಡಿಗೆ ವ್ಯವಸಾಯ ಕೈಕೊಂಡೆವೋ, ನಮ್ಮ ಹೆಂಡ್ರು ಸಹಾ ನಮ್ಮನ್ನು ಒಲೇಮುಂದೇ ಕೂಡಿಸುತ್ತಾರೆ.

**ಅಧ್ಯಕ್ಷರು**: - ಸರಿ, ಇನ್ನೇನಾದರೂ ಸೂಚನೆಗಳಿವೆಯೇ?

**ಆಂಜನೇಯಾಚಾರ್ಯ**:— ಸೂಚನೆಗಳೇನು ಸ್ವಾಮೀ, ತಲೆ ತುರಿಸಿಕೊಂಡಹಾಗೆ, ಜಡೆಗಟ್ಟಿದ ತಲೆಯಿಂದ ಹೇನುಗಳು ಬರುವಹಾಗೆ ಸೂಚನೆಗಳು ಬಂದೇ ಬರುತ್ತವೆ.

**ಅಧ್ಯಕ್ಷರು**:—ಈ ಮೊದಲೇ ತಯಾರಿಸಿದ ಗೊತ್ತುವಳಿಗಳನ್ನು ಸ್ವಾಗತಾಧ್ಯಕ್ಷರು ಓದಬೇಕು. ಆಮೇಲೆ ಈಗಾದ ಸೂಚನೆಗಳನ್ನು ಸೇರ್ಪಡಿಸಿ ಕೊಳ್ಳಬೇಕು ......ಹೂಂ, ನರಹರಿ ಆಚಾರ್ರೇ ಓದಿರಿ.

**ನರಹರಿ ಆಚಾರ್ರು**:—ಈಮೊದಲೇ ಒಮ್ಮತದಿಂದ ಅಂಗೀಕೃತವಾದ ಗೊತ್ತುವಳಿಗಳು: —

೧ ರೇಲ್ವೆ ಸ್ಟಾಲಿನ ಹೋಟ್ಲುಗಳಲ್ಲಿಯೂ ಊರೊಳಗಿನ ಹೋಟ್ಲುಗಳಲ್ಲಿಯೂ ಒಂದೇ ಧಾರಣಿ ಇರಬೇಕು. ಸಾಮಾನುಗಳ ಧಾರಣಿ ನಿರ್ಣಯ ಉಡುಪಿಯ ಕೇಂದ್ರಪರಿಷತ್ತಿನಿಂದ ನಿಯಂತ್ರಣಶಾಖೆಯಿಂದ ನಿರ್ಣಯವಾಗತಕ್ಕದ್ದು.

**ಲೋಂಡಾದ ಪ್ರತಿನಿಧಿ**:—ಅದು ಹ್ಯಾಗೆ ಶಕ್ಯವಿದೆ ಸಾರ್? ರೇಲ್ವೇ ಕಂಪನಿಗಳಿಗೆ ನಾವು ತೆತ್ತುವ ವರವಾನವೆಷ್ಟು?

೨ ಸತತವೂ ಜನತಾ ಜನಾರ್ದನನ ಸೇವೆಗಾಗಿ ಟೊಂಕಕಟ್ಟಿಕೊಂಡು, ತೋಳೇರಿಸಿಕೊಂಡು ನಿಂತವರೆಂದರೆ ಉಡುಪಿಯ ಹೋಟ್ಲನವರು. ಕಾರಣ ಎಲ್ಲ ಹೋಟ್ಲುಗಳು ವಾರದಲ್ಲಿ ಏಳೂದಿನ, ದಿನದಲ್ಲಿ ೨೪ ತಾಸೂ ತೆರೆದಿಡಲ್ಪಡಬೇಕು. ಅದಕ್ಕಾಗಿ ಸರಕಾರದವರು ಸಕ್ರೀಕೋಠಾ ಹೆಚ್ಚಿಸುವಂತೆ ಪ್ರಾತಿನಿಧ್ಯ ಒಯ್ಯತಕ್ಕದ್ದು.

೩ ಈಚಿನ ಸಂಶೋಧನೆಗಳಿಂದ ಹಿಟ್ಟಿಗಿಂತ ತೌಡಿನಲ್ಲಿಯೇ ಹೆಚ್ಚಿಗೆ ವ್ಹಿಟ್ಯಾಮಿನ್ಸ ಇರುವದೆಂದು ಕಂಡುಬಂದಿರುವದರಿಂದ ಇನ್ನುಮೇಲಿಂದ ಇಡ್ಲಿ ದೋಸೆಗಳನ್ನೂ ತೌಡಿನಿಂದಲೆ ತಯಾರಿಸತಕ್ಕದ್ದು.

೪ ದುಡಿಗೆ ಸಿಂಗಲ್ ಚಾದಂಗಡಿಗಳನ್ನು ಯಾರೂ ಇಡಬಾರದು.

೫ ಎಲ್ಲ ಸಾಮಾನುಗಳನ್ನು ತುಪ್ಪದಲ್ಲಿಯೇ ಅಂದರೆ ಡಾಲ್ಡಾದಲ್ಲಿಯೇ ತಯಾರಿಸಬೇಕು. ಎಣ್ಣೆಯ ಸಾಮಾನುಗಳಿಗೆ ತುಪ್ಪದ ಹೆಸರು ಕೊಟ್ಟರೆ ತಪ್ಪುದಂಡನೆಗೆ ಗುರಿಯಾಗಬೇಕಾಗುವದು.

೬ ಪ್ರತಿವರುಷ ಸಾಹಿತ್ಯಸಮ್ಮೇಲನದ ಅಂಗವಾಗಿ ಹೋಟ್ಲುಗಳ ಪರಿಷತ್ತೂ ನಡೆಯಬೇಕು. ಸಾಹಿತ್ಯಕ್ಕೂ ಹೋಟ್ಲಿಗೂ ಇರುವ ನಿಕಟ ಸಂಬಂಧವನ್ನು ಈಗಲೇ ಹೇಳಿ ಆಗಿದೆ.

೭. ಬಾಲಕವರ್ಗದ ಮಾಣಿಗಳಿಗೆ ರಾತ್ರಿ ಶಾಲೆ ಹಾಕಿ ತಿಂಡಿ-ತಿನುಸುಗಳಲ್ಲಿ ತರಬೇತು ಮಾಡಬೇಕು. ಇದೇ ಉಡುಪೀ ಸಾಕ್ಷರತಾ ಪ್ರಚಾರ.

೮. ಪರಸ್ಪರ ಹೋಟ್ಲುಗಳಲ್ಲಿ ಯಾವುದೇ ಕಾಂಪಿಟಿಷನ್ ನಡೆಯತಕ್ಕದ್ದಲ್ಲ.—

೯. ಪ್ರತಿಯೊಂದು ಹೋಟ್ಲಿನವರು ಗ್ರಾಮೋಫೋನ್ ಬಿಟ್ಟು ಒಂದೊಂದು ರೇಡಿಯೊ ಇಡತಕ್ಕದ್ದು.

೧೦. ಉದ್ದರಿ ವ್ಯವಹಾರಗಳನ್ನು ಬಂದು ಇಡತಕ್ಕದ್ದು.

**ಉಳಿದ ಪ್ರತಿನಿಧಿಗಳು:**—ಒಕ್ಕೊರಲಿನಿಂದ ನಾವು ಹೇಳುತ್ತೇವೆ. ಈ ಠರಾವುಗಳಿಗೆ ನಮ್ಮ ಒಪ್ಪಿಗೆಯಿಗೆಯಿಲ್ಲ. (ಗೊಂದಲವೇಳುವದು)

**ಅಧ್ಯಕ್ಷರು:**— ಶಿಸ್ತು ! ಶಿಸ್ತು !! ಸಭೆಯಲ್ಲಿ ಶಿಸ್ತು ಪಾಲಿಸದಿದ್ದರೆ **ಕನ್ನಡಮ್ಮನ ಅಪಮಾನ.**

ಲೋಂಡಾ ತೆಲಗಿ ಪ್ರತಿನಿಧಿಗಳ:— ನಮ್ಮ ಒಪ್ಪಿಗೆಯಿಲ್ಲದೆ ನೀವು ಒಮ್ಮತ ಅಂತ ಹೇಗೆ ಅಂತೀರಿ ?

**ಅಧ್ಯಕ್ಷರು.**—ಎಲ್ಲ ಸಮ್ಮೇಲನಗಳಲ್ಲಿ ಠರಾವಳಿ ಆಗುವದೇ ಹೀಗೆ. ಮುಂದೆ ಸಾಗುವದೇ ಬೇರೆ! ......... ಕಾರಣ ಈಗ ಅವೆಲ್ಲ ಒಮ್ಮತದಿಂದ ಸ್ವೀಕೃತವಾಗಿದ್ದರಿಂದ ನಿಮ್ಮ ತಕರಾರು ನಡೆಯಲಾರದು. ನಡೆದರೂ ಅವು ಬಹುಮತದಿಂದಲಾದರೂ ಸ್ವೀಕೃತವಾಗಲೆ ಬೇಕಾಗುವದರಿಂದ ನೀವು ಮೌನ ತಾಳಲೇ ಬೇಕಾಗುವದು.

**ಹಯಗ್ರೀವಾಚಾರ್ಯ:**— ಆದರೆ ಈ ಗೊತ್ತುವಳಿಗಳು ಒಮ್ಮತದ ಯಾವಾಗ ಪಾಸಾಗಿವೆ?

**ಅಧ್ಯಕ್ಷರು:**—ಯುದ್ಧ ಪೂರ್ವದಲ್ಲಿಯೆ ಪಾಸಾಗಿವೆ ಸ್ವಾಮಿ. ವರುಷ ವರುಷವೂ ಮತ್ತೆಲ್ಲಿಯ ಹೊಸಾ ಠರಾವು ತರಬೇಕು. ಈ ಸಲ ಬಂದ ಸೂಚನೆಗಳನ್ನೂ ಇದರಲ್ಲಿ ಜೋಡಿಸಿದರೆ ಆಯಿತು.

**ನರಹರಿ ಆಚಾರ್ಯ:**— ಈಗಿನ ಅಧಿವೇಶನ ಈಗ ಬರಖಾಸ್ತ ಆಯಿತು. "ಒಂದೇ ಕರ್ನಾಟಕ" ಗೀತೆಗೆ ಎಲ್ಲರೂ ನಿಲ್ಲಬೇಕು; ಅಂದರೆ ಯಾರೂ ಹೋಗಬಾರದು, ಕುಳಿತುಕೊಳ್ಳಬೇಕು; ಅಂದರೆ ಹಾಡುವಾಗ ಎದ್ದು ನಿಲ್ಲಬೇಕು ಅಂತ.

**ಮಾಣಿಗಳು:**—( 'ವಂದೇ ಮಾತರಂ' ಹಾಡು ಹೇಳುವರು )

[ ತೆರೆ ]

---

# ಕ್ರಾಂತಿ ಪಟ

●

**ಪಾತ್ರಗಳು:**

**ಮನ್ಮಥರಾಯ**:— ಕನ್ನಡ ವಾಕ್ಪಟ ನಿರ್ಮಾತೃಗಳು— 'ಕರ್ನಾಟಕ ತಾಂಡವ ಚಿತ್ರಪಟ'ದ ದಿಗ್ದರ್ಶಕರು; ವಯಸ್ಸಿನಿಂದ ಇಳಿಯಾದರೂ ಹುರುಪಿನಿಂದ ಕಳೆಯೇರಿದ, ಅಷ್ಟಾವಕ್ರವೆನಿಸಿದರೂ ತಿದ್ದಿ ತೀಡಿದ ಮುಖವುಳ್ಳ ಸ್ಥೂಲಕಾಯದ ವಾಮನ ಮೂರ್ತಿ.

**ಪಿ. ಡಬ್ಲ್ಯು. ಯಜ್ಞೇಶ್ವರಂ**:— 'ಸ್ಟುಡಿಯೊ' ಮೆನೇಜರರು; ಕಾಯ ತೆಳ್ಳಗಿದ್ದರೂ ವೇಷ-ಪಾವುಡಗಳಿಂದ ಜಬರ್ಾಗಿ ಕಾಣುವ ೪೫ ವರುಷದ ತರುಣರು; ಪ್ರತಿಯೊಂದು ವಿಷಯದಲ್ಲೂ ದಿಗ್ದರ್ಶಕರಿಗೆ ನರ್ಮಸಚಿವರಾಗಿದ್ದಾರೆ.

**ವಾ. ಸಿ. ಕೈಲಾಸ**:— ಕಥಾಲೇಖಕರು– ಕೇವಲ ಕನ್ನಡಕ ಮಾತ್ರದಿಂದಲೇ ಪ್ರಪಂಚದ ಸೂಕ್ಷ್ಮಾವಲೋಕಿಗಳು ಎಂಬ ಮುಖಮುದ್ರೆಯುಳ್ಳವರು.

●

('ಕರ್ನಾಟಕ ತಾಂಡವ ಚಿತ್ರಪಟ'ದ ಸ್ಟುಡಿಯೋದಲ್ಲಿ ದಿಗ್ದರ್ಶಕರ ಕಲಾಪೂರ್ಣವಾದ ಕೋಠಡಿ ಸುತ್ತಲೂ ತಮ್ಮ ನಿರ್ಮಿತಿಗಳ ಚಿತ್ರಗಳು, ನಕ್ಷತ್ರಗಳ ತಸ್ವೀರುಗಳು. ಮಧ್ಯದಲ್ಲಿ ಎದುರಿಗೇ ದಿಗ್ದರ್ಶಕರು ಕೂತಿದ್ದಾರೆ, ಟೇಬಲ್ ಮೇಲೆ ಬಿದ್ದಿರುವ ಅನೇಕ ನಕ್ಷತ್ರಗಳ ಭಾವಚಿತ್ರಗಳನ್ನು ಮುಗುಚಿ ಹಾಕುತ್ತಿದ್ದರೂ ಮನಸ್ಸು ಇನ್ನಾವುದೋ ವಿಚಾರ ಪ್ರಳಯದಲ್ಲಿ ತಾಂಡವಾಡುತ್ತಿದೆಯೆಂದು ತನ್ನಿಂದತಾನೇ ವ್ಯಕ್ತವಾಗುತ್ತಿದೆ. ಮೆನೇಜರರು ಸ್ವಲ್ಪ ದೂರದಲ್ಲಿ ದಿಗ್ದರ್ಶಕರ ಎಡಗಡೆಗೆ ಮೂಲೆಯಲ್ಲಿ ಕೂತಿದ್ದಾರೆ.)

**ಮನ್ಮಥರಾಯ**:— ಮೆನೇಜರ್-(ಬೆಲ್ ಹೊಡೆಯುವನು,)

**ಯಜ್ಞೇಶ್ವರ**:— (ಪತ್ರಗಳನ್ನೆಲ್ಲ ತಿರುವಿ ಹಾಕುತ್ತಿದ್ದವನು ಚಟ್ಟನೆ ಎದ್ದು ಕಿವಿಯೊಳಗಿನ ಅತ್ತರಉಂಡೆಯಿಂದ ವಾಸನೆ ನೋಡುತ್ತ ಮೈಗೆಲ್ಲ ಸವರಿಕೊಳ್ಳುತ್ತ) ಹಾ! ಸಿಕ್ಕಿತು, ಸಿಕ್ಕಿತು!...........

**ಮನ್ಮಥರಾಯ**:— ಏನು ಸಿಕ್ಕಿತೊ ನಿಮ್ಮ ಉಸಿಲು. ಆ ಪ್ರೇಮ ನಟಿಯ ಕರಾರು ಪತ್ರಾ ನೋಡ್ರಿ ಅಂದ್ರೆ ನನ್ನ ಪರ್ಸನಲ್ ಫಾಯಿಲ್ ತೆಗೆತಿದ್ದೀರಿ.

**ಯಜ್ಞೇಶ್ವರ**:—ಅದ್ನೇ, ಅದ್ನೇ ನೋಡುತ್ತಿದ್ದೆ ಸರ್! (ಮತ್ತೆ ನೋಡಿ) ಹಾ—ಹಾ! ಇಲ್ಲಿ, ಇಲ್ಲಿದೆ ಸರ್! (ಎಂದು ಓದಲು ಹೋಗಿ) 'ಮೈ ಡಿಯರ ಪ್ರಾಣೇಶಾ........' ಅರ್! ಇದು ಕರಾರು ಪತ್ರ ಅಲ್ಲ ಸಾರ್, ನಿಮಗೆ ಬರೆದ ಲವ್‌ಲೆಟರ್! (ಕೊಡಹೋಗುವನು)

**ಮನ್ಮಥರಾಯ**:— ಅದನ್ನೇಕೆ ಆಫೀಸ ಫಾಯ್ಲಿಗೆ ಹಚ್ಚಿದ್ದೀರಿ? (ಕಸೆದುಕೊಳ್ಳುವನು)

**ಯಜ್ಞೇಶ್ವರ**:— ಪ್ರಸಂಗ ಬಿದ್ದಾಗ ತಮಗೇ ಉಪಯೋಗ ಬೀಳಲಿ ಅಂತ.

**ಮನ್ಮಥರಾಯ**:— (ಒಂದೆರಡು ಸಲ ಓದಿ) you wretch of a star! ಈ ಸ್ಟಾರುಗಳು ಅನ್ನೋವೆಲ್ಲಾ ಗುಂಗೀಹುಳ ಇದ್ದಹಾಗೆ ಹಣ-ಹಣ ಅಂತ ಹೆಣದ ಸುತ್ತಲಿನ ರಣಹದ್ದಿನಂತೆ ಹಾರಾಡುತ್ತವೆ. (ಕಥಾ ಲೇಖಕರಿಗೆ) ಈ ಪ್ರೇಮ ನಟಿ ನಮಗೆ ಹೀಗೆ ಚಕ್ರಾಕೊಟ್ಟು ಬಿಟ್ಟರೆ ಮುಂದೆ ನಮ್ಮ ಗತಿ ಯೇನು?.... ನಾವು ಕೋರ್ಟಿನ ಕಟ್ಟೆ ಹತ್ತಲೇಬೇಕು. ಐವತ್ತು ಸಾವಿರ ರೂಪಾಯಿ ನಗದುಹಣ ಅಗಾವು ಕೊಟ್ಟ ಮೇಲೂ ಇಂತಹ ಅಸಭ್ಯ ವರ್ತನೆ!

**ಯಜ್ಞೇಶ್ವರ**:— ಆದರೆ ಕೋರ್ಟಿನಲ್ಲೇ ಎಲ್ಲಾ ನಿರ್ಣಯ ಆಗೂದಾದರೆ ಚಿತ್ರಪಟ ಯಾವಾಗ ಹೊರಬೀಳಬೇಕು.

**ಕಥಾಲೇಖಕ**:— ಆಹಾಹಾ! ಎಂತಹ ಸನ್ನಿವೇಶಕ್ಕೆ ಕೈಬಿಟ್ಟು ಹೋದಳು. ನಾಯಕ ನಾಯಿಕೆಯರ ಪ್ರಥಮ ದರ್ಶನ!........ ನಾಯಿಕೆ ನಾಯಕನ ಸಲುವಾಗಿ ಯಾವ ಸ್ವಾರ್ಥತ್ಯಾಗ ಮಾಡಲಿಕ್ಕೂ ಸಿದ್ಧಳಾಗುತ್ತಾಳೆ!

**ಮನ್ಮಥರಾಯ:**— ಮೇಲೆ ಐವತ್ತು ಸಾವಿರ ನಗದು ಅಗಾವ ಕೊಟ್ಟರೂ ಈ ಹಾಡು........ ನಾನು ನಾಯಕನ ಪಾತ್ರವಹಿಸಬಾರದು ಅಂತ ಇವಳ ಹಟ. ಅಂದರೆ ಅದಕೇನು ಮಾಡೋದಕ್ಕಾಗುತ್ತೆ !....ಕೈಲಾಸ ವಾ. ಸಿ. ಗಳೇ, ನಾಯಕನ ಪಾತ್ರವಹಿಸಲು ನಾನು ಅಯೋಗ್ಯನೆ ?

**ಕೈಲಾಸ:**— ಇನ್ನೊಮ್ಮೆ ಹಾಗೆ ಅನ್ನಬೇಡಿ ಸ್ವಾಮಿ !.... ಅಯ್ಯೋ ನಾನು ತಮ್ಮನ್ನೆ ಕಣ್ಣೆದುರಿಗಿಟ್ಟುಕೊಂಡು ನಾಯಕನನ್ನೂ ಸೃಷ್ಟಿಸಿದ್ದೇನೆ.... ಮೊದಲು ತಿರುಪೆ ಬೇಡುವ ಬೀದಿಯ ತಿರುಕ. ಆದರೆ ಕೋಕಿಲ ಕಂಠ. ನೋಡುವುದಕ್ಕೆ ಅಷ್ಟಾವಕ್ರ, ಆದರೆ ಹೃದಯ ಪವಿತ್ರ ಮನ್ಮಥರಾವ್ ನಿಮ್ಮಂಥಹ ಹೃದಯ............

**ಯಜ್ಞೇಶ್ವರ:**— ಅಯ್ಯೋ ಇಂತಹ ಸನ್ನಿವೇಶದಲ್ಲಿ ಈ ಹಾಡು ಬೇಕಾಗಿತ್ತು. ಸಾರ್—' ಹಿಗ್ಗುವಿಯಾಕೊ ಈ ದೇಹಕ್ಕೆ ಕುಗ್ಗುವಿ ಯಾಕೋ ' (ಎಂದು ತೊಡೆ ಚಪ್ಪರಿಸುತ್ತ ಹೇಳುವನು)

**ಕೈಲಾಸ:**— ಓ ಕುಂಟದಾಸರೇ, ವೈಕುಂಟದಾಸರೇ, ಅಯ್ಯೋ ಅಯ್ಯೋ ಬಂದು ನೋಡಿ ಸ್ವಾಮಿ ತಮ್ಮ ಸಾಗ್ರಸಂಗೀತಾನ ! ಇಂತಹ ಚಾಲೀ ಹುಡುಕಿದರಿ ಅಂದರ ಸರಿ ನಮ್ಮ ಕರ್ನಾಟಕ ಚಿತ್ರಪಟ ಒಳ್ಳೆಯ ಉದ್ಧಾರ ವಾಗುತ್ತದೆ.

**ಮನ್ಮಥರಾಯ:**— ಅಯ್ಯೋ, ಯಾಕೆ ನಿಮ್ಮ ನಿಮ್ಮೊಳಗೆ ಬಡಿದಾಟಾ ಅಂತೀನಿ. ಕರ್ನಾಟಕ ಚಿತ್ರಪಟ ಅಂದೊಡನೆ ಹೀಗೇನೆ ! ಹಾಯ್, ಹಾಯ್ ಕರ್ನಾಟಕವೇ !

**ಯಜ್ಞೇಶ್ವರ:**— (ಗೋಣು ಹಾಕುತ್ತ) ಆಹಾ, ಆಹಾ ! ಈ ಸನ್ನಿವೇಶ ದಲ್ಲಿ ಒಂದು ಪಿಲೂರಾಗ ಹಾಕಿ ಬಿಟ್ಟರೆ ಏನು ಸೊಗಸು, ಏನು ಸೊಗಸು.

**ಕೈಲಾಸ:**— ಇದೇನು ಮೆನೇಜರರು ಅಂದರೆ ಕಲಾ ಸಂಗೀತಾ-ಎಲ್ಲ ಶಾಖೆಗಳ ಸೋಲ ಎಜಂಟರೇ ಆಗಿಬಿಟ್ಟಾರಲ್ಲಾ ಅಂತೀನಿ.

**ಮನ್ಮಥರಾಯ:**— ಕೈಲಾಸವಾಸಿಗಳೇ, ಆ ಶಟವಿಯ ಪಾತ್ರ ಅಷ್ಟಕ್ಕೇ ಮುಗಿಯುವ ಹಾಗೆ ಕಥೆಯನ್ನೇ ಪಲ್ಲಟಿಸಿಬಿಡಿರಿ............ಆ ದರಿದ್ರ ಚಂದ್ರಹಾಸ, ಸೇವಕನ ಪಾತ್ರ ಮಾಡುವುಕ್ಕೆ ಸಹ ಯೋಗ್ಯತೆ ಇಲ್ಲ. ಅವನೇ ಇವಳಿಗೆ ನಾಯಕನಾಗಬೇಕಂತೆ.

**ಯಜ್ಞೇಶ್ವರ**:— ನೋಡ್ರಿ, ನೋಡ್ರಿ ಸನ್ನಿವೇಶಾನ! (ಅರ್ಧ ತನ್ನಷ್ಟಕ್ಕೆ) ಓಹೊ ರೌದ್ರಾವತಾರ! ಒಂದು ಮಾಲಕಂಸ ತರಾಣಾ ಬೇಕು.......... 'ತನಧಿತ್ರೋಂ ತರನ ಧೀರೇನಾ। ತಾನತಿರೆನಾ ತಾನಾತಿರೆನಾ.......... ದರ್ ದರ್ ದರ್ ದರ್ ತನಧಿತ್ರೋಂ '........(ಏಕಾಂತವಾಗಿ) ಕತೆಗಾರರೇ ಹೇಗಿದೆ ಚಾಲಿ?

**ಕೈಲಾಸ**:— ಮಲೇರಿಯಾ ಫಿವರ್ಸ ಬರುವಾಗ ಚಳಿ ಬರೋ ಹಾಗೆ ಇದೆ. ಪರವಾ ಇಲ್ಲ.

**ಮನ್ಮಥರಾಯ**:—ಆ ನಿಮ್ಮ ಸಂಗೀತಾನ ಸ್ವಲ್ಪ ಬದಿಗಿರಿಸಿ, ನಿಮಗೇನಾದ್ರೂ ಯೋಚನೆ ಹೊಳೆಯುತ್ತದೊ ಹೇಗೆ ಹೇಳ್ರಿ ಸದ್ಯದ ಸಮಸ್ಯೆಯ ಮೇಲೆ.

**ಯಜ್ಞೇಶ್ವರ**:— ಅಂದರೆ ಇಷ್ಟೇ, ತಾವು ನಾಯಕನ ಪಾತ್ರ ಬಿಟ್ಟು ಬಿಡಬೇಕು. ಒಂದು (ಮನ್ಮಥರಾಯ ದುರುಗುಟ್ಟಿ ನೋಡುವನು.) ಅಂದರೆ ಪ್ರೇಮನಟಿಯನ್ನೆ ಬಿಟ್ಟುಬಿಡಬೇಕು ಅಂತಲ್ಲಾ. ಆ ಮೇಲೆ ನಾಯಕೆ, ಆ ದುರುಳ ಚಂದ್ರಹಾಸನೇ ನಾಯಕ ಆಗವೊಲ್ಲನೇಕೆ, ಅವನನ್ನು ಬಿಟ್ಟು ನಿಮ್ಮಲ್ಲಿ ಅನುರಕ್ತಳಾಗುತ್ತಾಳೆ ಅಂತ ತೋರಿಸಬೇಕು. ಇದರಲ್ಲಿ ಅವಳ ಉದ್ದೇಶ ನಿಮ್ಮ ಕಾರ್ಯ ಎರಡೂ ಸಫಲವಾಗುತ್ತವೆ.

**ಮನ್ಮಥರಾಯ**:— ಇದೆಲ್ಲಾ ಕಥಾಲೇಖಕರ ಕ್ಷೇತ್ರವಾಯಿತು. ನಿಮ್ಮ ಬಗ್ಗೆ ಹೇಳ್ರಿ. ಇನ್ನು ಮುಂದಿನ ಶೂಟಿಂಗಿಗೆ ಪ್ರೇಮನಟಿ ಇಲ್ಲಾ ಅಂತ ಇಟ್ಕೊಳ್ಳಿ, ಮುಂದೆ?

**ಯಜ್ಞೇಶ್ವರ**:— ಪ್ರೇಮನಟಿ ಇಲ್ಲಾ ಕಾಮನಟಿ! ಫ್ರಂಟ್‌ಪೋಜ ಬಿಟ್ಟು ಬರಿ ಬ್ಯಾಕ್‌ಪೋಜ ಅಷ್ಟೇ ತೆಗೀತಾ ಹೋದರಾಯಿತು.......... ಕ್ಲೋಜಪ್ ಅಂತೂ ಬಿಟ್ಟೇಬಿಡಬೇಕು. ಆ ಮೇಲೆ ಯಾವ ನಟಿ ಆದರೇನು? ಪ್ರೇಮ ನಟಿಯೂ ಅಷ್ಟೆ, ಲಿಪ್ಟನ್ ಟೀಯೂ ಅಷ್ಟೆ. (ತನ್ನ ಮಾತಿನ ಚಾಪಲ್ಯಕ್ಕೆ ತಾನೇ ನಗುವನು)

**ಮನ್ಮಥರಾಯ**:— ಅಥ್ವಾ, ಕೈಲಾಸವಾಸಿಗಳೇ, ಹೀಗೆ ಮಾಡ್ರಿ. ಹತ್ತು ವರುಷಗಳ ತರುವಾಯ ಅಂತ ಒಂದು ನೋಟೀಸ ಹಾಕಿಬಿಟ್ಟು,

ಒಂದಿಷ್ಟು ಕಥಾ ಸಾರಾಂಶ ತಿಳಿಸಿ, ಮೊದಲನೆಯ ನಾಯಕಿ ತೀರಿ ಹೋದಳೊ, ಓಡಿಹೋದಳೊ ಅಂತ ಏನಾದರೂ ಹಾಕಿರಿ. ಆ ಮೇಲೆ ದ್ವಿತಿಯ ವಿವಾಹ ದೊಂದಿಗೆ ಇಂಟರವಲ್ ಆದ ಮೇಲೆ ಆರಂಭವಾಗಲಿ.

**ಕೈಲಾಸ**:— ಆದರೆ ಇಷ್ಟೆಲ್ಲಾ ಬದಲಾವಣೆ ಅಂದರೆ ಕಥೆಯ ಗೋಣೇ ಮುರಿದ ಹಾಗೆ ಆಗುತ್ತದೆ.

**ಮನ್ಮಥರಾಯ**:— ಅಯ್ಯೋ ಸುಟ್ಟಿತು ನಿಮ್ಮ ಕತೆ ! ನಮಗೆ ಅನು ಕೂಲವಾಗದಂತಹ ನಿಮ್ಮ ಕಥೆ ತೆಗೆದುಕೊಂಡು ಏನು ಬೆಂಕೀ ಹಚ್ಚಬೇಕು ? ಸಾವಿರದಾ ಎರಡು ನೂರಾ ಐವತ್ತು ರೂಪಾಯಿಗಳ ಒಂದು ಕಥಾಲೇಖನ ಮಾತ್ರಕ್ಕೆ ತೆತ್ತುವುದು. ಅಂದರೇನು ಅಮವಾಸ್ಯೆ ದಾನಕ್ಕೇನು ?............ ಅದಕ್ಕೇ ಈ ಹಾಳು ಸಮಾಜಿಕ ನಾಟಕಗಳು ಬೇಡ ಅಂತ ಅನ್ನೋದು. ಜನಗಳಿಗೆ ಅವು ರುಚಿಸೋದೂ ಅಷ್ಟರೊಳಗೆ ಇದೆ. ಸುಮ್ಮನೆ 'ಅಹಿರಾವಣ ಮಹಿರಾವಣ ಕಾಳಗ' ವನ್ನೇ ಈಗ ತೆಗೆದುಕೊಂಡಿದ್ದರೆ ಲೇಸಿತ್ತು.

**ಯಜ್ಞೇಶ್ವರ**:— ಆದರೆ ಮಹಿರಾವಣ ಪಾತ್ರಕ್ಕೆ ಯೋಗ್ಯ ನಟ ದೊರೆಯಲಿಲ್ಲಾ ಅಂತ ಅದನ್ನು ಮುಂದೆ ಹಾಕಿತು.

**ಮನ್ಮಥರಾಯ**:- ಅಯ್ಯೋ ನಿಮ್ಮ ಮಂಕ ಬದ್ಧಿಗೆ ಅಂಗಾರಾ ಹೋಯ್ಯಲಿ. ಮಹಿರಾವಣ ಪಾತ್ರ ನಾನು ವಹಿಸುವೆ ಅಂತ ಹೇಳಿದ್ದಿಲ್ವೇ ?

**ಯಜ್ಞೇಶ್ವರ**:— ಆದ್ರೆ ತಾವು ಅಹಿರಾವಣರು ಅಂತ-

**ಮನ್ಮಥರಾಯ**: — ಹೌದೂ, ಅಹಿರಾವಣ ಸತ್ತ ಮೇಲೆ ಮಹಿರಾವಣ ಪಾರ್ಟು ಮಾಡಲಿಕ್ಕೆ ಏನೊ ಬಂದದ್ದು ? ಅಹಿರಾವಣ ಸತ್ತರೆ ನಿಮ್ಮ ಮಾಲ ಕರು ಸತ್ತರು ಅಂತ ತಿಳಿದು ಕೊಂಡ್ಯಾ ?

**ಯಜ್ಞೇಶ್ವರ**: — (ಅತ್ತರ ವಾಸನೆ ನೋಡುತ್ತ) ಛೀ. ಛೀ.

**ಕೈಲಾಸ**:— ಆದರೆ ಬಾಂಬೆ ಟಾಕೀಜ, ನ್ಯೂ ಥಿಯೇಟರ್ಸ, ನ್ಯೂ ಹಂಸ, ಪಾಂಚೋಲಿ ಮೊದಲಾದವರೆಲ್ಲಾ ಉತ್ತಮ ಸಾಮಾಜಿಕ ಚಿತ್ರಪಟ ಗಳನ್ನು ತೆಗೆಯುವಾಗ ಕನ್ನಡಿಗರಾದ ನಾವು............

**ಮನ್ಮಥರಾಯ**:— ಹೌದು, ಕನ್ನಡಿಗರಾದ ನಾವು ರಾವಣ ಕುಲದ ವರು, ಹನುಮಂತನ ಕುಲದವರು. ಯಾವ ನಾಟಕಕ್ಕೆ ರೊಕ್ಕ ಆಗುತ್ತದೆ

ಅದೂ ತಿಳಿಯಬಾರದೆ ನಿಮಗೆ? ಒಂದೇ ತಲೆಯಿಂದ ಹತ್ತು ವರುಷ ಕಥಾ ಲೇಖನ ಮಾಡಿದಿರಿ.... .. ಮೊದಲು ನಾಲ್ಕಾರು ಪೌರಾಣಿಕ, ಭಕ್ತಿಯ ಚಿತ್ರ ಪಟಗಳನ್ನು ಹೊರಡಿಸೋಣ. ಆ ಮೇಲೆ ಕುಬೇರನಾದ ಮೇಲೆ ಬೇಕಾದರೆ 'ಸಂಗೊಳ್ಳಿ ರಾಯಣ್ಣ'ನ ಐತಿಹಾಸಿಕ ಚಿತ್ರಪಟ ಹೊರಡಿಸೋಣ. ಭಕ್ತಿ ಚಿತ್ರಕ್ಕೆ ರೊಕ್ಕ ಸುರಿದ ಹಾಗೆ ಉಳಿದ ಯಾವುದಕ್ಕೂ ಹೇಳಬೇಡ್ರಿ. ಇದು ನನ್ನ ಸ್ವಂತ ಅನುಭವದ ಮಾತು. ಏನೋ ನಿಮ್ಮ ಮಾತಿಗೆ ಮರುಳಾಗಿ ಈ ಸಲ ಸಾಮಾಜಿಕ ನಾಟಕಕ್ಕೆ ಬೆನ್ನುಹತ್ತಿದೆ. ಈಗ ಕನ್ನಡ ವಾಕ್ಚಿತ್ರ ಭೂಮಿಗೆ ನಾನೇ ಬೆನ್ನು ತೋರಿಸುವ ಹೊತ್ತು ಬಂದಿದೆ. ಈಗ ಸದ್ಯಕ್ಕೆ ನೀವು ಕಥೆ ಬದಲಾಯಿಸುವಿರೊ ಇಲ್ಲವೊ ಹೇಳ್ರಿ; ಇಲ್ಲದಿದ್ದರೆ ಇದನ್ನು 'ಅಹಿರಾವಣ ಮಹಿರಾವಣ ಕಾಳಗ' ಅಂತ ರೂಪಾಂತರಿಸಿ ಬಿಡುತ್ತೇನೆ.

**ಯಜ್ಞೇಶ್ವರ:** — (**ಕವಿಯಂತೆ ಅಭಿನಯಿಸುತ್ತ**) ಆದರೆ ಒಂದು ವಿಷಾದದ ಸಂಗತಿ. ಪ್ರೇಮನಟಿ ಅವರಿಗೆ ಮಧ್ಯಂತರವಾದ ಮೇಲೆ ಉತ್ತಮವಾದ ಪ್ರಣಯಪೂರ್ಣವಾದ ಭಾವಗೀತಗಳನ್ನು ರಚಿಸಿಕೊಟ್ಟಿದ್ದೆ. ಬಾಂಬೆ ಟಾಕೀಜಿನೊಳಗಿನ ಭಾವಗೀತಗಳನ್ನು ಅಜಗಜದಂತೆ ಮೀರುವಂತಹವು. ನಾಯಕನ ವಿರಹದಲ್ಲಿ ನಾಯಿಕಿಗೆ ಹಾಕಿದ ಒಂದು ಗೀತವಂತೂ ಅತ್ಯಂತ ಅಪರೂಪವಾಗಿತ್ತು. (**ಹೇಳುವ ಸಿದ್ಧತೆ ಮಾಡುತ್ತಾನೆ, 'ಮೇರೆ ಲಿಯೆ ಜೊ ಹಾನಮೆ' ಎಂಬ ಧಾಟಿಯಂತೆ ಹಾಡು ಹೇಳುವನು**) ಮದನ ಮೋಹನಾಂಗನೆ। ಮಧುರ ಚತುರ ಚಂದ್ರನೆ। ಆದರೆ ಎಂತಹ ಉತ್ತಮ ಭಾವಗೀತ-ಪಾಂಚೋಲಿ ಚಿತ್ರಪಟದ ಅನುಕರಣೆಯ ಭಾವಗೀತ ಅವಕಾಶ ಕಾಣದೆ ಹೋಯ್ತಲ್ಲಾ ಅಂತ ವಿಷಾದವಾಗುತ್ತದೆ ಸ್ವಾಮಿ.

**ಕೈಲಾಸ:** — ಆಹಾಹಾ! ಯಾರು ಮೆಚ್ಚಬೇಕು ಸ್ವಾಮಿ ನಿಮ್ಮ ಅನುಕರಣ.

**ಯಜ್ಞೇಶ್ವರ:** — ಸಂಗೀತಾನ. ಅಯ್ಯೋ ಮಂಕೇ. ಅನುಕರಣಾ ಅನ್ನೋದಕ್ಕೆ ಇದೇನು ತೆಲಗು ಚಿತ್ರಪಟದವರು—'ಸುನೋ ಸುನೋ ಬನಕೆ ಪ್ರಾಣಿ' ಅಂತಾ ಆ ಹಾಳು ಮರಾಠಿ ಹಾಡಿನ ಅನುವಾದ ಮಾಡಿದ್ದೇನೇನು ಸ್ವಾಮಿ? ಪಾಂಚೋಳಿ ಚಿತ್ರಪಟ ಅಂದರೆ ಅಖಿಲ ಭಾರತಕ್ಕೂ ಶ್ರೇಷ್ಠ ಅಂತ........ಬೇಕಾದ ಪ್ರಾಂತಗಳ ಅನುಕರಣ ಮಾಡಿರಿ. ಆದರೆ ಈ ಪುರಾ

ರಿಯ ಅನುವಾದ ಮಾತ್ರ ಮೂರು ಮೂರು ಜನ್ಮಕ್ಕೂ ಮಾಡಬೇಡಿರಿ ಸ್ವಾಮಿ-ಅಂತ ಬೇಡಿಕೊಳ್ಳುತ್ತೇನೆ.

**ಮನ್ಮಥರಾಯ**:— ಯಾರಿಗೆ ಬೇಕರಿ ನಿಮ್ಮ ಭಾವಗೀತಾ? ಆ ಪ್ರೇಮ ನಟಿಯ ಭಾವಗೀತಕ್ಕೆ ರೊಕ್ಕ ಆಗುತ್ತದೆ. ಅಂತ ನಿಮ್ಮ ಮತ ಏನು? ಅಯ್ಯೋ ಪೆಚ್ಚೆ........ಒಬ್ಬ ಉತ್ಕೃಷ್ಟ ನರ್ತಕಿನ್ನ ಹಿಡಿದುಕೊಂಡು ಬರ್‍ರಿ. ಜಲಕೇಳಿ ಆಡುತ್ತಾ ಬಂದು ನೃತ್ಯ ಹಾಕಿಬಿಟ್ಟರೆ ಜನ ಹುಚ್ಚೆದ್ದು ಕುಣಿದಾಡಿರ ಬೇಕು........ನರ್ತಕಿಯೂ ಸಿಗದೆ ಹೋದರೆ ನಾನೇ ಒಂದು ಸರ್ವೋತ್ಕೃಷ್ಟ ತಾಂಡವನೃತ್ಯ ಮಾಡಿಬಿಡುತ್ತೇನೆ. ನಾಟ್ಯಗೃಹಗದುಗಮಿಸುವ ಹಾಗೆ........

**ಕೈಲಾಸ**:— ಹಾಗಾದರೆ ನಾಯಕಿ ಒಂದು ನಾಟಕ ಕಂಪನಿ ಸೇರುತ್ತಾಳೆ ಅಂತ ಸೇರ್ಪಡೆ ಮಾಡಿಬಿಟ್ಟರೆ ಅಲ್ಲಿ ಕಂಪನಿಯವರು ಬಂಗಾಲದ ಬರಗಾಲಕ್ಕೆ ಒಂದು ' ಬೆನಿಫಿಟ್ ಪರಫಾರ್ಮನ್ಸ ' ಕೊಡುತ್ತಾರೆ ಅಂತ ಸನ್ನಿವೇಶ ಕಲ್ಪಿಸಿದರೆ ಎಲ್ಲಾ ಸರಿಹೋಗುತ್ತದೆ.

**ಮನ್ಮಥರಾಯ**:— ರಾಯಿಟ್, ರಾಯಿಟ್ ! ನಾಟಕಾ ಅಂದಕೂಡಲೆ ನೆನಪಾಯಿತು. ನಾನು ಮೊದ್ಲು ಕಂಪನಿಯಲ್ಲಿದ್ದಾಗ ' ಕೃಷ್ಣಲೀಲಾ ' ನಾಟಕದಲ್ಲಿ ವಿಜಯನ ಪಾತ್ರ ಮಾಡುತ್ತಿದ್ದೆ. ಕಲ್ಲೀಮೀಸೆ ಕಟ್ಟಿಕೊಂಡು ಕೈಯಲ್ಲಿ ಕೋಲು ಹಿಡಿದುಕೊಂಡು ಗೋಪಿಕೆಯರ ರಾಸಕ್ರೀಡೆಯಲ್ಲಿ ಒಂದು ತಾಂಡವ ನೃತ್ಯಮಾಡಿ ಹಲ್ಲುಕಿರಿದು ಬಿಟ್ಟೆ ಅಂದರೆ ಮುಗಿಯಿತು. ಜನ ಅಂಬೊವರೆಲ್ಲಾ ಹೊಟ್ಟೆ ಹಣ್ಣಾಗುವ ಹಾಗೆ ನಕ್ಕುಬಿಡುತ್ತಿದ್ದರು. ಅಂತಹ ಒಂದು ಸನ್ನಿವೇಶ ಜೋಡಿಸಿಬಿಡಿರಿ. ಬೇಫಾಮ್ ಆಗಿ ಹಾಸ್ಯ ತೋರಿಸಿ ಬಿಡುತ್ತೇನೆ........ಆ ಮೇಲೆ ನೋಡ್ರಿ ನಮ್ಮ ಚಿತ್ರಪಟ ಕನ್ನಡದ ಬಾವುಟ ಹಿಡಿದುಕೊಂಡು ಕನ್ನಡ ನಾಡಿನ ಮೇಲೆ ಮೂಲೆಯಲ್ಲೆಲ್ಲಾ ವೈಭವಶಾಲಿ ಒಂಬತ್ತನೆಯವಾರ ನಡೆಯಲಿಲ್ಲಾ ಅಂದರೆ ನನ್ನ ಹೆಸರು ಮನ್ಮಥರಾಯ ಅಂತ ಕರಿಯಬೇಡ್ರಿ.

**ಕೈಲಾಸ**:— ಆದರೆ ಕನ್ನಡದಲ್ಲಿ ಶ್ರೇಷ್ಠ ಚಿತ್ರಪಟ ನಿರ್ಮಾತೃಗಳು ಉದಯವಾದರೆ ನಿಜವಾಗಿಯೂ ನಮಗೆ ಬಲವಾದ ಪೆಟ್ಟು ಬೀಳುವುದು.

**ಮನ್ಮಥರಾಯ**:— ಅಯ್ಯೋ ಪೆಚ್ಚೆ! ಲಕ್ಷಾವಧಿ ರೂಪಾಯಿಗಳ ಬಂಡವಾಳ ಹಾಕೋ ಅಂತ ಸಾವುಕಾರರು, ಕಲಾವಿದ ಸಾವುಕಾರರು ಇದ್ದಾ

ರೆಯೇ ಕನ್ನಡದಲ್ಲಿ? ಹುಚ್ಚು. ಒಬ್ಬ ಕನ್ನಡ ಸಾಹಸಿಗ ಅನ್ನಬೇಕು ಈ ಮನ್ಮಥರಾಯ! ಜನಗಳ ಅಭಿರುಚಿಗಳನ್ನು ತಿಳಿದುಕೊಂಡು ಜನಗಳು ಮೆಚ್ಚಿ ಮರುಳಾಗಿ ಹುಚ್ಚಾಗಿ ಕುಣಿದಾಡುವಂತೆ ಚಿತ್ರಪಟಗಳನ್ನು ನಿರ್ಮಾಣ ಮಾಡಿ ಆಚಂದ್ರಾರ್ಕವಾದ ಕೀರ್ತಿಯನ್ನು ನಾಲ್ಕೂ ದಿಕ್ಕಿನಲ್ಲಿ ಪಸರಿಸಿ ಮೆರೆಯುವ ಭಾಗ್ಯ ಈ ಕನ್ನಡ ಕುಬೇರನಿಗಲ್ಲದೆ ಇನ್ನಾರಿಗುಂಟು?........ಹಾಗೆ ಯಾರಾದರೂ ಸ್ಪರ್ಧೆಗೆ ನಿಂತರೆ ಒಂದು "ದಶಾವತಾರ" ಇಲ್ಲವೆ "ಕುರುಕ್ಷೇತ್ರ" ದಂತಹ ಪೌರಾಣಿಕ ನಾಟಕ ಹೊರಡಿಸಿ, ಹೋಲಿವುಡ್ಡಿನಿಂದ ದಿಗ್ದರ್ಶಕರನ್ನು ಕರೆಸುತ್ತೇನೆ.

**ಯಜ್ಞೇಶ್ವರ**:— ಹೋಲಿವುಡ್ಡಿನಿಂದ ದಿಗ್ದರ್ಶಕರು ಬಂದಮೇಲೇನು ಕೇಳುವುದು? ಕನ್ನಡ ಚಿತ್ರಪಟದಲ್ಲಿ ಹೋಲಿಯ ಹಬ್ಬವೇ! ಆ ಮೇಲೆ ಸಂಗೀತ ದಿಗ್ದರ್ಶಕರನ್ನೇನು ಜರ್ಮನಿಯಿಂದ ಕರೆಯಿಸುತ್ತೀರೊ, ರಶಿಯಾದಿಂದೊ?

**ಮನ್ಮಥರಾಯ**:—ಮಿಸ್ಟರ ಯಜ್ಞೇಶ್ವರ್!

**ಯಜ್ಞೇಶ್ವರ**:— (ಚಟ್ಟನೆ ಬಂದು) ಸರ್

**ಮನ್ಮಥರಾಯ**:— ಕೂಡಲೆ ಜಾಹಿರಾತು ಕಳಿಸಿರಿ. ಒಳ್ಳೇ ಸುಶಿಕ್ಷಿತ ಗೃಹಿಣಿಯರಾದ ಸುಂದರ ನಟಿಯರು ಬೇಕು— ಅಂತ............ಅರ್ಜಿಯ ಜತೆಗೆ ಎಲ್ಲರೂ ತಂತಮ್ಮ ಫೋಟೋ ಕಳಿಸಬೇಕು ಅಂತ ಹೇಳಿರಿ. (**ಕಾತರ ಭಾವದಿಂದ ಅತ್ತಿತ್ತ ಓಡಾಡುತ್ತ**) ಕನ್ನಡ ಚಿತ್ರಪಟದಲ್ಲಿ ಕ್ರಾಂತಿಯನ್ನೆ ಮಾಡುತ್ತೇನೆ....(ಮುಷ್ಟಿಗೈ ಮೇಲಕ್ಕೆತ್ತಿ) ಕ್ರಾಂತಿ, ಕ್ರಾಂತಿ, ಸಂಕ್ರಾಂತಿ!........ಹಾ, ಒಳ್ಳೊಳ್ಳೆಯ ನಟರೂ ಬೇಕು ಅಂತ ಹೇಳಿ....ಬಿ. ಎ. ಎಂ. ಎ; ಆಯ್. ಸಿ. ಎಸ್; ಎಂ. ಬಿ. ಬಿ. ಎಸ್. ಯಾವುದೇ ನಿರುದ್ಯೋಗಿ ಪದವೀಧರರು ಬರಲಿ, ಈ ಮನ್ಮಥರಾಯನು ಅವರಿಗೆ ಆಶ್ರಯಕೊಡುವನು........ತನ್ನ ಅಂಗೈ ಮೇಲೆ ಆಯ್. ಸಿ. ಎಸ್. ಪದವೀಧರರನ್ನು ಗೊಂಬೆಯಂತೆ ಕುಣಿದಾಡಿಸುವನು....ಕರ್ನಾಟಕವೆಂಬ ಮಹಾ ನಾಟಕಕ್ಕೆ ನಾನೇ ಸೂತ್ರಧಾರಿಯಾಗುವೆನು.

**ಕೈಲಾಸ**:— ಆಯಡಿಯಾ, ಆಯಡಿಯಾ! ಕರ್ನಾಟಕವೆಂಬುದನ್ನೆ ಒಂದು ಮಹಾ ನಾಟಕಕ್ಕೆ ಹೋಲಿಸಿ, ನಿಮ್ಮನ್ನೇ ಸೂತ್ರಧಾರಿಗಳನ್ನಾಗಿ ಮಾಡಿ ಸಿನೇರಿಯೊ ಬರೆಯುತ್ತೇನೆ. ಹೌದು, ಹೊಸ ಕ್ರಾಂತಿ.

**ಯಜ್ಞೇಶ್ವರ**:— ಸರಿ, ಹಾಗಾದರೆ ನಾನು ಶೂಟಿಂಗಿನ ಸಿದ್ಧತೆ ಮಾಡುತ್ತೇನೆ.

**ಮನ್ಮಥರಾಯ**:— ಯಾಕೆ ಕೈಲಾಸವಾಸಿಗಳೇ, ಈಗ ನಡೆದ ವಾರ್ಚಿತ್ರಕ್ಕೆ 'ಕರ್ನಾಟಕ ಮಹಾ ನಾಟಕ' ಅಂತ ಹೆಸರಿಟ್ಟುಬಿಡೋಣ. ಹೇಗೆ?

**ಕೈಲಾಸ**:— ಕೇಳುವದೇನು? ವಾ. ಸಿ ಕೈಲಾಸರು ಕೈಲಾಸವಾಗಿಗಳಾಗುವದೇ ಖಂಡಿತ.

[ ತೆರೆ ]

# ಇಲೆಕ್ಶನ್



## ಪ್ರವೇಶ ೧.

[ಶಾ 'ದಾತನಯು ಶಾಮುನ, ಅಲ್ಲಲ್ಲ, ಆವನ ಶ್ವಶುರನ ಮನೆ. ಶಾಮುನ ಓದುವ ಕೋಣೆ—ಒಂದು ಟೇಬಲ್ಲು, ಒಂದೆರಡು ಖುರ್ಚಿಗಳು, ನಾಲ್ಕಾರು ಮಾಸಪತ್ರಿಕೆಗಳು ಹಾಗು ದೈನಿಕ ಪತ್ರಿಕೆಗಳು; ಟೇಬಲ್ಲಿನ ಮೇಲೆ ಒಂದು ಬೌತಿ. ಲೆಕ್ಷಣಿಕೆ, ಶಾಮುನೀಗ ಕವಿತೆ ಬರೆಯುತ್ತಲಿರುವನು. ತೊಟ್ಟದ್ದು ಖಾದಿಯ ಶರಟು, ರಟ್ಟೆಯ ವರೆಗೆ ತೋಳು ಏರಿಸಿದ್ದಾನೆ, ತಲೆಯ ಮೇಲೆ ಟೊಪ್ಪಿಗೆ ಇಲ್ಲ.]



**ಶಾಮು:**— ಇವೊತ್ತ ಇಡೀ ದಿವಸ ಸ್ಫೂರ್ತಿ ಬರವಲ್ಲು! ಯಾಕ ಬರವಲ್ದು? ಈಗಿನ ದಿನದಾಗ ಎಲ್ಲದಕ್ಕೂ ಪಿಲ್ಸ ಹುಡುಕಿ ತಗದಾರ, ಅಂಥಾದ್ದು ಸ್ಫೂರ್ತಿ ಬರಲಿಕ್ಕೊಂದು ಪಿಲ್ಸ ಯಾಕ ಹುಡಕಿಲ್ಲಾ? ಇವೊತ್ತ ನನಗ ಸ್ಫೂರ್ತಿ ಬರದೇ ಇದ್ದ ಕಾರಣ ಏನು? ಮಂಗಳವಾರದ ಸಂಯುಕ್ತ ಕರ್ನಾಟಕನಾರ ತೆಗೆದು ನೋಡಲ್ಯಾ, ವಾರದ ಭವಿಷ್ಯಾನ? (ಸಂಯುಕ್ತ ಕರ್ನಾಟಕವನ್ನು ತೆಗೆದುಕೊಂಡು ಮೊದಲಿನಿಂದ ಓದತೊಡಗುವನು) 'ಸಂಯುಕ್ತ ಕರ್ನಾಟಕ, ಇದರಲ್ಲಿ "ಕನ್ನಡಿಗ" ಪತ್ರಿಕೆಯೂ ಕೂಡಿವೆ. (ಮತ್ತೊಂದು ಪಾನು ತೆಗೆದು) 'ಬೇಕಾಗಿದ್ದಾರೆ' 'wanted' **'पाहिजेत'** ಒತ್ತಟ್ಟಿ 'ಬೇಕಾಗಿದ್ದಾರೆ' ಒತ್ತಟ್ಟಿ 'Wanted' ಒತ್ತಟ್ಟಿಗೆ **'पाहिजेत'** ಬರೋಬರಿ,— ಸಂಯುಕ್ತದ ಪೇಪರು! ಏನು ಬೇಕಾಗಿದ್ದಾರೆ? ವರರು ಬೇಕಾಗಿದ್ದಾರೆ. ನಮಗೇನು ಮಾಡೋದು ತೊಗಂಡದನ್ನ? ಇರೋದ

ಮಾವನ ಮನಿ, ವರರು ಬೇಕಾಗಿದ್ದಾರೆ ಅಂತ ಒದರಿದರ ನಮ್ಮ ಮಾವನ ಮಗಳು ಕಸಬರಿಗಿ ತೊಗೊಂಡು ಬರುತಾಳ..........ವಾರದ ಭವಿಷ್ಯ— ಹೂಂ.... (ಮತ್ತೊಂದು ಪಾನು ತೆಗೆದು) ಕರ್ಕರಾಶಿ —- ಮನಸ್ಸಿಗೆ ಅಸ್ವಸ್ಥ.... ಅದಕ್ಕ ನೋಡಿರಿ ಸ್ಫೂರ್ತಿ ಬರವಲ್ದು!........ ಪ್ರಾಪಂಚಿಕ ಸುಖ ಉತ್ತಮ .......... ಅದೇನೋ ಖರೆ, ಆದರ ಸ್ವಲ್ಪ ಕಷ್ಟದ! .......... ಉದ್ಯೋಗದಲ್ಲಿ ಪ್ರಗತಿ .......... ಎಲ್ಲಿ ಪ್ರಗತಿ, ದುರ್ಗತೀನ ನಡದದ........ (ಪತ್ರವನ್ನು ಒಗೆದು) ಈ ವಾರದ ಭವಿಷ್ಯ ನಂಬುಬೇಕೊ ನಂಬಬಾರ್ದೊ, ಆಂ? ಅದು ಹ್ಯಾಂಗ ಸ್ಫೂರ್ತಿ ಬರೋದಿಲ್ಲಾ ನೋಡಿಯೆ ಬಿಡುತೀನಿ.......... ಹೇ ಕವಿತಾ ಮಾತೆಯೇ, ಬಾ! ನಿನ್ನ ಮಗನಿಗೊಂದಿನಿಸು ಸ್ಫೂರ್ತಿಯನ್ನು ಕೊಡು. ಉಳಿದ ಕವಿಗಳು ನಿನ್ನನ್ನು ಹೇ ರಮಣಿ,ಹೇ ನಲ್ಲೆ,ಎಂದು ಸಂಬೋಧಿಸಿದರೂ ನಾನು ಮಾತ್ರ ನಿನ್ನನ್ನು ಕೇವಲ ಮಾತೆಯೆಂದೇ ಸಂಬೋಧಿಸುವೆನು.

(ಪಾಟೀಲನು ಪ್ರವೇಶಿಸುವನು.)

**ಪಾಟೀಲ:**— Good Morning, ಮಿಸ್ಟರ ಶ್ಯಾಮರಾವ. ಮರ್ತೆ, ಕವಿವರ್ಯರಾದ ಶಾರದಾತನಯ–ಶಾಮನವರೇ ಶರಣು.

**ಶಾಮು:**— ಅದೆಷ್ಟು ಚೇಷ್ಟೆ ಮಾಡುತ್ತೀಯೋ ಮಾಡಪಾ.

**ಪಾಟೀಲ:**— ಅಲ್ಲೊ ಶಾಮಾ, ಒತ್ತಟ್ಟಿಗೆ ಶಾರದಾತನಯ ಶಾಮಾ ಅಂತ ಬರೀತಿ; ಒತ್ತಟ್ಗಿ ಧಾರವಾಡ ಶಾಮುರಾಯ್ರು ಅಂತ ಬರೀತಿ; ಇನ್ನೊ ಒತ್ತಟ್ಗಿ ಎಸ್. ರಾವ್, ಅಂತ ಬರೀತಿ. ಇದೇನೊ ಸಾಹೇಬರ ಡ್ರೆಸ್ಸಿನ್ಹಂಗ?

**ಶಾಮು:** – ಹಂಗಲ್ಲೋ........ಕವಿತಾ ಬರದ್ರ ಶಾರದಾತನಯಶಾಮು ಅಂತ ಬರೀತಿನಿ; ನಾಟಗಾ ಬರದರ ಶ್ರೀಶಾಮು ಅಂತ ಬರೀತಿನಿ; ವಿಮರ್ಶಾ ಬರದರ ಎಸ್. ರಾವ್. ಅಂತ ಬರೀತಿನಿ. ನಿಮಗೇನು ತಿಳಿಬೇಕದೆಲ್ಲಾ ?

**ಪಾಟೀಲ:**— ತಿಳೀದಿದ್ದರಿಲ್ಲಾ. ಈ ಸರ್ತಿ ಇಲೆಕ್ಶನ್‌ಗೆ ನಮ್ಮ ಎಸ್. ಎಸ್. ನಿಂತಾನ. ಅವಗೊಂದು ಹೋಟ ಹಾಕಿ ಬಿಡಪಾ. ಅವನ್ನ ಕೆಡಿಸಲಿಕ್ಕೆ ವಿರುದ್ಧ ಬಹಳ ಮಂದಿ ನಿಂತಾರ ಮತ್ತ.

**ಶಾಮು:**— ಅಲ್ಲೊ, ಅವಾ, ನಿಂತವನ ಬಂದಿಲ್ಲಾ, ಅಂಥಾದು ನಿಮದೇ ಬಹಳ ಜೋರು ನಡದಲ್ಲೊ !

**ಪಾಟೀಲ**:— ಅವ ಬಂದರ ಖರೇ ಏನು? ನಿನ್ನಂಥವಾ ಹಿಂಗಾದರ ಹೆಂಗೊ? (**ಕಾರ್ಡು ಕೊಡುತ್ತ**) ಅವನ ಕಾರ್ಡೊಂದದ ಸಾಕಪಾ.

**ಶಾಮು**:— ಈಗಾಗ್ಲೆ ಕಾರ್ಡು ಛಾಪಿಸಿ ಬಿಟ್ರೇನು? ನಾವೊಂದು Peom ಅರ ಬರದ ಕೊಡತಿದ್ದೆನಲ್ಲೊ,— ಛಾಪಿಸಲಿಕ್ಕೆ ಬರತಿತ್ತು. ಎಷ್ಟು Space ಉಳದದ.

**ಪಾಟೀಲ**:— ಅಲಾಲಾಲಾ ಏನು ಕವಿಪಾ. ಸನ್ಯಾಸಿ ತಲೆಯ ಮೇಲೆ ಸುದ್ಧಾ ಕವಿತಾ ಬರಿಯಾವ ನೋಡನೀ.

**ಶಾಮು**:— ಇರ್ಲಿ ಬಿಡೊ. ನನ್ನ ಕವಿತಾ ಅಂದ್ರ ಅಷ್ಟು ಕಿಮ್ಮತ್ತಿಲ್ಲಾ ಅಂತ ಮಾಡೀಯೇನು? ಬಿಡು ಹೋಗು ಹಂಗಾರ.

**ಪಾಟೀಲ**:— ಛೆ ಹಂಗ ಮಾಡಬ್ಯಾಡಪಾ.

**ಶಾಮು**:— ನಾವ ವ್ಹೋಟ ಹಾಕಿದ್ರ ನಮಗೇನು ಹಂಗರ?

**ಪಾಟೀಲ**:— ಅದಕ್ಯಾಕ ಕಾಳಜಿ ಮಾಡ್ತಿ ಬಿಡೊ. ಈ ಸರ್ತೆ ಮಿಸಲನಿ ವಳಗ ನಿನ್ನ ಕವಿತಾ ಮೊದಲಿಗೆ ಛಾಪಿಸಿ ಕೊಡ್ತಿನಿ.

**ಶಾಮು**:— Thank you. ನೋಡ ಮತ್ತ ............ ನೀ ಛಾಪಿಸಿ ಕೊಡ್ತಿನಿ ಅಂದ್ರ ನಾ ಈಗ್ಗಿಂದ ಒಂದು ಬೆಸ್ಟ ಕವಿತಾ ಬರೀಲಿಕ್ಕೆ ಸುರುವ ಮಾಡ್ತೀನಿ.

**ಪಾಟೀಲ**:— Oh yes.

**ಶಾಮು**:— ಮೊದಲ ಹೇಳು ಘಟ್ಯಾಗಿ. ನಾ ನಾಕ ಮಂದ್ಯಾಗ ನನ್ನ Poem ಪ್ರಿಂಟ ಆಗ್ತದ ಅಂತ ಹೇಳೋಣ್ ನೀವು ಛಾಪಿಸಲಿಲ್ಲಾ ಅಂದ ಎಂಥಾ Disgrace ನೋಡು ಹಿಂದಾಗಡೆ ನಮ್ಮ Honour Keep up ಮಾಡ್ಕೊಳಿಕ್ಕೆ ಮತ್ತೆ ಯಾ ಮಾಗಜಿನ್‌ದಾಗಾರ ಒಂದೆಂಟಣೆ ಖರ್ಚು ಮಾಡಿ ಛಾಪಿಸಬೇಕಾಗ್ತದ.

**ಪಾಟೀಲ**:— ಮತ್ತ ಬಸಂತಗ Promise ಮಾಡೀಯೇನು?

**ಶಾಮು**:— ಛೆ! Imposs! ಅವನ ಮುಂದೆ ಹೂಂ ಅಂದರೂ ನಾ ಹಾಕೂದು ಎಸ್ ಎಸ್ ಗ.

**ಪಾಟೀಲ:**— ಒಳಗೊಂದು ಹೊರಗೊಂದು ಮಾಡಪಾ ಹಂಗ

**ಶಾಮು:**—, ಇಲ್ಲಿದ್ರ ಇಲೆಕ್ಶನ್ ಆಗಬೇಕ ಹೆಂಗೊ? ಇದಕ್ಕೂ ಇಲೆಕ್ಶನ್ ಟ್ರಾಕ್ಟಿಕ್ಸ ಅಂತಾಗ .......... ಅಲ್ಲೋ, ನಾವೊಂದು ನಾಟ್ಕಾ ಬರ್ದೀನಿ, ಸ್ವಲ್ಪ ನಿಮ್ಮ ಕ್ಯಾನರಿೀಜ ಪ್ರೊಫೆಸರರಿಗೆ ಹೇಳಿ ಒಂದ ಮುನ್ನುಡಿ ಬರಿಸಿ ಕೊಡಲ್ಲಾ.

**ಪಾಟೀಲ:**— ಮುಗಸ್ದೀನ ಆ ನಾಟಗಾ? ಆ ಸಕೇಶೀನ್ನೇನು ಶ್ರೀಧರಗ ಮದವಿ ಮಾಡ್ಡ್ಯಿ?

**ಶಾಮು:**— Tragedy ಮಾಡಿ, ಹೆಚ್ಚು Imprestive ಆಗಲಿ ಅಂತ.

**ಪಾಟೀಲ:**— Tragedy ಕಿಂತಾ Comic Satire ಛಲೋ ಅಲ್ಲೇನೊ?

**ಶಾಮು:**—Satire ಬರೆದರೆ ಸಿಟ್ಟಿಗೇಳ್ತಾರ ಮಂದಿ........ಹೆಂಗಿದ್ದರ ಏನೋ ಪ್ರಿಫೇಸ ಒಂದು ರಂಗ ಇದ್ದರ ತೀರಿತು ನೋಡು.

**ಪಾಟೀಲ:**—ಅವು ಯೋಗ್ಯ ಇದ್ರ ಪ್ರಿಫೇಸ ಬರದಾರಪಾ......ಆದರೂ ಬರೇ ಒಂದು ಪ್ರಿಫೇಸ ಬರದಾಕ್ಷಣಕ್ಕ ನಿನ್ನ ಕೃತಿಗಳು ಅಗದೀ ಸರ್ಟಿಫಾಯಿಡ ಅಂತ ತಿಳದಿಯೇನು?... ....ಈಗಿಂದ ಅಷ್ಟು ರೊಮ್ಯಾಂಟಿಕ್ ವರ್ಕ್ಸ ಬರೀತ ಬರಬ್ಯಾಡೊ. ನಾಳೆ ಮುದಕಾದೆಂದ್ರ ಬರೀ ಅಂತ.

**ಶಾಮು:**—ನಾ ಮುದುಕ ಆಗೂತನಾ ಇರ್ತೀನಿ ಅಂತ ಎದರ ಮ್ಯಾಲಿಂದ? ತೊಗೋ, ನಾಳೆ ನಾ ಸತ್ತ--ನಾಡದ ನನ್ನ ವರ್ಕ್ಸ ಉಳೀತಾವಲ್ಲಾ?

**ಪಾಟೀಲ:**— ಉಳಿತಾದ ಖರೆ, ಆದ್ರ ಹೆಸರಾಗಿ ಉಳೀತಾವಂತ ಎದರ ಮ್ಯಾಲಿಂದ? ಮೊನ್ನೆ ಯಾವದೋ ಒಂದ ಕಥಿ ಬರದಿದ್ದೆಲ್ಲಾ ಆದರ ಮ್ಯಾಲನ ವಿಮರ್ಶಾ ಓದಿದೇನು?

**ಶಾಮು:**—ಅದು ನನ್ನ ಸಾಹಿತ್ಯದ ವಿಮರ್ಶಾ ಅಲ್ಲಾ, ನನ್ನ ವಿಮರ್ಶಾ. ನನ್ನ ಕಂಡ್ರ ಸಹನಾಗದೆ ಇದ್ದವರು ಬರದಿದ್ದಾರು. ನಾಯೇನು

ಮಂದೀ ಸಲುವಾಗಿ ಬರಿಯೂದಿಲ್ಲಾ, ತಿಳೀತ? ಮಂದಿಯೇನು ಬೇಕಾದ್ದಂತಾರ........ಮಂದೀ ಬಾಯಿ ಹಿಡಿದು ಎಷ್ಟಂತ ಪೂರ್ರೈಸತಾನ.....ಅಲ್ಲಾ, ನನ್ನ ಸಾಹಿತ್ಯಕ್ಕ ವಿಮರ್ಶೆ ಬಂದsವ, ಇದು ನನ್ನ ಪುಣ್ಯಾ. ಬರೇ ಒಂದ ಕಾಗೀ ಕಥಿ ಒಂದ ಗುಬ್ಬೀ ಕಥಿ ಬರದರ ಯಾರು ವಿಮರ್ಶ ಮಾಡಲಿಕ್ಕೆ ಹೋಗುದುಲ್ಲಾ. ಛಲೋ ಸಾಹಿತಿಗಳೊಳಗ ಗಣನಾ ಇದ್ದರ ವಿಮರ್ಶಾ ಬರೀತಾರೆನಪಾ.

**ಪಾಟೀಲ:**— ಅದೆಲ್ಲಾ ನಮಗೇನ ಗೊತ್ತು ಮಾರಾಯಾ — ಮಂದಿ ಬೈದರೂ ಅದು ಒಂದು ಕಾಂಪ್ಲಿಮೆಂಟ್ ಅಂತ. ಅಚ್ಛಾ, ಹೋಗುಣಾ ಇನ್ನ, ನೋಡು ಮರೀಬ್ಯಾಡಾ

**ಶಾಮು:**— ಯೇ ಅಚ್ಛಾ! ಕರ್ನಾಟಕದವನೋ ನೀನು. 'ಒಳ್ಳೇದು' ಅನ್ನು. ಪರ್ಶಿಯನ್ ಸಂಪರ್ಕ ಹೆಚ್ಚಾಧಂಗ ಕಾಣಿಸತದ ತಮಗ.

**ಪಾಟೀಲ:**— ಅಲ್ಲೊ, 'ಕರ್ನಾಟಕ ಕಾಲೇಜ'ದವರ ಫ್ಯಾಶನ್ನೋ ಅವೂ ........... ಮರಿಬೇಡಪಾ ಇದು ಕಡಿಸರತೆ ಹೇಳೂದು................

**ಶಾಮು:**— ಒಮ್ಮೆ ಪ್ರಾಮೀಜ ಮಾಡಿದೆ ಅಂದರ ತೀರಿತು.

**ಪಾಟೀಲ:** — ಅಚ್ಛಾ, ಅಲ್ಲಾ ಒಳ್ಳೇದು ........ ಕಾಳಜಿ ಮಾಡಬ್ಯಾಡಾ, ನಿನ್ನ ಕವಿತಾ ಛಾಪಿಸಿ ಕೊಡತೀನಿ. ನನಗ ಕೂಡಿಕದು, ಮತ್ತಿನ್ನೇನು. (ಹೋಗುವನು.)

**ಶಾಮು:**— (ಲಟಗೆ ಹೊಡೆಯುತ್ತ) ಮೊದಲು ನಧ್ಯಾ ಒಂದು ಬೆಸ್ಟ ಕವಿತಾ ಕಟ್ಟತೀನಿ. (ಹಾಡುತ್ತ)

ಮುಗಿಲ ಮಾರಿಗೆ ರಾಗರತಿಯಾ ಸಂಜ ಏರಿತ್ತs
ಅಗ ಸಂಜೆಯಾಗಿತ್ತ
ನೆಲದ ಅಂಚಿಗೆ ಮಂಜಿನ ಮುಸುಕು ಹಾಂಗೋ ಬಿದ್ದಿತ್ತ
ಗಾಳಿಗೆ ವ್ಯಾಲಕ್ಕೈದ್ದಿತ್ತ
ಕಾಮಿ-ಬೆಕ್ಕಿನ್ಹಾಂಗ ಭಾವಿ ಹಾದಿ.........................

(ಹೀಗೆಂದು ಹಾಡುತ್ತ) ಕವಿ ಅನಬೇಕು ಅಂಬಿಕಾತನಯದತ್ತರ! ನಮಗ ಹದಿನೈದು ದಿವಸಾದರೂ ಎರಡು ಸಾಲು ಬರಿಯೂದಾಗವಲ್ಲದ್ದು; (ಪುನಃ

**ಮೇಲಿನ ಕವಿತೆಯನ್ನು ಹಾಡುತ್ತ)** ........... ಅವರ ತುತ್ತಿನ ಚೀಲಾ, ಏನು ಕವಿತಾ ಅದು! ಬಡವರ ಕರಳಿನೊಳಗ ಹೊಕ್ಕು ಕೂಗ್ಯಾರ! ಬೇಕು! ಬಡ ತನಾ ಬೇಕು! (**ಕಾವ್ಯಮಗ್ನನಾಗಿ**) ಹೇ ದಯಾನಿಧೆ! ಹೇ ಕರುಣಾರ್ಣವಾ! ಹೇ ಕಾರುಣ್ಯಸಿಂಧು! ನನಗೆ ಯಾನಾಗಲೂ ಬಡತನವನ್ನೇ ಕೊಡು. ಬಡ ತನದ ಕಟು ಅನುಭವವನ್ನು ಪಡೆದೂ ಪಡೆದೂ ಬಡತನದ ಕಷ್ಟವನ್ನು ಸೂಸು ವಂಥ ಸಾಹಿತ್ಯಗಳನ್ನು ಹೊರಪಡಿಸುವೆನು, ಹೆಸರು ಪಡೆಯುವೆನು.......... ಕವಿಗಳು ಯಾವಾಗಲೂ ಕಷ್ಟವನ್ನೇ ಕೋರುತ್ತಾರೆ— ಯಾಕೆ? ಹೆಸರಾದ ಕವಿಗಳಾಗಲಿಕ್ಕೆ — ತಮ್ಮ ಸಾಹಿತ್ಯಗಳು ಹೆಚ್ಚಿನ ಬೆಲೆಗೆ ಮಾರಾಟವಾಗ ಲಿಕ್ಕೆ........ಮನಿಯಲ್ಲಿ ಯಾರಾದರೂ ಸತ್ತರೆ ಈ ಕವಿಗಳಿಗೆ ಎಂಥ ಸ್ಫೂರ್ತಿ! ತಮ್ಮ ಪ್ರತಿಭೆಯ ಪರೇಡ ಮಾಡಲಿಕ್ಕೆ. ಒಳ್ಳೇ ಸುಸಂಧಿ ನನಗೂ ಇಂತಹ ಪ್ರಸಂಗಗಳು ಮೇಲಿಂದ ಮೇಲೆ ಬಂದರೆ ನಾನೂ ಒಬ್ಬ ದೊಡ್ಡ ಕವಿಯಾಗ ಲಿಕ್ಕಿಲ್ಲವೆ? ಹೆಸರು ಪಡೆಯಲಿಕ್ಕಿಲ್ಲವೆ? ........... ಆನಂದವನ್ನು ಹೊಂದಿ ದಾಗ ಕವಿಯು ಕಾವ್ಯ ಬರೆಯುವನಂತೆ - ಸತ್ತಾಗೆಲ್ಲಿ ಆನಂದ ಬರ ಬೇಕು!........ ಭಾವಗಳ ಭಾಷೆಯಂತೆ ಕವಿತೆ — ನಮಗ ನಮ್ಮ ಭಾವಿಲ್ಲರಿ! ಭಾವ ಇರದಿದ್ರೂ ಮಾವ ಇದ್ದಾನ, ನಮ್ಮ ಟುಕುಂಬ ಇದ್ದಾರ! ಯಾಕ ಬರಬಾರ್ದು ಸ್ಫೂರ್ತಿ! ಬೇಕದಕ್ಕೂ ನಸೀಬಾ.

(**ಶಾಂತಾ ಪ್ರವೇಶಿಸುವಳು**)

**ಶಾಮು:**— (**ಹೆಂಡತಿಯನ್ನು ನೋಡಿ**) ನಮ್ಮ ಸ್ಫೂರ್ತಿ ಬಂತು! (**ಸ್ವಗತ**) **ಎಲಾ**, ನಮ್ಮ ಕುಟುಂಬಕ್ಕೂ ಸ್ಫೂರ್ತಿಬಂದಾಗ ಕಾಣತದಲ್ಲಾ! (**ಪ್ರಕಾಶ**) ನಲ್ಲೆ, ನಿನ್ನ ಬೆಡಗನ್ನು ನಾನು ಎಷ್ಟೆಂದು ಬಣ್ಣಿಸಲಿ? ಆ ನಿನ್ನ ಬಿಲ್ಲಿನಾಕಾರದ ಹುಬ್ಬುಗಳು ನನ್ನೆದೆಗೆ ನನೆವಿಲ್ಲಿನ ಬಾಣವನ್ನೇ ಬಿಡುತ್ತವೆ. ನಿನ್ನ ನೋಟವನ್ನೇ ಬಾಣವನ್ನಾಗಿ ಮಾಡಿ ಆ ನಿನ್ನ ಕೆಂದುಟಿಗಳು, ಆ ಕೆನ್ನಾಲಿಗೆಯು, ಆ ಕೆಂಪಲ್ಲುಗಳು, ನೀನು ನನ್ನನ್ನು ಬಿಟ್ಟು ಎಲೆ ಅಡಿಕೆ ಹಾಕಿಕೊಂಡಿರುವಿಯೆಂದು ಸ್ಪಷ್ಟವಾಗಿ ಹೇಳುತ್ತವೆ.

**ಶಾಂತಾ:**—ಸಾಕು, ಮುದುಕರಾದರೂ ಬುದ್ಧಿ ಬರೂ ಹಂಗಿಲ್ಲಾ.

**ಶಾಮು:**— ನಾನು ಮುದುಕನಾದರೂ ನನ್ನ ಕವಿತ್ವವು ಎಳೆಯದೇ

ನಲ್ಲಿ, ನಿನ್ನನ್ನು ಏನೆಂದು ಸಂಬೋಧಿಸಲಿ, ವಿಮಲೆ, ಕಮಲೆ, ಕೌಮುದಿ ಎಂದು ಸಂಬೋಧಿಸಲೋ, ಅಥವಾ ಅಚ್ಚಕನ್ನಡದಲ್ಲಿ ಚಿನ್ನೆ, ನೈದಿಲೆ, ತಾವರೆ, ನೀಲೆ, ಹಳದೆ ಎಂದು ಸಂಬೋಧಿಸಲೊ........ನಿನಗ ಅತ್ತಿಮನಿ ಹೆಸರು ಇಡಬೇಕಾದರೆ ನನಗ ಸ್ಫೂರ್ತಿ ಬರಲಿಲ್ಲ ನೋಡು. ಬಂದಿದ್ರ ತಾವರವ್ವಾ ಅಂತ ಹೆಸರಿಟ್ಟು ಬಿಡತಿದ್ದೆ. ನನಗ ತುಂಬಪ್ಪಾ, ಇಲ್ಲಾ ಭೃಂಗಪ್ಪ ಅಂತ ಇಟುಗೋತಿದ್ದೆ. ಅದೆಲ್ಲಾ ಬಿಟ್ಟು ನಮ್ಮವ್ವ ಸುಟ್ಟ ಸುಡಗಾಡು ಶಾಂತಾ ಅಂತ ಇಟ್ಲು.......ಆತು, ವೈದಿಕ ಬ್ರಾಂಬರ ಕನ್ಯಾಕ್ಕ ಅವ ಹೆಸರು ಯೋಗ್ಯಾ.

**ಶಾಂತಾ:**—(**ಕೆರಳಿ**) ವೈದಿಕ ಬ್ರಾಂಬರ ಕನ್ಯಾ ಮಾಡಿಕೊಂಡ್ಯಾಕ ಹಂಗಾದರೆ ?

**ಶಾಮ:**— ನಿಮ್ಮಪ್ಪಾs ಕೊಟ್ಟಾ ಅಂತ ಮಾಡಿಕೊಂಡೆ. ಬಿಡು ಹಂಗಾರ.

**ಶಾಂತಾ:**— ಹಂಗ ಸೈ. ಎಷ್ಟು ಮಾಡಿದ್ರೂ ನಿಮ್ಮ ಆಡೂದೇನು ತಪ್ಪೊ ಹಾಂಗಿಲ್ಲಾ. ನಿಮ್ಮ ಕಾಲೇಜ ಖರ್ಚು, ಅರಿವಿ ಖರ್ಚು, ಅಂಚಡೀ ಖರ್ಚು, ಫೀ ಖರ್ಚು, ಪುಸ್ತಕ ಖರ್ಚು ..........., ಮ್ಯಾಲೆ ನಿಮ್ಮ ಹಜಾ-ಮತಿಗೆ ಸುದ್ಧೆ ನಾಕಣೆ ಕೊಡಬೇಕು.

**ಶಾಮ:**— ಯಾರುಪಗಾರಕ್ಕ ಕೊಡತಾನು ಮಗಾ. ವರದಕ್ಷಿಣಿ ಬದಲು ಬಿ. ಎ. ತನಕಾ ಕಲಸತೀನಿ ಅಂದಾ, ಹೂಂ ಅಂತಂದೆ. ಈಗ ಬರಿ ಬಿ. ಎ. ಆದರೂ ಯಾರು ಮಾತಾಡಸಾಂಗಿಲ್ಲಾ. ವರ್ಷಾ ಸಾವಿರಾರು ಮಂದಿ ಬಿ. ಎ. ಆಗತಾರ. ಅದಕ್ಕ ವಿಲಾಯತಿಗೆ ಹೋಗಿ ಬರತೀನಿ. ಒಂದೆಂಟಹತ್ತ ಸಾವಿರ ರೂಪಾಯಿ ಬೇಕಂತ ಹೇಳು ........ ... ಮತ್ತ ಕಳ ಊಟದಾಗ ಸೆಟಗೊಂಡ ಕೂತದ್ದು — ಉಂಗರಾ, ಅಳೀತನಸಾಗಿಂದು—ರಿಸ್ಟ ವಾಚು....... ನೂಲ ಹುಣ್ಣಿವ್ಯಾಗಿಂದು — ಬೆಳ್ಳಿ ತಾಬಾಣಾ.... ಇಷ್ಟೆಲ್ಲಾ Dues, ಅವ ನಿಮ್ಮಪ್ಪನ ಮ್ಯಾಲೆ. ಮುಂದಿನ ತಿಂಗಳ ಅಂಬೂದರಾಗ ಎಲ್ಲಾ ಕ್ಲಿಯರ ಮಾಡಂತ ಹೇಳು.

**ಶಾಂತಾ:** — ಹೂಂ, ನಿಮ್ಮ ಹೊಟ್ಟಿಗೆ ಹಾಕಬೇಕು. ಮತ್ತ ಅದು ಕೊಡು, ಇದು ಕೊಡು ಅಂತ ಕರಕರಮಿಂಡ್ಯಾರ್ಥಂಗ ಇದ್ದದ್ದು.

**ಶಾಮು:**— ಮತ್ತ ಮದಿವಿ ಮಾಡಿಕೊಂಡಿದ್ದೇನು ಪುಕಟೇನು? ಮಗಳ್ನ ಕೊಟ್ಟಾನ, ಕೊಡತಾನ, ಕೊಡದಿದ್ದರ ದಾವೆ ಮಾಡಿ ತೊಗೋತೀನಿ.

**ಶಾಂತಾ:**— ಮೊನ್ನೆ ನಾಟಕದಾಗ ನೊಡ್ಲಿಲ್ಲ! ಅವಾ ಹೆಂಗ ಹೇಳ ತಿದ್ದಾ ವರದಕ್ಷಿಣಿ ತಗೋಬಾರದು ಅಂತ!

**ಶಾಮು:**— ನಾಟಕಾ ಬರದವನದೇನು ಗಂಟು ಹೋದೀತು! ಆ ಬರದವನನ್ನು ಕೇಳು ತಾ ಬಿಟ್ಟಿದ್ದನೋ ಹೆಂಗ? ನಾನೂ ಬರತೀನಿ ಹಂಗ. ಅಂದರೂ ಅದು ಖರೆ ಅಂತ ತಿಳಕೋಬೇಕೇನು? ಹೇಳಿಕೇಳಿ ನಾಟಕಾ.... ನಾಳೆ ನಿಮ್ಮಪ್ಪಗ ಛಲೋತ್ಯಾಗಿ Waring ಮಾಡು, ಲಗೂನ ಕ್ಲಿಯರ ಮಾಡಂತ.

**ಶಾಂತಾ:**— ಇಲ್ಲದಿದ್ದರ?

**ಶಾಮು:**— ಆಂ? ಇಲ್ಲದಿದ್ದರ ಇಲ್ಲದಿದ್ದರ ದಾವೇ ಮಾಡತೇನಿ. ನಿನಗ ಸೋಡಚೀಟಿ........ಅಲ್ಲಾ ದಾವೆ ಮಾಡತೀನಿ ಅಂದೆ.

**ಶಾಂತಾ:**— ಮತ್ತೇನ ಮಾಡತೀರಿ? (ಸಿಟ್ಟಿಗೇಳುವಳು)

**ಶಾಮು:**— ಹೂಂ........(ಸ್ವಗತ) ಸ್ಫೂರ್ತಿ ಬಂತು. ಪ್ರಸಂಗ ಮಾತ್ರ ಕಠಿಣ ಅದ. (ಪ್ರಕಾಶ) ಚನ್ನೆ, ಚಾಮುಂಡೆ, ಚೆಲುವನ್ನು ಸೂಸುವ ನಿನ್ನ ಆ ಮೊಗವು ಸಿಟ್ಟಿಗೆದ್ದರೂ ಒಂದು ಬಗೆಯ ಸೊಬಗನ್ನೇ ಸೂರೆ ಮಾಡುತ್ತವೆ. ಹುಬ್ಬುಗಂಟಿಕ್ಕಿದ ಆ ಕಣ್ಣುಗಳು ಪ್ರೇಮಾಮೃತದ ಮಳೆಯನ್ನೇ ಸುರಿಸುತ್ತವೆ. ಮೋಡದಂತಹ ಕಣ್ಣುಗಳಿಂದ ನಿನ್ನ ವಕ್ರ ನೋಟದ ಮಿಂಚು ಝಳಪಿಸುತ್ತಿರು ವಾಗ...........ಹೀಗೆಯೇ ನಿಲ್ಲು. ಕಾವ್ಯದಲ್ಲಿಯೇ ನಿನ್ನ ಚಿತ್ರವನ್ನು ಬರೆಯು ವೆನು.

ಮುಗುಳು ಮಾರಿಗೆ ರಾಗರೂಪಾ ರಮ್ಯವಾಗಿತ್ತ । ಆಗ ರಾತ್ರಿಯಾಗಿತ್ತ (ಸ್ವಗತ) ಎಲಾ! ಈಗಾರ ಹಗಲಾಗೇದಲಾ! ರಾತ್ರಿ ಬಿಟ್ಟರ ನಮ್ಮ Allitration ತಪ್ಪತದ! ಹೋಗಲಿ ಕವಿತಾ ಬರದಿಂದ ಎಷ್ಟೊತ್ತಾಗಿತ್ತು ಅಂತ ಯಾ ಮಗಾ ಕೇಳತಾನ. ಈಗ ಅಂಬಿಕಾತನಯದತ್ತರು, 'ಆಗ ಸಂಜೆಯಾಗಿತ್ತ' ಅಂತ ಬರದಾರ. ಆಗ ಸಂಜೀನ ಆಗಿತ್ತು ಅಂತ ಎದರ ಮ್ಯಾಲಿಂದ? ಸಂಜೇರಿಸ್ತ ಅದಕ್ಕ ಸಂಜ್ಯಾತು—ನಮ್ಮದು ರಮ್ಯಾಗೇವ ರಾತ್ರ್ಯಾತು(ಪ್ರಕಾಶ) ಇದೋ ಈ ನಿನ್ನ ಸಿಟ್ಟಿನ ಸಮಯವು ಈ ಕವಿಗೆ ಎಂತಹ ಸ್ಫೂರ್ತಿಯನ್ನು

ಕೊಟ್ಟಿತು ! ನೀನು ದಿದಾಲು ಹೀಗೆ ಸಿಟ್ಟಿಗೆದ್ದರೆ ನಾನೊಬ್ಬ ದೊಡ್ಡ ಕವಿ ಯಾಗಲಿಕ್ಕಿಲ್ಲನೆ ? ಹೆಸರು ಪಡೆಯಲಿಕ್ಕಿಲ್ಲವೆ ? ಶಾರದಾತನಯ ಶಾಮನೆಂದು ಅಳಸಿ ಶಾಂತಾನಾಥ ಶಾಮನೆಂದು ಇಟ್ಟುಕೊಳ್ಳುವೆನು. (ಸ್ವಗತ) ಈ ಹೆಂಗಸೂರ ಸಿಟ್ಟ ಹಿಡಿಯೂದು ಹಾವಿನ ಹೆಡಿ ಹಿಡಿಯೂದು ಒಂದ. ವೈದಿಕ ಬ್ರಾಂಬರ್ಗೆ ಔತಣಾ ಕೊಟ್ಟ ಹಂಗ ಪುರುಸತ್ತು ಇಲ್ಲದ (ಪ್ರಕಾಶ, ಹೇ ಪ್ರಪಂಡ ನಲ್ಲೆ, ನಿನ್ನ ಕೋಪಾಗ್ನಿಯು ಇನ್ನೂ ಶಾಂತವಾಗಲಿಲ್ಲವೆ ? ಹಾಗಾದರೆ ಈ ಕವಿಯು ತನ್ನ ಕಾವ್ಯವನ್ನು ಪೂರ್ತಿಗೊಳಿಸುವನು.

ಮುಗುಳು ಮಾರಿಗೆ ರಾಗರೂಪಾ ರಮ್ಯವಾಗಿತ್ತ ।
ಆಗ ರಾತ್ರಿಯಾಗಿತ್ತ ।
ತಲಿಯ ಅಂಚಿಗೆ ಸೀರೆಯ ಮುಸುಕು ಹ್ಯಾಂಗ ಬಿದ್ದಿತ್ತ ।
ಸಿಟ್ಟಿಗೆ ಹಿಂದಕ ಹಾರಿತ್ತ ।
ಪೂರ್ಣ ಚಂದ್ರನ ಕಮಲದ ಮೊಗವು ರೋಷವ ತಾಳಿತ್ತ ।
ರೋಷದ ಜೊನ್ನವ ಕಾರಿತ್ತ ।
ಸೊಗಸಿನಿಂದಲಿ ಸೋಗಿನ ಹೆಣ್ಣು ಎದುರಿಗೆ ನಿಂತಿತ್ತ ।
ಟಕಮಕ ನಲ್ಲನ ನೋಡತಿತ್ತ ।
ಕಾಮಿ-ಬೆಕ್ಕಿನ್ಹಂಗ ಬಾಮೆಯ ನಗೆಯು ಬಾಯಾಗ ಸುಳಿತಿತ್ತ ।
ಮತಮತ ಹಿಂದಕ ಉಳಿತಿತ ।

ಅಹಹಾ ! ಎಂಥಾ ಕಾವ್ಯ ರಚಿಸಿದೆ. ಇಂತಹ ಕವನವನ್ನು ಹೊರ-ಹೊಮ್ಮಿಸಲು ಸಹಾಯ ಮಾಡಿದ ನಿನಗೆ ನಾನು ತುಂಬಾ ಆಭಾರಿಯಾಗಿದ್ದೇನೆ. (ಸ್ವಗತ) ಈ ಸರತೆ ಇದನ್ನ 'ಮಿಸಲನಿಗೆ' ಕೊಟ್ಟು ಬಿಡ್ತೇನಿ, 'ನಲ್ಲೆಯ ಸಿಟ್ಟು' ಎಂಬ ಹೆಸರಿಟ್ಟು.

**ಶಾಂತಾ:**— ಹೌದು, ಬರೇ ತೋರಿಕೀ ಮಾತ ಆತು. ಮದಿವ್ಯಾಗಿ ಮೂರು ವರ್ಷಾದರೂ ಒಂದ ಸೀರಿ ತರೂದಾಗಲಿಲ್ಲಾ ನಿಮ್ಮ ಹಣೇಬರಕ್ಕ.

**ಶಾಮು:**— ನಮ್ಮ ಮನಿಗೆ ಬಂದರೂ ಆ ವೈದಿಕ ಬ್ರಾಂಬರ ಪಾಯಾ ಬಿಟ್ಟೇಯಿಲ್ಲೇನೂ ? ಸೀರೆಂತ ಸೀರಿ. ನಮ್ಮ ಆ ಕಾಲೇಜ ಲೇಡೀ ಸ್ಟೂಡಂಟ್ಸ

ನೋಡು. ಕೈಯಾಗ ಎರಡsು ಎರಡು ಲೆವ್ಹೆಂಡರು ಬಳಿ. ಒಂದು ಪಾತಳು, ಒಂದು ಬ್ಲೋವಜ.

**ಶಾಂತಾ:**— ಸಾಕು. ನಿಮ್ಮ ಕಾಲೇಜದಾಗಿನ ಹೆಂಗಸೂರ ಸುದ್ದೀ ತಗೀಬ್ಯಾಡಿರಿ. ಸರ್ಕೇಶ್ಯಾರಹಂಗ ಎಲ್ಲಾ ಹಸರ ಹಣೀಲೇನ ಬರತಾವ ಸುಡಲಿ.

**ಶ್ಯಾಮು:**— ನಾಯೇನು ಅವರ ಹಣೀ ನೋಡಂದೆನೇ ಎನ ಸಿಸ್ತು ನೋಡಂದೆನೆ ?

**ಶಾಂತಾ:**— ಯಾವಾಗ ನೋಡಿದರೂ ಇಂಥಾ ಹುಚ್ಚುಚ್ಚಾರದ ಮಾತ. (ಸಿಟ್ಟಿನ್ನು ಅಳಿಸಿ) ಅಲ್ಲಾ, ನೀವಿಷ್ಟು ಹಾಡ ಕಟ್ಟತಿನಿ ಅಂತೀರಿ, ನಾಳೆ ನಮ್ಮ ಅಬಚೀ ಮಗಳ ಲಗ್ನದಾಗ ಒಂದನಾಕು ಬೀಗರ ಹಾಡಾರ ಕಟ್ಟಿ ಕೊಡ್ರೆಲ್ಲಾ.

**ಶಾಮು:** — ಏನು ? ಬೀಗರ ಹಾಡು ಕಟ್ಟೋ ಕವಿನs ನಾ ? ........ ಅಲ್ಲಾ, ಹಾಡನ್ಯಾಗ ಬೈಯೂದರಕಿಂತಾ ಝುಳಾಝುಳಾ ಇದುರಿಗೇನ ಮಾತಾಡಿ ಬಿಟ್ಟರ ಹೆಚ್ಚು ಇಂಪ್ರೆಸಿವ್ ಆಗಲಿಕ್ಕಿಲ್ಲ ? " ನೀವು ಕೆಟ್ಟಿದ್ದೀರಿ, ನಿಮ್ಮ ಅಳಿಯ ಕರ್ರಗಿದ್ದಾನ, ನಿಮಗ ಅಡಗೀ ಮಾಡಲಿಕ್ಕೆ ಬರೂದುಲ್ಲಾ, ನಿಮ್ಮನ್ನ ಹೊಡೀತೀವಿ ಬಡೀತೀವಿ" ಅಂತ ಬೀಗರ ಹಾಡು ಅಂದರ ಏನ್ ಗಂಡಿನವರು ಹೆಣ್ಣಿನವರ ನಡುವೆ Scratch Match ಏನು ?

(ಒಳಗಿನಿಂದ 'ಶಾಮರಾವ' ಎಂದು ಕೂಗುವರು)

ಓ ಬಂದೆ. ಈ ಇಲೆಕ್ಶನ್ ಗೊಂದಲ ತೀರೂತನಕಾ ನಮ್ಮ ಸಂಸಾರೇನು ಸುಸೂತ್ರ ಸಾಗೂಹಂಗಿಲ್ಲಾ.

**ಶಾಂತಾ:**— ನಾ ಹೇಳಿದ್ದು ಲಕ್ಷಕ್ಕ ಬರಲಿಲ್ಲೇನು ?

**ಶಾಮು:**— ಬಂದದ, ಸ್ಫೂರ್ತಿ ಬಂದಾಗ ನೆನಪ ಮಾಡು.

[ ತೆರೆ ]

## ಪ್ರವೇಶ ೨.

(ಕಾಲೇಜ ಕ್ಯಾಫೇದ ದೃಶ್ಯ. ಬಸಂತ ಮತ್ತು ಅವನ ಗೆಳೆಯ ಕುಲಕರ್ಣಿ ಕುಳಿತಿರುವರು. ಹುಸೇನಿಯು ಟೇಬಲ್ ಸಾಫ ಮಾಡುತ್ತಿರುವನು ಬಸಂತ ಸೂಟಿನ ಉಡುಪಿನಲ್ಲಿರುವನು.)

**ಬಸಂತ:**— ಉಶ್ (ಉಸುಸುಗರೆಯುತ್ತ, ವಸ್ತ್ರದಿಂದ ಮುಖ ಒರಸಿಕೊಳ್ಳುತ್ತ) ಓಡ್ಯಾಡಿ ಓಡ್ಯಾಡಿ ಕಾಲು ಅಂಬೂವು ಸೋತ ಹೋದವು ಇಷ್ಟು ಓಡ್ಯಾಡಿದರೂ ಒಂದ ಇಪ್ಪತ್ತು ವ್ಹೋಟ್ಸ ಏನೂ ಸಿಗಲಿಲ್ಲಾ.

**ಕುಲಕರ್ಣಿ:**— ಆ ಇಪ್ಪತ್ತು ಮಂದ್ಯಾಗೂ ಖರೇ ಮನಸಲೆ ಹೂಂ ಅಂದವರು ಎಷ್ಟು ಮಂದ್ಯೊ ಏನೊ!

**ಬಸಂತ:**— ಅವಾ ಆ ಎಸ್. ಎಸ್. ಸಿಂತ ಕಾರಣೇನಂತ ಮಾಡಿದಿನೀ. ಬರೇ ನನ್ನ ಕೆಡಸಬೇಕು ಅಂಬು ಉದ್ದೇಶದಿಂದ ಸಿಂತಾನ ನೋಡು. ತಾ ಬರದಿದ್ದರೂ ಅಷ್ಟs ಹೋತು, ಬರುವವರನ್ನು ಬರಗುಡಸಬಾರದು. ಅಂತ.

**ಕುಲಕರ್ಣಿ:**— ಕ್ಯಾಂಡಿಡೇಟ್ಸ ಅರ ಎಷ್ಟು ಮಂದಿ ಇದ್ದಾರೊ?

**ಬಸಂತ:**— ಮಾರಾಯಾ, ಒಂದs ಒಂದ ಕ್ರಿಕೇಟ್‌ಗೆ............ ಒಂಭತ್ತ ಮಂದಿ. ನಿಂದರಲಿ, ಇಷ್ಟ ಮಂದ್ಯಾಗೂ ನಾ ಆರಿಸಿ ಬರದಿದ್ದರ ಈ ಗಂಡ ಮೀಸಿ ಯಾಕೆ! ನಾ ಬರದಿದ್ದರ ಮತ್ತ ಯಾರ ಬರಬೇಕೊ? (ಸಿಗರೇಟು ಹೊತ್ತಿರುವನುನು)

[ದೇಶಪಾಂಡೆ ಪ್ರವೇಶಿಸುವನು]

**ದೇಶಪಾಂಡೆ:**— ನಮಸ್ಕಾರರೀ ಮಿಸ್ಟರ ಬಸಂತ್

**ಬಸಂತ:**—ಇನ್ನಾರ ಒಂದಿಷ್ಟು ಗುಡ್ ಮಾರ್ನಿಂಗ್ ಅನ್ನಪಾ. ಕಾಲೇಜಿಗೆ ಬಂದಿ. ಆ ಹಾಯಸ್ಕೂಲ ಪಾಯಾ ಬಿಡುಇನ್ನ. ದೇಸಾವರೀ ಬೇಡಲಿಕ್ಕೆ ಬಂದಾವ್ರ ಹಂಗ ನಮಸ್ಕಾರ್ರೀ ಅಂತ. ಆಹಾಹಾಹಾ, ಈ ಧೋತ್ರಾ ಈ ಕೆರವು ಬಿಡಪಾ ಇನ್ನ. ನೋಡಲಾರೆ. ಯಾವಾಗ Adam and Eve ನ ಕಾಲಕ್ಕ ತೊಗೊಂಡಿದ್ಯೊ ಏನೊ!............ಸಿನೇಮಕ್ಕೇನು ನೆಲದ ತಿಕೀಟು ತೊಗೊಂಬುದ ಬಿಟ್ಟೀಯೋ?

**ಕುಲಕರ್ಣಿ**:— ಅಲ್ಲೊ ಬಸಂತಾ, ಕಾಲೇಜಿಗೆ ಬಂದ್ರ ಡೌಲು ಮಾಡ ಲಿಕ್ಕೆ ಬೇಕು ಅಂತ ರೂಲ ಎಲ್ಲಿ ಅದಪಾ ?

**ಬಸಂತ**:— ನಾ, ರೂಲಂತ ಇನಗ! ಅದೊಂದು Convention ಪಾ ಅದೊಂದು ಪ್ರೊಕ್ರ್ಯಾಲಿಟಿ ! ಹಂಗರ ನಮಗ ಹಾಯಸ್ಕೂಲಿನವರಿಗೆ ಡಿಫರನ್ಸ ಏನಪಾ. ಹೊಡೀಬೇಕ ನೋಡ ಚೈನಿ ! ಕಾಲೇಜ ಲಾಯಿಫ ಅಂದ್ರ ಏನಂತ ಮಾಡಿದಿ ? ‘ Paradise regained ’ !!

**ದೇಶಪಾಂಡೆ**:— ಇನ್ನೂ ಸೆರಳು ಬಿದ್ದಿಲ್ಲವಾ ತಮ್ಮಂಥವರದು.

**ಬಸಂತ**: —ಬಂದ ನೋಡಿರೆವಾ ಇವಾ ಸಾಕ್ರೇಟೀಸಾ (ಕುಲಕರ್ಣಿಗೆ) ಅಲ್ಲೊ ಕುಲಕರ್ಣಿ, ನಿನ್ನೆ ಐದ ಘಂಟೇದ ಕಡೆ ನಮ್ಮ ರೂಮಿಗೆ ಬರ್ತೀನಿ ಅಂದಿದ್ದಿ, ಬರಬಾರದೇನಪಾ ? I waited for you till six !

**ಕುಲಕರ್ಣಿ**:— ನಿನ್ನೆ ಗೊತ್ತಿಲ್ಲೇನು, ಗುರುವಾರ, ವರ್ಕಶಾಪು. ಆರರ ತನಕಾ ಮೊದಲೊಮ್ಮೆ ಎಕ್ಸಪಿರಿಮೆಂಟ ಮಾಡಿದ್ದೆ, ಆಮ್ಯಾಲ ಮತ್ತ Repeat it ಅಂತ ಕೊಟ್ಟ ಮಾರಾಯಾ.

**ಬಸಂತ**:— ಯೋಳೋ ನಿನ, ನಾ ಎಫ್. ವಾಯ್ ದಾಗಿದ್ದಾಗ ಒಂದಾರ ಎಕ್ಸಪಿರಿಮೆಂಟ್ ಮಾಡಿಲ್ಲಾ.

**ದೇಶಪಾಂಡೆ**:— ಅದ್ಹೆಂಗೋ ?

**ಬಸಂತ**:— ಇಷ್ಟ ತಿಳಿಯೂದುಲ್ಲೇನೊ ? ಪ್ಯೂನಗ ಒಂದ ಚಾರಣೆ ಒಗದರ ಜರ್ನಲ್ ಮನಿಗೆ ಒಯ್ಯಲಿಕ್ಕೆ ಕೊಡತಾನ. ರಾತ್ರಿ ಯಾವಾರ ಹಳೇ ಜರ್ನಲ್ ನೋಡಿ ಕಾಪಿ ಮಾಡಿ ಕೊಟ್ಟಬಿಟ್ಟರ ಆತವಾ. ಬಿದ್ದವ ಎಂಟೂ ವರಿ ಮಾರ್ಕ್ಸ! ಇನ್ನೂ ಇಷ್ಟs ಯಾಕವಾ, ಎಫ್ ವಾಯ್‌ದಾಗ ಮತ್ತು ಸಾಯನ್ಸ ಪೇಪರು white ಕೂಡದಿದ್ರ ನಕಂಡ ಕ್ಲಾಸ್ ಬರತಿದ್ದೆ ! ಹುಡು ಗನ್ನ ವರೀಲಿ ಅಂದ್ರ ಏನಂತ ಮಾಡೀವಿ ? ಇಂಗ್ಲೀಷ ಪೋಯಟ್ರಿ ಪೇಪರು ಮೊವಲs ಔಟ ಮಾಡಿದ್ದೆ, ನಾಎಂಥಾ ಮಗಾ!—ಬೇಕವಕ್ಕೂ Faculty !

**ದೇಶಪಾಂಡೆ**:— ಇಂಟರ ಯಾಕೊ ಯಾತ್ರಾ ನಡವಹಂಗ ಕಾಣಸ ತದ !

**ಬಸಂತ**: — Administration ದಾಗ ಐದ ಮಾರ್ಕ್ಸನ್ಯಾಗ ಹೋಯ್ತೋ ! ............ಆದ್ರೂ Logic Exemption ಅದ. ಈ ಸರತೆ

ಎಕ್ಸ ಆಗಿದ್ದರೂ ನಡೀತಿತ್ತು. ಮುದ್ದಾಂ ಈ ಇಲೆಕ್ಶನ್ ಕಾಲಾಗ ರೆಗ್ಯೂಲರ ಆಗೇನಿ. ಈಸರ್ತೆ ನಾವೊಂದು ಇಲೆಕ್ಟ ಆಗಿ ಬರಲಿ ಜಿಮಖಾನಾ ಫಂಡ ಲೂಟಲೂಟ ಮಾಡೋಣಂತ, ಯಾಕೊ ಕುಲಕರ್ಣಿ?

**ಕುಲಕರ್ಣಿ**: – ಮತ್ತಿನ್ನೇನು, ಕ್ಯಾಫೇದ ಆಮ್ಲೆಟು, ಡೆಕ್ಕನ್ ಟಾಕೀಜು, ಲಾರ್ಡ್ಸ ಹೇರಕಟಿಂಗ ಸಲೂನು!

**ದೇಶಪಾಂಡೆ**: – ನಮ್ಮಿಬ್ಬರಿಗೂ ಒಂದೊಂದು ರೇನಕೋಟ ಆಗ ಬೇಕಪಾ ಮತ್ತ. ಯಾರಿಗೆ ಗೊತ್ತು, ಆರಿಸಿ ಬಂದಿಂದ ನಮ್ಮನ್ನೇನ ಮಾತಾ ಡಸತೀಯೋ ಇಲ್ಲೊ. ನೀವೇನ ಕಸರತ್ತ ಮಾಡೀರೆಪಾ ಮಕ್ಕಳ, ಅಂದಿ ಅಂದರ ಆತಲ್ಲಾ ನಮವಸ್ಥ.

**ಕುಲಕರ್ಣಿ**:— ಫೀಸ್ಟಗೀಸ್ಟ ಇದ್ದಾಗ ನಾವೊಂದು ನಾಕೈದು ಗೆಸ್ಟ್ಸ ಕರಕೊಂಡು ಬರಾವ ನೋಡು.

**ದೇಶಪಾಂಡೆ**:— ಮತ್ತ ನೀ ರೊಕ್ಕಾಪಕ್ಕಾ ಉಳಿಸಿಗೊಂಡ್ರೊ ನಮ್ಮ ಮೂರು ಮಂದಿಗೆ ಗೊತ್ತಿರಲಿ. ಎರಡನೇದವರು watch ಇಟ್ಟಾರು!

**ಬಸಂತ**:— ಈಗ ಯಾಕ ಅದೆಲ್ಲಾ ಮಾತು. ಏನ ಮಾಡತೀನ್ಯೊ ಏನ ಬಿಡತೀನ್ಯೊ ನೋಡಿರಂತ........ಮೊದಲ ಸಧ್ಯಾ ಏನ Order ಕೊಡತಿ ಕೊಡಪಾ ದೇಶಪಾಂಡೆ.

**ದೇಶಪಾಂಡೆ**:— ನನಗ ಹಸಿವಿಲ್ಲೊ, ನೀವ ಏನಾರ ತೊಗೆಳ್ರಿ.

**ಕುಲಕರ್ಣಿ**:— ಯಾಕ, ಮನ್ಯಾಗೇನು ಹಸ್ತ ಮಡೀಲೆ ನೇವಿದ್ಯಾ ಇಡಬೇಕಾಗೇದೇನು.

**ಬಸಂತ**:— ನೀ Order ಮಾಡಿದರೂ ರೊಕ್ಕಾ ನಾ ಕೊಡತೀನಿ. ಹೇಳಪಾ ಘಾಬರಿ ಆಗಬ್ಯಾಡಾ. (**ಕುಲಕರ್ಣಿಗೆ**) ರೊಕ್ಕಂವರ ಬಡಕೊಂಡ ಸಾಮುತಾನ ನೋಡಪಾ ಕುಲಕರ್ಣಿ. (**ದೇಶಪಾಂಡೆಗೆ**) ಕಾಲೇಜಿಗೆ ಅರ ಯಾಕ ಬಂದಪಾ ಈ ಪರಿಯಿಂದ. ಎಲ್ಯಾರ ಶಿಕ್ಶನ್ ರಾಯಟರ ಆಗಬೇಕಾಗಿತ್ತು. (**ಕುಲಕರ್ಣೀಗೆ**) ನೋಡೋ, ಈ ಮಗಾ ಮ್ಯಾಟ್ರಿಕ್ ಪಾಸಾಗಿ ಆರ ತಿಂಗಳಾ ದರೂ ಒಂದಾರ ಟಿಫಿನ್ನು?

**ಕುಲಕರ್ಣಿ**:— ಹೋಗಲಿ ಬಿಡೊ ! ನಿನ್ನ ಕಿಮ್ಮತ್ತು ಅವಗೇನು ಬಂದೀತು. ಅಲಪಾ ಬಸಂತಾ, ನೀ ಇಲೆಕ್ಟ ಆದೀಅಂದ್ರ ಏನೇನ Functions ಆಗಬೇಕಾದದ್ದು ಎಲ್ಲಾ ಕರಾರ ಮಾಡಿಕೊ ಅಂತಾನಲ್ಲೊ ದೇಶಪಾಂಡೆ.

**ಬಸಂತ**:— ಕರಾರ ? ಯಾಕಪ್ಪಾ ಮಗನ, ಕರಾರ ಮಾಡಲಿಕ್ಕೆ ನಾಯೇನು ಟಾಂಗಾ ಹೊಡಿಯಾವ್ನ ? ಅಂಥವರ ಜೋಡೀ ಸುದ್ಧಾ ನಾ ಇನ್ನೂ ಒಮ್ಮೆಯೂ ಕರಾರ ಮಾಡಿಲ್ಲಾ. ಈ ಕನಡ ಸಾಲೀ ಮಾಸ್ತರರ ಹಂಗ ನೀ ಇನ್ನೂ ಆ ಪಾಯಾ ಬಿಟ್ಟೀ ಇಲ್ಲೇನು ? ಇಂಥಾವಕ್ಕೆಲ್ಲಾ ಕರಾರ ಮಾಡಿದರ ನಮ್ಮ ಡಿಗ್ನಿಟಿ ಏನ ಕೀಪಅಪ್ ಆದ ಹಂಗ ಆತೋ ? (ಹುಸೇನಿಗೆ) ಹುಸೇನಿ, (ಹುಸೇನಿಯು ಕ್ಲೀನಿಂಗದಲ್ಲಿಯೇ ಮಗ್ನ) ಯೇ ಹುಸೇನಿ !

**ಹುಸೇನಿ**:— (ಒಮ್ಮೆಲೆ ಕೆಲಸ ಬಿಟ್ಟು ಬಂದು) ರಾವಸಾಬ !

**ಬಸಂತ**:— ಒಂದು ಮೂರು ಆಮ್ಲೆಟ ತೊಗೊಂಡು ಬಾ. ಹಂಗ ಒಂದ ಮೂರು ಸ್ಪೆಶೆಲ್ ಚಹಾ ಆಗಲಿ.

**ಹುಸೇನಿ**:— ರಾವಸಾಬ ಮತ್ತೇನ ಕೊಡಲರಿ ? ತಾಜಾ ಕೇಕ, ಜಾಮುನ್, ಮೈಸೂರ ಪಾಕ, ಪುರಿ, ಬಾಸುಂದಿ.

**ದೇಶಪಾಂಡೆ**:— ಏನಾರ ಸೋವಿದರಾಗ ಹೇಳಪಾ ಖಾರದ್ದು.

**ಹುಸೇನಿ**:— ರಾವಸಾಬ್, ನಿಮ್ಮಂತಾವ್ರು ಹಿಂಗಂದರ ಹೆಂಗರೀ !

**ಬಸಂತ**:— ಹೂಂ, ಅವನ ಮಾತು ತೊಗೊಂಡೇನು ಮಾಡತೀಯೋ ತಂದಿಡು ಏನೇನ ತಾಜಾ ಅವ ಅವನ್ನ. ವೆಲ್‌ಕಮ್ ಹೊಟೆಲ್ ಅಂತ ತಿಳದಾ ನಿದನ್ನ.

**ಹುಸೇನಿ**:— (ಸ್ವಗತ) ಅನಬೇಕು ನಮ್ಮ ಬಸಂತರಾಯರು, ಸರದಾರ ಮನಶ್ಯಾರು, ಕೇಳಿದಾಗ ಖುಶಿ ಕೊಡತಾರ............(ಹೋಗುವನು)

**ದೇಶಪಾಂಡೆ**:— ಇವತ್ತ ನಮ್ಮ ಕ್ಲಾಸನ್ಯಾಗ ಭಾರಿ ಧಾಂದಲೆ ಹಾಕಿ ಬಿಟ್ಟರಪಾ ಹುಡುಗರು ಫಸ್ಟ Period ಗೆ

**ಕುಲಕರ್ಣಿ**:— ಯಾಕ, ಯಾರದಿತ್ತೊ ಫಸ್ಟ Period ?

**ಬಸಂತ**:— F. Y. ದ ಹುಡುಗರಿಗೆ ಯಾರ ಪಿರಿಯಡ್ ಏನೊ ! ನಾವಂತೂ ಅಳಿಸಿಕೊಡತಿದ್ದಿವಿ,, ಯಂಥಾ ಸಾಯನ್ಸ್ ಪಿರಿಯಡ್‌ನ್ಯಾಗ ಧಾಂದಲೆ ಹಾಕದೆ ಬಿಟ್ಟಾವನಲ್ಲಾ. ಲೆಕ್ಚರ ನಡದಾಗ ಇತ್ತ ಒಮ್ಮೊಮ್ಮೆ ಸ್ವಸ್ಥ ಮಲಗಿ ಬಿಡತಿದ್ದೆ. ಇಲ್ಲಿ ನೋಡು.ಟರ್ಮಿನಲ್‌ದಾಗ ಸಾಯನ್ಸ ಪೇಪರಿನ್ಯಾಗ 'ಕುಣಿಯೋಣು ಬಾರ' ಹಾಡ ಬರದು ಬಂದಿದ್ದೆ.

**ದೇಶಪಾಂಡೆ**:— ಅಲ್ರ್ಯೋ, ನೀವ ಧಾಂದ್ಲೆ ಹಾಕಿ ನೀವ ಮಿಶ್ಚೀಫ ಮಾಡಿದರ ನಿಮ್ಮ Study ಹಾಳಾಗತದೊ ಎನ ಪ್ರೊಫೆಸರರ Study ಹಾಳಾಗತದೊ ?

**ಕುಲಕರ್ಣಿ**:— ಅಲಾಲಾಲಾಲಾ! ಇವಾ ಏನ ಕಡಿಮಿ ಧಾಂದಲೆ ಹಾಕಾವಪ್ಪಾ ? ಯೇ, ಮತ್ತನ್ನ ಕಳ್ಳ ನೋಡು ನೀನು ! ಮೊನ್ನೆ ಅಲ್ಲೆ ಆ ಡೆಸ್ಕಿನ ಮ್ಯಾಲೆ ಏನೋ ಬರದಿದ್ದೆಲ್ಲಾ, ಅದೇನು ಕಡಿಮಿ ಧಾಂದ್ಲೆ ಏನು ?.... ರಾಯ್ರು ನಿನ್ನೆ ತಮ್ಮ ರೋಲ ಹೇಳೂದರಾಗ ನಾ ಸಿಗತಿದ್ದೆ ಗೊತ್ತದನ ? ಮತ್ತ ಮಿಶ್ಚೀಫ ಮಾಡದಿದ್ದರ ಬೀಳತಿತ್ತೇನು ತಮ್ಮ ರೋಲು ?

**ಬಸಂತ**: — ಅವಗೇನು ತಿಳೀಬೇಕ ಬಿಡೋ ಇಂಥಾವೆಲ್ಲಾ Politics ಉ.

**ದೇಶಪಾಂಡೆ**:— ಖರೇ ಅದ. ನೀವ ದೊಡ್ಡ Politicians ಉ ! ಇರಲ್ಯಪಾ............ಅಲ್ಲೊ ಬಸಂತಾ, ಲೇಡೀ ಸ್ಟೂಡಂಟ್ಸಗ್ಯೂ Canvass ಮಾಡೋಣಲಾ ?

**ಬಸಂತ**:— Oh! I have already. ಮತ್ತ ಈ ಸರ್ತೆ ನಮ್ಮ ಎಮಿಲಿ ವ್ಹೋಟ ನನಗ ಅಂತ ತಿಳಿ. ನಾ Elect ಆದ್ಮೇಲೆ Garlanding ಮಾಡಬೇಕಾದ ನಮ್ಮ ಎಮಿಲಿನ್ನ Forward ಮಾಡತಿನಿ.

**ಕುಲಕರ್ಣಿ**:— ವಾ! ಭಾಪ ಒಗದೀಯೇನ ಹಂಗಾರ ! Congratulations !

[ಹುಸೇನಿಯು ಆಮ್ಲೆಟು ಚಹಾ ತಂದಿಡುವನು.]

**ಬಸಂತ**:— (ಹುಸೇನಿಗೆ) ಒಂದ ಗೊಲ್ಡ್‌ಫ್ಲೇಕ ಪ್ಯಾಕು, ಒಂದ ಮೂರು ನಾಕು ಪಾನಪಟ್ಟಿ, ಎಷ್ಟಾಗ್ತದ ಹಚ್ಚು. ಮುಂದಿನ ತಿಂಗಳ ನೋಡುಣಂತ. ಹಿಂದಿಂದೇನು ಇಷ್ಟತ್ತ್ಯೋಳಿರಬೇಕಲ್ಲ ?

**ಹುಸೇನಿ:**— ಅಲ್ಲರೀ, ಇಪ್ಪತ್ತೈದು – ರಾವಸಾಬ್, ಹೆಚ್ಚಿಗಿ ಯಾಕ ಹೇಳೂಣ ಹೇಳ್ರಿ. (ಸ್ವಗತ) ಎನ ಮಂದೆಪಾ ಇದು! ಇಪ್ಪತ್ತಮೂರದು ಹಂತಾದು ಇಪ್ಪತ್ತೈೀಳೇನು ಅಂತಾರ!

**ಬಸಂತ:**— ನೋಡೋ ಕುಲಕರ್ಣಿ, Faithful ಅನಬೇಕು ನಮ್ಮ ಹುಸೇನೀನ. (ಹುಸೇನಿಗೆ) ಆತು ಇದಷ್ಟು ಹಚ್ಚು. (ಕಿಸೆ ಬಾಂಸಿಕೊಳ್ಳುತ್ತ. ಕುಲಕರ್ಣಿಗೆ) ಇವತ್ತ ನಮ್ಮ ಕಾಲೇಜ ಸಿಪಾಯಿಗೆ ಒಂದಾರಣೆ ಕೊಡಬೇಕಪಾ. ಒಂದ ತಿಂಗಳಾತು, ಆ ಮಗಾ ಸಲಾಮು ಹೊಡಿಯೂದ ಬಿಟ್ಟಾನೀಗ.

[ಹುಸೇನಿಯು ಸಿಗರೇಟು ಪಾನಪಟ್ಟಿ, ತಂದಿಡುವನು. ಎಲ್ಲರೂ ಹಾಕಿಕೊಂಡು]

**ದೇಶಪಾಂಡೆ:**— [ಕುಲಕರ್ಣಿಗೆ] ನಿನ್ನ ಕಡೆ 'One Act plays' ಇದ್ರ ಕೊಡಪಾ ಒಂದ ನಾಕ ದಿವಸ ಓದಿ ಕೊಡತಿನಿ.

**ಕುಲಕರ್ಣಿ:**— ಯೇಳೊ ನಿನ, ಅದನ್ನ ಕೊಳ್ಳುತ್ತಾರೇನು? ಹದಿನೈದ ಮಾರ್ಕ್ಸಿನ ಬುಕ್ಕದು.

**ದೇಶಪಾಂಡೆ:**— ಅಲ್ಲೊ, ಮತ್ತ ಮೊನ್ನೆ ನಿಮ್ಮ ಫಾದರ ಕಡೆಯಿಂದ ಎರಡು ರೂಪಾಯಿ ಇಸಗೊಂಡಿ 'One Act plays' ಗಂತ ಅದಕ್ಕ ಕೇಳಿದೆ.

**ಕುಲಕರ್ಣಿ:**— ನೀ ಯಲ್ಯೋ 18th century ದವ ಕಾಣಿಸತೀ ಬುಕ್ಕಿಗಂತ ರೊಕ್ಕಾ ಇಸಗೊಂಡಾಕ್ಷಣಕ್ಕೆ ತೊಗೊಂಡ ಬಿಡೂದೇನು? ಮೊನ್ನೆ ಮತ್ತ ಟಾಕೀಗೆ ಹೋಗಿ ಬರಲಿಲ್ಲೇನು?

**ಬಸಂತ:**— ಬರೇ ಉದ್ದಕ ಓದಿದರ ಸೆಕಂಡಕ್ಲಾಸ ಬರತಾರೇನೊ? ಆಂ, ದೇಶಪಾಂಡೆ? ಬೇಕದಕ್ಕೊ ಭಾಪು! ಇಲೆಕ್ಶನದಾಗ ಕಾಂಡಿಡೇಟ ಆಗಬೇಕು, ಗ್ಯಾದರಿಂಗಿನ್ಯಾಗ ಓಡ್ಯಾಡಬೇಕು, ಡಿಬೇಟನ್ಯಾಗ ಮಾತಾಡಬೇಕು, ನಾಟಕದಾಗ ಪಾರ್ಟ ಮಾಡಬೇಕು, ತಿಳಿತ. ಆ ಮ್ಯಾಲೇನು ಸೆಕಂಡ ಕ್ಲಾಸ ಬಿಟ್ಟು ಫಸ್ಟಕ್ಲಾಸ ಫಸ್ಟ ಬರಬಹುದು!

**ದೇಶಪಾಂಡೆ:**— ಹೊತ್ತಾತೊ (ಎಲ್ಲರೂ ಎದ್ದು ಮುಂದೆ ಬರುವರು.)

**ಬಸಂತ:**— ನೋಡ್ರೆಪಾ ಹಂಗರ ಇವತ್ತಿನಿಂದ ರಾತ್ರಿ ಅಷ್ಟು ಓಡ್ಯಾಡುಣ.

**ದೇಶಪಾಂಡೆ:**— ನಮಗ ನಿದ್ದೀ ಕಟ್ಟುದಾಗುದುಲ್ಲೊ. ಮೊದಲ ಅಜೀರ್ಣ ಪ್ರಕೃತಿ ಬ್ಯಾರೆ.

**ಬಸಂತ:**— ಚಹಾ ಕುಡಸ್ತಿನಿ ಬಾಪಾ ಥೋಂಗ ತಗೀಬ್ಯಾಡಾ.

**ಕುಲಕರ್ಣಿ:**— ಒಂದ ಯೇಳೆಂಟ ದಿವಸ ಓಡ್ಯಾಡೂಣಪಾ ಮತ್ತ ನಮ್ಮ ಬಸಂತನ ಕಾಲಾಗ.

**ದೇಶಪಾಂಡೆ:**— ನಿಮಗೊಂದು ನಾ ಬ್ರಾಂಬ್ರ ವ್ಹೊಟ್ಸ ಅಷ್ಟು ಕೊಡಿಸಿದರಾತಪಾ.

**ಬಸಂತ:**— ಹಂಗ ನಂಬಲಿಕ್ಕೆ ಬರೂದುಲ್ಲರ್ರೋ. ಆಯತಾ ವ್ಯಾಳ್ಯಾದಾಗ ವ್ಹೊಟ್ಸ ಎರಡನೇ ಕಡೆ ಬಡೀತಾವ. ಮತ್ತ ನಾ ನಮ್ಮ ಜಾತಿ Votes ಬಿಟ್ಟು ನಿಮ್ಮ ಜಾತಿ ಅವರ ವ್ಯಾಲೆ ಹೆಚ್ಚ ವಿಶ್ವಾಸ ಇಟ್ಟೇನಿ.

**ಕುಲಕರ್ಣಿ:**— ಜಗತ್ತಿನ್ಯಾಗ ಜಾತಿಯಲ್ಲಾ ಒಂದ ಮಾಡಬೇಕು ಅಂತ ಜನರು ನಡಸ್ಯಾರ; ಅಂಥಾದು ನಮ್ಮಲ್ಲೆ ಜಾತಿಜಾತಿಗೆ ಪಕ್ಷಪಾತಾ !

**ಬಸಂತ:**— ನಾವೇನು ನಮ್ಮ ಧರ್ಮದ ಸಲುವಾಗಿ ಬಡದಾಡತೆವೇನ ಬಿಡೊ. ಮತ್ತ ಜಾತಿಭೇದಾ ಮಾಡಬಾರದಂತ ನಿಮ್ಮ ಜಾತಿ ಅವ್ರ Votes ಗೆ ಕೈ ಹಾಕಿಲ್ಲೇನಪಾ ? ನೊಡ್ರಿಪಾ, ನನ್ನ ಲುಕ್ಸಾನ ಮಾಡಬ್ಯಾಡರಿ.

**ಕುಲಕರ್ಣಿ:**— ಅದರ ಕಾಳಜಿ ಬಿಡೊ. ನೀ ನಿಂತಿರಲಿಕ್ಕೆ ಎರಡನೆಯವರ ಛಾತೀಯೇನು ಬರೋದು..............ಅಲ್ಲೊ ಬಸಂತಾ, ಇವತ್ತ ಟಾಕೀ ಭಾಳ Fine ಇದಹಂಗ ಕಾಣಸ್ತದೊ.

**ಬಸಂತ:**— ಹಂಗರ ಇವತ್ತ ಕ್ಯಾಂಪ ಹಾಕೂಣಲ್ಲಾ.

**ಕುಲಕರ್ಣಿ:**— ನನ್ನ ಕಡೆ ಚಿಲ್ಲರಿಲ್ಲೊ. ನಿನ್ನ ಕಡೆ ಇದ್ದರ ಕೊಡು ಹಿಂದಾಗಡೆ ಕೊಡತಿನಿ.

**ಬಸಂತ:**— ಇಂಥಾ Tin-pot ಗೆಲ್ಲಾ ಕಡಾ ಕೇಳತಾರೇನೋ. ಅದರ ಕಾಳಜೀ ಯಾಕ ಬಾ ನೀ; — ಬಾಕ್ಸ ಸೀಟ ತಗಸೂಣಂತ.(**ಯಾರನ್ನೋ ನೋಡಿ ಒಮ್ಮೆಲೆ**) ಒಳ್ಳೇದು ನೋಡರಿಪಾ ಹಂಗರ...........ನಾಳೆ ಕಾಲೇಜದಾಗ ಭೆಟ್ಟಿ. [**ಲಗುಬಗೆಯಿಂದ ಹೋಗುವನು.**]

**ದೇಶಪಾಂಡೆ:**— ನೋಡದೇನೋ ಹೆಂಗ ಸೂಟಿಂಗ ಸ್ಟಾರ ಹೋದ ಹಂಗ ಹೋದಾ ನಮ್ಮ ಕಾಲೇಜ ಸ್ಟಾರ ನೋಡಿ? ಆ ಕೇಸು ಈ ಮಗ್ಗ Solid Vote ಹಾಕೂದೂ ಅಷ್ಟರಾಗ ಅದ.

(ಶಾಮನು ಪ್ರವೇಶಿಸುವನು.)

**ಕುಲಕರ್ಣಿ:**— (ಶಾಮುನಿಗೆ) ಗುಡ್ ಮಾರ್ನಿಂಗ ಮಿಸ್ಟರ ಶಾಮ-ರಾವ. ಮತ್ತೇನು, ಯತ್ತ ಹೊರಟಿತ್ತು ಸ್ವಾರಿ.

**ಶಾಮು**—: ನೋಡರಿ, ನಮ್ಮ Article ಅಂದರ ಕಿಮ್ಮತ್ತಿಲ್ಲಾ ಈ Editors ಗೆ! At least, ಜ್ಯೂನಿಯರ ಬಿ. ಎ. ದಾವಾ ಅಂತಾರ ಹಾಕ ಬಾರದ ನಮ್ಮ Article ಉ! ಹೋದ ತಿಂಗಳ ಕೊಟ್ಟದಿನಿ. ಎಷ್ಟ ದೈನಾಸ ಬಟ್ಟ ಹೇಳಿಕೊಂಡಿದ್ದೆ. ಹೂಂ, ಛಾಪಿಸೂಣಂತ ಅಂದಿದ್ದರು, ಅಂಥಾದು ಈಗ Deceive ಮಾಡಿದರು— Aristocratic Fellows!

**ಕುಲಕರ್ಣಿ:**— ಅದಕ್ಯಾಕ ಕಾಳಜಿ ಮಾಡತೀರಿ, ನಾ ಹಾಕಿಸಿ ಕೊಡ ತಿನಿ, ನಮ್ಮ ದೇಶಪಾಂಡೇನ Father ಅಲ್ಲೇ ವರ್ಕ ಮಾಡತಾರ.

**ದೇಶಪಾಂಡೆ:**- Oh yes! ಅಲ್ಬತ್ ಕೊಡ್ರಿ, ಯೋಗ್ಯ ಇದ್ದರ ಆವರ ಹಾಕತಾರ.

**ಶಾಮು:**— ಮತ್ತ ಯೋಗ್ಯ ಇದ್ರ ಅಂತಾರಲ್ಲಪಾ? ಯೋಗ್ಯರಲಿಕ್ಕಿಲ್ಲ ಮತ್ತ ನಮ್ಮ (ಪ್ರಕಾಶ) ಆ ಸಂಕೇತರೂಪಾ ಅಷ್ಟ ಬಿಟ್ಟು ಹ್ಯಾಂಗಾರ ಮಾಡಿ ಅಷ್ಟ ಹಾಕಿ ಕೊಡ್ರೆಪಾ, ನೀವು ಹೇಳಿದ್ದ ಕೇಳತೀನಿ.

**ಕುಲಕರ್ಣಿ:**—ಹಂಗಾರ ನೀವು ಕ್ರಿಕೆಟ್‌ಗೆ ಯಾರಿಗಾದರೂ Promise ಮಾಡೀರೇನು?

**ಶಾಮು:**— ಯಾಕ? ನಿಮ್ಮ ಪೈಕಿ ಯಾರಾರ ಇದ್ದಾರೇನು?

**ಕುಲಕರ್ಣಿ:**— ಹೂನರಿ, ನಮ್ಮ ಮಿಸ್ಟರ ಬಸಂತ ಅವರು ನಿಂತಾರ.... ಮತ್ತ ದಯಮಾಡಿ Kindly ತಮ್ಮ ವ್ಹೋಟ ಅಷ್ಟು ಹಾಕಬೇಕು.

**ಶಾಮು:** — ಛೇ ಛೇ ಛೇ, ಇದಕ್ಯಾಕಿಷ್ಟೊಂದು Adverbs? ಹಚ್ಚ ತೀರಿ. ಬಸಂತ ಅವರು ನಮಗೇನು ಆರೇದವರಲ್ಲಾ. ಮೊನ್ನೆ ಅಲ್ಲೆ ಜೋಶಿ

ಅವರ ರೂಮಿನ್ಯಾಗ ಕೂತಿದ್ದರು, ಗೊತ್ತದರಿ ........... Mr ಬಸಂತ ಅವರ ಭಾಳ Kind ಇದ್ದಾರ ನೋಡರಿ ...........(ದೇಶಪಾಂಡೆನಿಗೆ) ಮತ್ತ ನಮ್ಮ Article ಒಂದು ಮರೀಬ್ಯಾಡರವಾ.

**ದೇಶಪಾಂಡೆ**:— ಛೇ, ಇವತ್ತ ಸಂಜೀಮುಂದ ಹಸ್ತಪ್ರತಿ ಕೊಡಿರಿ, ನಾಳೆ ಮುಂಝೋನೆ ಫ್ರೂಫ ತೊಗೆಂಡು ಬಿಡಿರಿ.

**ಶಾಮು**:— Alright thank you in anticipation....Mr Deshpande, be cock sure -- I will Vote for Mr. Basant. (ಹೋಗುವನು.)

**ದೇಶಪಾಂಡೆ**:— ಇವಾ ಯಂಥಾ ಕವೀಪಾ.......... ಕವೀನೋ ಎನ ಕಪೀನೊ !

**ಕುಲಕರ್ಣಿ**:— ನಮದೇನು ಹೋದದ್ದೊ. ಹೂಂ ಅಂದ್ರಾತಪಾ, ನಮ್ಮ ಕೆಲಸಾಗಲಿಕ್ಕೆ...........ಮತ್ತ ನೀ ಕಡಿತನಕಾ ಬಸಂತನ ಸಾಯಡss ಹಿಡಿಯಾವ ಹೌದಲ್ಲೊ ?

**ದೇಶಪಾಂಡೆ**:— ಅವನ್ನ ಹೆಂಗ ಹೇಳಲಿ...........ಅಲ್ಲಪಾ ನಾವ್ಯಾ-ಕಿಷ್ಟು ಶ್ರಮಾ ತೊಗೊಂಡು Canvass ಮಾಡಬೇಕ ಬಿಡೊ; ಗೊತ್ತದ, ಬಸಂತನ ಟೆಂಡನ್ನಿ ಆಗೂತಂಕಾ ಅಷ್ಟ ಡುಬ್ಬಾ ಛಪ್ಪರಸತಾನ ಒಂದವ್ಯಾಳಾ ಇವನ ಆರಿಸಿ ಬಂದರ ಗ್ವಾಡಿವ್ಯಾಲೆ ಬಟ್ಟೆಟ್ಟೆ ಹೇಳತೆನವಾ -- ಈ ಮಗಾ ನಮ್ಮನ್ನ ಕಣ್ಣೆತ್ತಿ ಮಾತಾಡಿಸುದುಲ್ಲಾ.

**ಕುಲಕರ್ಣಿ**:— ಯಲ್ಲಾರ ಟೆಂಡನ್ನಿನೂ ಹಂಗ ಬಿಡೊ ! ಅವರ ಒಳಗಿನ Motives ಅ ಬ್ಯಾರೆ ಇರತಾವ. ಈಗ ನಮ್ಮ Case ತೊಗೊಳಪಾ. ನಾವು ನಾಟಕದಾಗ ಪಾರ್ಟಿ ಯಾಕ ತೊಗೊಂಡಿವಿ ?

**ದೇಶಪಾಂಡೆ**:— ಸಾಹಿತ್ಯ ಸೇವಾಕ್ಕ ! ರಂಗಭೂಮಿ ಸೇವಾಕ್ಕ !

**ಕುಲಕರ್ಣಿ**:— ಸಾಹಿತ್ಯಸೇವಾ ನೀಯೇನು ಮಾಡತಿ ನಿನ್ನತಲಿ. ನಾಟಕಾ ಬರದಾವಾ ಮಾಡತಿದ್ದಾನು. ರ್ಭಂಗಭೂಮಿ ಸೇವಾ ಅಂತೂ ಈ ಅಮೇಚೂರ ನಾಟಕದವರದು ಕಂಡದ್ದ ಅದ ! ಎಲ್ಲೆ ವರ್ಷಕ್ಕೊಮ್ಮೆ ನಾಟಕಾ ಮಾಡತಾರೊ ರಂಗಭೂಮಿ ಸೇವಾ ಅಂತ !

**ದೇಶಪಾಂಡೆ**:— ಹಂಗರ ನಾವು ನಾಟಕದಾಗ ಪಾರ್ಟ ತೊಗೊಂಬು ಉದ್ದೇಶರಾ ಏನು? ನಿದ್ದಿಗೆಟ್ಟು ನಾಟಕಾ ಮಾಡಬೇಕು. ಟಿಕೀಟ ಖರ್ಚ ಮಾಡಬೇಕು. ಮ್ಯಾಲೆ ವಸೂಲಾಗದಿದ್ದರ ಕೈಲೆ ಸೋಸಬೇಕು.

**ಕುಲಕರ್ಣಿ**:— ಸೋಸಬೇಕಪಾ ಮತ್ತ ಯಾರಿಚ್ಚಿ! ನಾಟಕದಾಗ ಪಾರ್ಟ ತೊಗೊಂಡರ ನೋಡುವವರ ಮ್ಯಾಲೆ ಛಾಪ ಒಗೀಲಿಕ್ಕೆ ಬರತದ!.... 'ಇರಲಿ, ಇವತ್ತ ರಾತ್ರಿ ಸಿನೇಮಾ ಪ್ರೊಗ್ರ್ಯಾಮು ಹ್ಯಾಂಗ Arrange ಮಾಡಿದ್ದೆ' ಲಗೂ ಬಾ ಮತ್ತ. (ಹೋಗುವರು)

## ಪ್ರವೇಶ ೩.

[ಶಾಮುನ ಮನೆ. ಶಾಮುನು ಓದುತ್ತಾ-ಎಸ್. ಎಸ್. ಮತ್ತು ಪಾಟೀಲ ಬರುವರು.]

**ಶಾಮು**: — ಬರ್ರಿ. ಬರ್ರಿ.

(ಎಸ್. ಎಸ್ ಮತ್ತು ಪಾಟೀಲ ಕೂಡುವರು.)

**ಎಸ್. ಎಸ್**.:—ನೊಡರೆಪ್ಪಾ. ಮರೀಬ್ಯಾಡರಿ.ಮುಂದ ನಮ್ಮಿಂದೇನಾರ ಫಾಯದೆ ಆಗಬಹುದು. ಅವಾ ದೇಸಾಯಿ ಇದ್ದಾನಲ್ಲರಿ, ಮೊನ್ನೆ ನಮ್ಮ Application ಕ್ಕ ಸೆಕಂಡ ಮಾಡಿದ್ದಾ, ಅಂಥಾದು ನಿನ್ನಿನ ದಿವಸ ಮುದ್ದಾಂ ನನ್ನ ಕೆಡಿಸಲಿಕ್ಕೆ ತಾನ Candidate ಆಗ್ಯಾನ.

**ಶಾಮು**:— ಬಿಡ್ರಿ, ಅಂಥಾವರೆಲ್ಲಾ ಬಂದರ, ಮತ್ತ ಇಲೆಕ್ಶನ್ ಅನಬೇಕ್ಯಾಕದಕ್ಕ?

**ಪಾಟೀಲ**:— ತಮ್ಮ Poem ಕ್ಯಾನರೀಜ ಎಡಿಟರ ಕೈಯಾಗ ಕೊಟ್ಟನಿ. By all means ಹಾಕತೀನಿ ಅಂದಾನ.

**ಎಸ್. ಎಸ್**.:— ಅವಾ ಒಂದಷ ಕವಿತಾ ಹಾಕದಿದ್ದರ ಅವನ ಎಡಿಟರ ಶಿಪ್ ಕಿತ್ತಿ ಒಗಸೂಣಂತ; ಮತ್ತ ಬಸಂತಗ ಪ್ರಾಮಿಜ ಮಾಡಿಲ್ಲ ಹೌದಲ್ಲೊ.

**ಶಾಮು**:— ಛೆ, ಅವಗ್ಯಾರು ಹಾಕಬೇಕರಿ Aristocratic fellow

**ಪಾಟೀಲ**: — ತಮ್ಮ "ನೆಲ್ಲಿಯ ಸಿಟ್ಟು" ಭಾಳ Fine ಆಗೇದ ನೋಡರಿ. (ಸ್ವಗತ) ಯಾ ಮಗಾ ಓದ್ಯಾನ ಅದನ್ನ.

**ಶಾಮು:**— ಏನೋ ಇನ್ನೂ ಬಡಿಂಗ ವೋಯೆಟ್ಸ ಇದೀವ್ರಿರೆಪಾ.

**ಪಾಟೀಲ:**— ನೋಡಪಾ ಹಂಗರ ನಮ್ಮ ಸೈಕಿ ಅವನ ನೀನು.

**ಎಸ್ ಎಸ್.:**— (ಪಾಟೀಲನ ಕಿವಿಯಲ್ಲಿ) ಬಹುವಚನದಿಂದ ಕರಿಯೊ! ದಿಮುಸೂ ರೀತಿ ಸುದ್ಧಾ ಗೊತ್ತಿಲ್ಲಲಾ.

**ಪಾಟೀಲ:** — ಛೇ, ನಾನೂ ಶಾಮಾ ಸಾಲೀ ಗೆಳೆಯಾರೊ. ಯಾಕೋ Fifth ದಾಗ ನಾನs ನಿನಗ ಸಂಸ್ಕೃತ ಕಾಪಿ ಕೊಟ್ಟದ್ದಿಲ್ಲಾ. ?

**ಶಾಮು:**— ಹೌದರಿ, ನಿಮ್ಮದ ಪುಣ್ಯಾ ನಾ–ಪಾ–ಸಾ–ದ–ದ್ದು.

**ಎಸ್. ಎಸ್.:**— ಮರೀಬ್ಯಾಡಿರೆಪಾ, ಇದ ಕಡೀಸರತೆ ಹೇಳೂದು.

**ಶಾಮು:**— ಹೆಚ್ಚಾಗಿ ಇನ್ನೇನ ಹೇಳ್ರಿಪಾ, ಬೇಕಾರ ನನ್ನ ವ್ಹೋಟಿಂಗ ಶೀಟ ನಿಮ್ಮ ಕೈಯಾಗ ಕೊಟ್ಟ ಬಿಡತೀನಿ. ನೀವ ಹಕ್ಕೊಳ್ಳಿರಿ.

**ಎಸ್. ಎಸ್.:**— ಛೆ. ಹಂಗ ರೂಲ ಇಲ್ಲರಿ. ಆದರೂ ಇಷ್ಟ ಖಾತ್ರಿಯಿಂದ ಹೇಳತಿದಿ ಅಂದವ್ಯಾಲೆ, I thank you.

**ಶಾಮು:**— ಮತ್ತ ನನ್ನ ಬಿನ್ನಹಾ ಒಂದ ಮರೀಬ್ಯಾಡ್ರಿಪಾ.

**ಪಾಟೀಲ:**— ಯುಷ್ಟ ಹೇಳಬೇಕವಾ ಇನ್ನ. ಮಿಸಲನಿ ನೋಡಿಂದನ ನಮ್ಮನ್ನ ಮಾತಾಡಸು. ಮತ್ತಿನ್ನೇನು !

**ಎಸ್ ಎಸ್:** - ನಡೀಪಾ ಪಾಟೀಲಾ (ಶಾಮುಸಿಗೆ) ಗುಡ್ ನೈಟ್.

(ಎಸ್. ಎಸ್. ಮತ್ತು ಪಾಟೀಲ ಹೊರಡವಷ್ಟರಲ್ಲಿ ಬಸಂತ, ಕುಲಕರ್ಣಿ, ದೇಶಪಾಂಡೆ ಪ್ರವೇಶಿಸುವರು. ಬಸಂತನು, ಎಸ್. ಎಸ್. ಪಾಟೀಲ ಇವರು ಬಂದದ್ದನ್ನು ತನ್ನ ಗೆಳೆಯರಿಗೆ ಸನ್ನೆಯಿಂದ ತಿಳಿಸುವನು )

**ಶಾಮು:**— (ಸ್ವಗತ) ಇದೇನ ಬಂತವಾ ನನ್ನ ಸುತ್ತ ! ಅಡಕೊತ್ತಿನ್ಯಾಗಿನ ಅಡಿಕಿ ಆದೆನಲ್ಲಾ ! (ಪ್ರಕಾಶ) ಒಳ್ಳೇದರಿ, Mr. ಎಸ್. ಎಸ್. (Dont care ಎಂದು ಎಸ್. ಎಸ್ ನ ಕಿವಿಯಲ್ಲಿ ಹೇಳುವನು. ಎಸ್. ಎಸ್. ಮತ್ತು ಪಾಟೀಲ ಹೋಗುವರು. ಹೋಗುವ ಮುಂದೆ ಇಬ್ಬರೂ ಬಸಂತನನ್ನೂ ಅವನ ಗೆಳೆಯರನ್ನೂ ದುರುದುರನೆ ನೋಡುವರು.)

**ಕುಲಕರ್ಣಿ:**— ಯಾಕರೆಪಾ, ನಿನ್ನೆ ನಿಮ್ಮ ಲೇಖ ಪ್ರಿಂಟ ಮಾಡ ಲಿಕ್ಕೆ ಕೊಟ್ಟ ಬಂದದ್ದರ ಉಪಕಾರೇನಿಮು ?

**ಶಾಮು:**— (ಆನಂದದಿಂದ) ಆಂ ? ಕೊಟ್ಟ ಬಂದರೇನು ಛಾಪಸಲಿಕ್ಕೆ?

**ದೇಶಪಾಂಡೆ:**— ನೀವು ಹಂಗರ ಎಸ್. ಎಸ್.ಗ ಪ್ರಾಮೀಜ ಮಾಡಿ ದರಿ, ಹೌದಲ್ಲೊ ?

**ಶಾಮು:**— ಏಳರೀ, ನಿಮು. ಇಂಥವರಿಗೆಲ್ಲಾ ವ್ಹೋಟ ಹಾಕಿದರ ತೀರಿ ತಲಾ. ಅವನ ಮಾರೀ ಮುಂದ ಹೂಂ ಅಂದರೂ ನಾ ಹಾಕೂದು ಬಸಂತಗ !

**ಕುಲಕರ್ಣಿ:**— ಬರೇ ನಿಮ್ಮ Article ಪ್ರಿಂಟ ಆಗತದಂತ ನಮ್ಮ ಮಾರಿಮುಂದ ಹೂಂ ಅನಬ್ಯಾಡರಿ, ಏನಂಬೂದು 'Openheatedly' ಹೇಳಿಬಿಡರಿ, ನಾವೇನು ಸಿಟ್ಟಿಗೆ ಬರೂದುಲ್ಲಾ.

**ಶಾಮು:**— ಹೆಚ್ಚಿಗೆ ಇನ್ನೇನ ಹೇಳರೆಪಾ, ಬೇಕಾರ ನನ್ನ ವ್ಹೋಟಿಂಗ ಶೀಟ ನಿಮ್ಮ ಕೈಯಾಗ ಬಿಡತಿನಿ. ನೀವ ಹಕ್ಕೊಳ್ಳರಿ ಮತ್ತಿನ್ನೇನು.

**ಕುಲಕರ್ಣಿ:**— ಅಲ್ಲಾ, ಛಬ್ಬರ ವ್ಹೋಟಿಂಗ-ಶೀಟಿನ ಮ್ಯಾಲೆ ಇನ್ನೊಬ್ಬರು ಬರಿಯೂ ಅಧಿಕಾರಿಲ್ಲಾ ಅಂತ ಅಷ್ಟು ಧೈರ್ಯದಲೆ ಹೇಳ ಬ್ಯಾಡರಿ. ನಾವು ಅದನ್ನೂ ಮಾಡಿವಿ.

**ಶಾಮು:**— ಇಲ್ಲಿ ನೋಡ್ರಿ, ಒಮ್ಮೆ ಪ್ರಾಮಿಜ ಮಾಡಿದೆನೆಂದರೆ ನಾಲಿಗಿ ಹೊಳ್ಳಸಾವಲ್ಲನಾ — ಅಗ್ನಿ ಸಾಕ್ಷಿ ಆಗಿ ಮಾಡಿದಹಂಗ !

**ಕುಲಕರ್ಣಿ:**— ಹನ್ನೆರಡಪ್ಪೈದ ಆಣಿರಿ ಇವೆಲ್ಲಾ !

**ಬಸಂತ:**— ಅವಾ ಹಂಗ ಮಾಡವಲ್ಲ ನಡಿಯೋ ಕುಲಕರ್ಣಿ, ನಾನು ಅವಾ ಇಂಟರ ಫಸ್ಟ ಇಯುರ ಕೂತೇ ಕಲಿತೇವಿ............ಯಾಕೊ ಶಾಮಾ ? ಮತ್ತ ನೋಡಪಾ ಇನ್ನು ಬರೂದಾಗೂದಿಲ್ಲಾ, ಮರೀಬ್ಯಾಡಾ.

**ಶಾಮು:**— ಅಲ್ಲಾ, ನೀವು ಸುಳ್ಳ ಇಲ್ಲಿತನಕಾ ತೇಕುತ್ತಾ ಯಾಕ ಬಂಧರಿ, ಅಂತಿನಿ. ಅಷ್ಟ ಭರೋಸಿಲ್ಲ ? (**ದೇಶಪಾಂಡೆಗೆ**) ಮತ್ತ ನಮ್ಮ ಲೇಖಾ ಒಂದ ಛಾಪಿಸಲಿಕ್ಕೆ ಮರೀಬಾಡರೆವಾ, ಏನೋ ಬಹಳ ಒತ್ತಾಯ ಮಾಡತಿನಿ ಅಂತ ಸಿಟ್ಟಗೇಳಬ್ಯಾಡರಿ.

**ದೇಶಪಾಂಡೆ:**— ನಾ ಹೆಚ್ಚಿಗೆ ಹೇಳೂದುಲ್ಲಾ. ಆ ಮ್ಯಾಗಝಿನ ಬಂದಿಂದನ ನೋಡಿಕೊಳ್ಳರಿ, ಛಾಪಿಸೇದೊ ಇಲ್ಲೊ ಅಂಬೂದು.

**ಬಸಂತ:**— ಅಲ್ಲೊ ಶಾಮಾ, ನಿನ್ನ ಒಟ್ಟ Works ಅಂಬೂವು ಎಷ್ಟವ ಎಲ್ಲಾ ಕೊಟ್ಟುಬಿಡು. ಒಂದ ಫಸ್ಟಕ್ಲಾಸ ಪ್ರಿಫೇಸ ಹಾಕಿಸಿ ಪ್ರಿಂಟ ಮಾಡಿಸಿ ಕೊಡತಿನಿ.

**ಶಾಮು:**— ಅಷ್ಟ ಮಾಡಿದರ I will be ever indebted to you. ನನ್ನ ವರ್ಕ್ಸ್ಗ ಏನೋ ಒಂದ ಎರಡಮೂರು Volumes ಆಗ ಬಹುದು, ಇಷ್ಟ.

**ಬಸಂತ:**— ಬೇಕಾದಷ್ಟಿರಲ್ಯೋ, Dont care ! ನೋಡಪಾ. ಹೋಗತೀವಿ ಹಂಗಾರ, ಗುಡ್‌ನಾಯಿಟ್.

**ದೇಶಪಾಂಡೆ:**— ನೋಡರಿ, ನಿಮ್ಮ ಲೇಖಾ ಒಂದ ನಾಕ ಮಂದಿ ಓದಬೇಕ ಅಂತ ಆಶಾ ಇದ್ದರ............(ಹೋಗುವರು.)

**ಶಾಮು:**— (ಆನಂದದಿಂದ) ಈ ಕವಿಯು ಚಿರಸಾಹಿತಿಯಾದನು......... ಯೇ ಕವಿಯ ಹೆಂಡತಿಯೇ...........

(ಶಾಂತಾ ಪ್ರವೇಶಿಸುವಳು.)

**ಶಾಮು:**—ಮೊದಲ ಸಥ್ಥ್ಯಾ. ನಿಮ್ಮಪ್ಪಗ ಒಂದ ಕಾಯಿ ಒಂಡಿಸಿಕೊಂಡ ಬಾ ಅನ್ನು. ಕಾಯಿ ಆಣೆ ಬೇಕಾರ ನಾ ಕೊಡತೇನಿ.

**ಶಾಂತಾ:** — ಯಾಕ ?

**ಶಾಮು:**— ಹಂಗ ಮತಕ್ಕೊ ಒಂದು ಒಡಿಸಿಕೊಂಡು ಬಾ ಅನ್ನು.

**ಶಾಂತಾ:**— (ಅನಂದದಿಂದ) ಯಾಕ, ಲಾಟ್ರಿಗೀಟ್ರಿ ಹತ್ತಿತೇನು ?

**ಶಾಮು:**— ಇವತ್ತಿನ ದಿವಸ ನನ್ನ ಜೀವನದಲ್ಲಿ ಕ್ರಾಂತಿ !

**ಶಾಂತಾ:**— ಯಾಕ ? ಏನು ?

**ಶಾಮು:**— ನಾ ಮೊದಲ ಹೇಳಿಲ್ಲ ! ಹೊರಗ ಹೋಗುಮುಂದ ನಾಯಿ ಬಾಲಾ ಝಾಡಿಸಿತು. ಶುಭಾ ಅಂತ.

**ಶಾಂತಾ:**— ಏನಾಗೇದೀಗ ಶುಭಾ ಅನ್ನಲಿಕ್ಕೆ ?

**ಶಾಮು:**— ಉದ್ಯೋಗದಲ್ಲಿ ಪ್ರಗತಿ ಅಂತ ವಾರದ ಭವಿಷ್ಯದಾಗ ಬಂದಿದ್ದಿಲ್ಲ, ಖರೇ ಬಂತು ನೋಡದು !

**ಶಾಂತಾ:** – ನೌಕರೀ ಹತ್ತಿತೇನ ಹಂಗರ ?

**ಶಾಮು:**— ನನ್ನ ಕವಿತಾ, ನನ್ನ ಲೇಖ ಸ್ವೀಕಾರ ಆದವು. ನೀನು ಇನ್ನುಮುಂದ ನನಗ ಕವಿರಾಜ, ಇಲ್ಲವೆ ರಾಜಕವಿಯೆಂದು ಕರೆಯತಕ್ಕದ್ದು. ನಾನು, ಅಂದರ ಉತ್ತಮಪುರುಷ, ಸರ್ವನಾಮ, ಪುಲ್ಲಿಂಗ, ಏಕವಚನ, ಪ್ರಥಮಾ ವಿಭಕ್ತಿಯಾದ ನಾನು, ಈ ಕವಿಯ ಹೆಂಡತಿಯ ಗಂಡ........ನಿಮ್ಮ-ಪ್ಪನು ಈ ಕವಿಯ ಮಾವ, ನಿಮ್ಮವ್ವನು........ Sorry, ನಿಮ್ಮವ್ವ, ಇಲ್ಲಲ್ಲ. ನೀನು—ನನ್ನ ಹೆಂಡತಿ. ನನ್ನ ಅಡ್ಡ ಹೆಸರು ಇನ್ನ 'ಕವಿ' ಅಂತ ಮಾಡಿಕೋತೇನಿ........ಪ್ರೀಯೆ, ನನ್ನ ಅರಸುಗಿಳಿಯೇ, ಸಮಾಸದಿಂದ ಅರಗಿಳಿಯೇ, ಈ ನಿನ್ನ ಕವಿಗೆ ಹೆಚ್ಚಾಗಿ ಸ್ಫೂರ್ತಿ ಬರುವಂತೆ, ಒಂದೇ ಒಂದನ್ನ........ಕೊಡು !

**ಶಾಂತಾ:**— ಏನದು ಕೊಡ್ಲೂದು ? ನಮ್ಮಪ್ಪ ರೊಕ್ಕಿಲ್ಲದ ಗೋಳ್ಯಾಡತಾನ. ಸದಾ ಕೊಡೂ ಕೊಡು.

**ಶಾಮು:**— ತಲೀನ ಇಲ್ಲಿದಕ್ಕ ! ಹೆಂಗಸೂರ್ಗೆ ಫಿಮೇಲ ಎಜ್ಯುಕೇಶನ್ ಯಾಕ Necessary ಅಂದರ ಇದಕ್ಕs. ನಾ ಶ್ಲೇಷದಿಂದ ಗುಪ್ತಿಟ್ಟು ಅಂದ್ರ್ಯೂ, ಕವಿಯ ಹೆಂಡತಿಯಾದ ನಿನಗ ಅಷ್ಟ ತಿಳಿಬಾರದ ?.............. ನೀರಡಸಿ ಬಂದ ಈ ಭೃಂಗಕ್ಕೆ ತಾವರೆಯಾದ ನೀನು ನಿನ್ನ ಮುತ್ತಿನ ಮಧುವನ್ನು ಕೊಡು. ಚನ್ನೆ, ನೀನು ಇನ್ನಷ್ಟು ಚಲುವೆಯಾಕಾಗಲಿಲ್ಲಾ ! ಇರಲಿ, ಚೆಲುವು ಇರದಿದ್ದರೂ ಕೂಡ ಕುರೂಪದಲ್ಲಿಯೇ ಚೆಲುವಿನ ರೂಪ ತೆಗೆಯುವರು ಕವಿಗಳು. ಸೌಂದರ್ಯದ ಸೆಲೆಯನ್ನು ಹುಡುಕುವರು. ಕವಿತೆಯ ಕಾರಂಜಿಯನ್ನು ಪುಟಿಸುವರು. ಪ್ರತಿಭೆಯ ತುಂತುರಗಳನ್ನು................ ಇಲ್ಲಿ ನೋಡು; ನಾಳೆ ನಿಮ್ಮಪ್ಪಗ ಒಂದ ಛಾಪಗಾನಿ ತಗದಕೊಡನ್ನು ! ಯಾರುಸಗಾರಕ್ಕ ಕೊಡಸತಾನ ಮಗಾ. I desearve publication. ನಾ ಇಂಥಾ ದೊಡ್ಡ ಕವಿ ಆದದ್ದು ಹೆಚ್ಚೊ, ಅವಾ ಸೊಟ್ಟೊಂದು ಛಾಪಗಾನಿ ಕೊಡಸೂದ ಹೆಚ್ಚಿನದೊ ?

**ಶಾಂತಾ:**— ಒಂದ ಛಾಪಗಾನೀನ ಸಾಕೇನು? ಒಂದ ವಿಮಾನ ಬೇಕಂತ ಹೇಳರೆಲ್ಲಾ.

**ಶಾಮು:**— ಈ ಕವಿಗೆ ವಿಚಾರದ ವಿಮಾನ ಇರತಿರಲಿಕ್ಕಾಗಿ ಬೇರೊಂದು ವಿಮಾನ ಬೇಡಾ. (ಸ್ವಗತ) ಕೊಟ್ಟರೂ ಅಡ್ಡಿಯಿಲ್ಲಾ. (ಪ್ರಕಾಶ) ಈ ಕವಿಯು ವಿಚಾರದ ವಿಮಾನದಲ್ಲಿ ತಿರುಗಾಡುವನು. ವಿಚಾರದ ತರಂಗಿಣಿಯಲ್ಲಿ ಈಜಾಡುವನು. ವಿಚಾರದ ಶಯ್ಯೆಯಲ್ಲಿ ಕನಸು ಕಾಣುವನು. ಸಂಸಾರದ ಅಘೋರ ಸಮಸ್ಯೆಗಳನ್ನು ಹುಡುಕುವನು, ತಿಳಿಯಿತೆ ಈ ನಿನ್ನ ಕವಿರಾಜನು!

**ಶಾಂತಾ:**— ಏನ ಕವಿನೊ! ಏನ ಕಪಿನೊ!

**ಶಾಮು:**— ಕಪಿಯಾದರೆ ಈ ಕವಿಯು ಹನುಮಂತನಾಗುವನು. ಕವಿತೆಯ ಬಾಲದಿಂದ ಎಲ್ಲರ ಮನಸ್ಸನ್ನು ಮೋಹಿಸುವನು.

**ಶಾಂತಾ:**— ಸಾಕು, ಬರಬರತ ಹುಚ್ಚು ಹಿಡೀತದೋ ಏನ ಮಣ್ಣು.

**ಶಾಮು:**— ಹುಚ್ಚು ಹಿಡಿದರೆ ಹುಚ್ಚರ ಆಸ್ಪತ್ರಿಗೆ ಹೋಗುವೆನು. ಅಲ್ಲಿಯ ಹುಚ್ಚರನ್ನು ಕವಿಗಳನ್ನಾಗಿ ಮಾಡುವೆನು. ಕವಿಗಳು ಹುಚ್ಚು ಹಿಡಿದರೇನೇ ಕವಿತೆ ಕಟ್ಟುವರು.

**ಶಾಂತಾ:**— ಬರೇ ಹುಚ್ಚುಚ್ಚಾರಧ ಮಾತ ಆಯ್ತಲ್ಲಾ. ಸಂಜೆಗೆ ಕಾಯಿಸಲ್ಯಾ ಏನಾರ ತಂದೀರೊ!

**ಶಾಮು:**— ಇಕಾ, ನಿಮ್ಮಪ್ಪನ ಗಂಟಿಗಿಂಟಿ ತಿಂದಿಲ್ಲಾ. ತಾನ ತರತಾನ ಮಗಾ ಬೇಕಾರ. ಯಾರುಪಗಾರಕ್ಕ ತರತಾನ. ಹಣ್ಣ ಕೊಟ್ಟ ತಪ್ಪಿಗೆ ತರಬೇಕ ಮತ್ತ.

**ಶಾಂತಾ:**— ಸಾಕು ಗಪ್ಪಾಗಿರಿ. ಇಲ್ಲೇ ನಡಮನ್ಯಾಗ ಕೂತಾನ ಅಪ್ಪಾ.

**ಶಾಮು:**— (ಗಾಬರಿಯಿಂದ) ಆಂ?

[ ತೆರೆ ]

## ಪ್ರವೇಶ ೪. [ ಇಲೆಕ್ಶನ್ ಮುಗಿದ ನಂತರ ]

(ಕುಲಕರ್ಣಿ ಮತ್ತು ದೇಶಪಾಂಡೆ ಪ್ರವೇಶಿಸುವರು)

**ಕುಲಕರ್ಣಿ:**— ಕಾಲೇಜದಾಗ ಇಲೆಕ್ಶನ್ ಒಂದು ಯಾಕ ಇಟ್ಟಿದ್ದಾರಪಾ. ಕಾಲೇಜ ಸುರುವಾಗು ಸುಗಸತಿ ಗಿಲಗ ಜನರಲ್ ಇಲೆಕ ನು. ಮುಂದ

ಒಂದ ತಿಂಗಳದಾಗ ಗ್ಯಾದರಿಂಗ ಇಲೆಕ್ಶನ್ಸು. ಹಿಂಗಾಗಿ ಅಭ್ಯಾಸ ಹಾಳು, ರೊಕ್ಕ ಹಾಳು, Energy ಹಾಳು, ಮ್ಯಾಲೆ ಒಬ್ಬರಿಗೆ ಕೆಟ್ಟಾಗಬೇಕು. ಅಲ್ಲದ ಮತ್ತ ಟರ್ಮಿನಲ್‌ದಾಗ ಐದ ಮಾರ್ಕ್ಸಿಗಿಂತಾ ಕೆಳಗ ತೊಗೊಂಡರ ದಂಡಾ ಕೊಡಬೇಕು. ಛಲೋ ಯುಕ್ತಿ ಹುಡಕ್ಯಾರ. Study ಹಾಳ ಮಾಡಾವ್ರು ತಾವ. ಏನ ಆಗಲಿ, ಇಲೆಕ್ಶನ್ ಗದ್ದಲಂತೂ ಒಂದಪಾಟಿ ತೀರಿ-ಧಂಗಾತಪಾ............ ಈ ವಸಂತ ಆರಿಸಿ ಬಂದರ ಏನೋ ನಮಗ ಫಾಯದೆ.

**ದೇಶಪಾಂಡೆ:**— ಅಂವಾ ಬಂದರಾರ ಏನೋ, ನಾಳೆ ಮಿಸಲನಿ ಒಳಗ ನಮ್ಮ ಫೋಟೊ ಬ್ಯಾರೆ ಬರೂಹಂಗಿಲ್ಲ.

**ಕುಲಕರ್ಣಿ:**— ಫೋಟೊ ಬರದಿದ್ದರೇನಾತೊ. ಜಿಮಖಾನಾ ಫಂಡ ಆರಕ್ಷ ಇರತದಲ್ಲಾ. ಮೊದಲ ನೀ ಹೇಳಧಂಗ ಇಬ್ಬರಿಗೂ ಒಂದೊಂದು ರೇನ-ಕೋಟ ಹಾಕೂಣು

**ದೇಶಪಾಂಡೆ:**— ಅವಾ ಕೊಡಬೇಕಲ್ಲಪಾ.

**ಕುಲಕರ್ಣಿ:**— ಅವಾ ಏನು ಅವನ ಅಪ್ಪನ ಮನಿಂದ ಖರ್ಚ ಮಾಡ-ಬೇಕಾಗೇದ. ನಾವೇನು ಫುಕಟ ಏನು ಇಷ್ಟು ಶ್ರಮಬಟ್ಟದ್ದು. ಹಂಗರ ಉಂಡಾನಲ್ಲಾ ತನ್ನ ಫಲಾ.

**ದೇಶಪಾಂಡೆ:**— ಅವಾ ಇಲೆಕ್ಟ ಆಗಿ ಬಂದರೂ, ಅವನ್ನ ಇಲೆಕ್ಟ ಮಾಡಿದವರು ನಾವಾಗತೇವಿ. Honour ತೋಗೊಂಬಾವಾ ಅವಾ ಆಗ-ತಾನ............ಇಷ್ಟಾಗಿ ಅವಗೆಲ್ಲಿ ಇಷ್ಟ Chances ಅವ ಬಿಡು. ಬರೇ ಲೇಡಿ ಸ್ಟೂಡಂಟ್ಸ ಮ್ಯಾಲೆ ಅವನ ಭಾರಾ. ಇಲೆಕ್ಟ ಆಗದಿದ್ದರೂ ಅಷ್ಟ ಫೆಮಿಲಿ ಗುರ್ತಾತು ಸಾಕು ಅಂತಾನವಾ.

**ಕುಲಕರ್ಣಿ:**— ಅಲ್ಲಪಾ ದೇಶಪಾಂಡೆ, ನೀ Sincerely ಹೇಳು, ನಿನ್ನ Personal Vote ಯಾರಿಗೆ ಹಾಕಿದಿ?

**ದೇಶಪಾಂಡೆ:**— ಬಸಂತಗ!

**ಕುಲಕರ್ಣಿ:**— ಪಕ್ಕಾ ಇದ್ದೀ ನೋಡಪಾ ನೀ ಮಾತ್ರ. ಹೇಳು ಖರೆ ಹೇಳು.

**ದೇಶಪಾಂಡೆ**:— ನೀ ಯಾವಾಗ ಇಷ್ಟ ಕೇಳತಿ ಅಂದಮ್ಯಾಲ ನೀ ಹೇಳು, ನೀ ಯಾರಿಗೆ ಹಾಕೀದಿ. Sincerely ಹೇಳು ಮತ್ತ.

**ಕುಲಕರ್ಣಿ**:— ಹೇಳಲ್ಯಾ, ನೋಡಮತ್ತ. ಬರೂ ಚಾರಣಿಕ್ಕ ಚಕ್ರಾ ತಂದೀ ! ಯಾರ ಮುಂದೂ ಒಡೀಬ್ಯಾಡಾ.

**ದೇಶಪಾಂಡೆ**:— ನೀ ನನ್ನ ಮುಂದ ಒಡದ ಹೇಳತಿ ಅಂತ ನಿನ್ನಹಂಗ ನಾನೂ ಒಡದ ಹೇಳತೀನಿ ಅಂತ ತಿಳದೀಯೇನು ?. Imposs.

**ಕುಲಕರ್ಣಿ**:— ಹೇಳಲ್ಯಾ ಹಂಗಾರ—ನಾನು ಎಸ್. ಎಸ್. ನೀನs ಹೇಳೋ.

**ದೇಶಪಾಂಡೆ**:— ನೋಡ ಹಂಗರ,.... ....ನಾನೂ............ಛೇ, ನಾವೊಲ್ಲೆ, ನೀನs ಹೇಳೊ.

**ಕುಲಕರ್ಣಿ**:— ಹೇಳಲ್ಯಾ ಹಂಗಾರ .......ನೋಡ ನೋಡ ಮತ್ತ, ಮಂದೀಮುಂದ ನನ್ನ ಮಾನಾ ಕಳದೀ (**ದೇಶಪಾಂಡೆ ಊಂ, ಹೂಂ, ಎಂದು** ಗೋಣು ಹಾಕುವನು) ನಾನೂ ಎಸ್ .... ನಾನೂ ಎಸ್ .... ಎಸ್ ಎಸ್‌ಗ. ಹಾಕೀನಿ ನೋಡಪಾ.

**ದೇಶಪಾಂಡೆ**:— (ಕೈ ಹಿಡಿಬು) Happy coincidence........ Expected, ನಾನೂ........ಅವಗ ನೋಡು. (ಇಬ್ಬರೂ ನಗುವರು.)

**ಕುಲಕರ್ಣಿ**:— ರಾತ್ರಿ ಕಂಡುಬಂತು ನಮ್ಮ ಬಸಂತಾ ಆರಿಸಿ ಬರೂ Chance ಇಲ್ಲಾ ಅಂತ. ಅದಕ್ಕ ಮುಂಜಾನೆ ಎಸ್. ಎಸ್‌ನ Side ಹಿಡಿದುಬಿಟ್ಟೆ.

**ದೇಶಪಾಂಡೆ**:— ಮತ್ತ ಗೆದಿಯೂ ಎತ್ತಿನ ಬಾಲಾ ಹಿಡಿದರ ಏನಾರ ಸಿಕ್ಕೀತಪಾ.

**ಕುಲಕರ್ಣಿ**:— ಆದರ ಅವಾ ಮಿಸ್ಟರ ಪಾಟೀಲ ಮಾತ್ರ ಎಸ್. ಎಸ್.ಗ ಪ್ರಾಮಿಜ ಮಾಡಿ, ಕ್ಯಾನ್‌ವ್ಹಾಸ್ ಮಾಡಿ ಕಡಿಕೆ ಬಸಂತಗ ತನ್ನ Personal Vote ಹಾಕಿವನಂತ ! ಹಿಂಗ Deceive ಮಾಡತಾರೇನಪಾ.

**ದೇಶಪಾಂಡೆ**:— ನಮ್ಮಹಂಗ ಅವನೂ........ ...ನಮಗ ಮಾತ್ರ ಎರಡೂ ಕಡಿಯಿಂದ ಫಾಯದೆ ಅದ ನೋಡು. ಇತ್ತಲಾಗ ಎಸ್. ಎಸ್.

ಬಂದರ ಅವಗ Personal Vote ಹಾಕೇವಿ, ಅವನಿಂದ ಲಾಭ ಅದ. ಇನ್ನ ನಮ್ಮ ಬಸಂತ ಬಂದರಂತೂ ಏನ ಕೇಳತೀಯೊ—ಅವನ Side canvass ಮಾಡಿವಲಾ !

(ಹೋಗುವರು.)

## ಪ್ರವೇಶ ೫. [ತುಸು ದಿನಗಳು ತೀರಿದ ಮೇಲೆ]

(ಶಾಮನ ಮನೆ. ಶಾಮನೊಬ್ಬನೆ ಕುಳಿತಿದ್ದಾನೆ.)

........ಹಿಂದಿನ ಕವಿಗಳಿಗೆ ರಾಜಾಶ್ರಯಾ ಸಿಗತಿತ್ತು, ಅಂತ ಬೇಕಾದಂಥಾ ನಾಟಕಾ-ಕಾದಂಬರಿ ಬರೀಲಿಕ್ಕೆ ಉತ್ಸಾಹಾನೂ ಬರಬೇಕು, ಪ್ರೋತ್ಸಾಹಾನೂ ಸುದ್ಧಾ ಕೊಡುದುಲ್ಲಾ ಮುಂದಕರದು. ಬಿಡವಲ್ಯಾಕ, ನಾ ಮಂದೀ ಸಲುವಾಗಿ ಬರಿಯೂದಿಲ್ಲಾ; ಮಂದಿ ನನ್ನ ಲೇಖಾ ಓದೂದು ಬ್ಯಾಡಾ, ಇವರು ಹೌದು, ಸ್ವತಂತ್ರ ಧಂಧೆ. ಆವ್ಯಾಲ ತೊಗೊಳ್ರಿ, ದಿನಾ ಒಂದ Satire ಬರೀತಿನಿ ಈ Editors ವ್ಯಾಲ ! ಸಧ್ಯಾಕಂತೂ ನಮ್ಮದೊಂದು ಕವಿತಾ, ಒಂದು ಲೇಖಾ accept ಅಗ್ಯಾವ, ಸಾಕು. ಮುಂದ ನೋಡೂಣಂತ.

(ಶಾಂತಾ ಪ್ರವೇಶಿಸುವಳು. ಕೈಯಲ್ಲಿ ಒಂದು ಕಾಲೇಜ ಮಿಸಲನಿ, ಮತ್ತು ಒಂದು ಮಾಸಿಕ ಹಿಡಿದು)

**ಶಾಂತಾ:**— (ಮಾಸಿಕ ಕೊಟ್ಟು) ನಿನ್ನೆ ಸಂಜೀಮುಂದ ಪೋಸ್ಟಮನ್ ಕೊಟ್ಟು ಹೋದಾ. (ಮಿಸಲನಿ ಕೊಟ್ಟು) ಇದೇ ಈಗ ಇದನ್ನು ಯಾರೋ ಒಗದ ಹೋದ್ರು.

**ಶಾಮ:**— (ಆನಂದದಿಂದಲೂ, ಆಶ್ಚರ್ಯದಿಂದಲೂ) ಕಲೀದ ಇದ್ದವರ ಹಣೇಬಾರಾನ ಇಷ್ಟು. 'ಉಣ್ಣಿ ಕೆಚ್ಚೊಲಳಿದ್ದು ನೊರೆಹಾಲ' ಎರಡೂ ಪತ್ರಿಕೆಗಳಲ್ಲಿ ಅಮೌಲ್ಯವಾದ ಈ ಕವಿಯ ಲೇಖನಗಳು ಬಂದುದನ್ನೂ ಓದುವ ತವಕಗೊಳ್ಳದೆ ಹಾಗೆಯೆ ತಂದಿರುವಿಯಾ? ಇವು ಕವಿರಾಜನಾದ ನಿನ್ನ ಗಂಡನ ಗೌರವವನ್ನು ಘೋಷಿಸುವ ಸಾಹಿತ್ಯಶಂಖಗಳು. ಒಂದರಲ್ಲಿ ಕವಿತೆ, ಒಂದರಲ್ಲಿ Prese Article ಹೀಗೆ ಛಾಪಿಸಿ ಬಂದಿವೆ.

**ಶಾಂತಾ:**— ಅವಷ್ಟು ಛಾಪಿಸಿ ಬಂದರ ಏನ ಸಿಕ್ಕಹಂಗಾತು ನಿಮಗ ಸೌಭಾಗ್ಯ?

**ಶಾಮು:**— ಕಂಟಿಮಟಾ ವಸ್ತ್ರಾ ಹಕ್ಕೊಂಬುದೊಂದ ಸೌಭಾಗ್ಯಾ ಅಂತ ತಿಳದಿಯೇನು ? ಕಾವ್ಯದ ಮುಂದೆ ಯಾವ ಸೌಭಾಗ್ಯವಿರುವದು ? ಇವು ನಿನ್ನ ಹಾಗೂ ನಿನ್ನ ನಲ್ಲನ ಬಿಂಕವನ್ನು ಬಿಚ್ಚಿಹೇಳುವ ಹೆಮ್ಮೆಯ ಹೆಗ್ಗುರುತುಗಳು.

**ಶಾಂತಾ:**— ಏನಾರ ಛಾಪಸೇದ ತಗಿರಿ ನೋಡೋಣ.

**ಶಾಮು:**— ತುಸು ತಡೆ. ಇಂದಿನಿಂದ ನಿನ್ನ ಗಂಡನು ಕರ್ನಾಟಕದ ಚಿರಸಾಹಿತಿಯಾದನು. ‘ ಸಿರಿಗನ್ನಡಂಗೆಲ್ಗೆ ’

**ಶಾಂತಾ:**— ಏನರ ಅದ ತಗಿರಿ ನೋಡುಣು.

**ಶಾಮು:**— ಆ ಮೊನ್ನಿನ ಕವನ, ನಿನ್ನ ಸಿಟ್ಟಿನ ಸನ್ನಿವೇಶದಲ್ಲಿ ಕಟ್ಟಿದ್ದು ನೀನು ಆ ಕವನದ ಕೆಳಗಿನ ಹೆಸರನ್ನು ಓದುವೆನೆಂದರೆ ಮಾತ್ರ ತೋರಿಸುವೆನು.

**ಶಾಂತಾ:**— ಯಾವ ಹೆಸರು ?

**ಶಾಮು:**— ಮದಿವ್ಯಾಗಿ ಮೂರ ವರ್ಷಾದರೂ ಯಾವ ಹೆಸರ ? ಮರೆತುಬಿಟ್ಟೇನು ಇಷ್ಟರಾಗ ?...........ಶಾಂತಾನಾಥ ಶಾಮನೆಂಬುವನು ! ಈ ಕವನಕ್ಕ ಮುದ್ದಾ ಶಾರದಾತನಯ ಶಾಮನೆಂದು ಅಳಿಸಿ ಶಾಂತಾನಾಥ-ಶಾಮನೆಂದು ಇಟ್ಟಿದ್ದೇನೆ. ಹೀಗೆ ಬಾ, ನಾನು ಹೇಳಿದಂತೆ ಅನ್ನು.

**ಶಾಂತಾ:**— ನಾ ಅಂಬೂದು ಬ್ಯಾಡಾ, ನಿವ್ ಹೇಳೂದು ಬ್ಯಾಡಾ.

**ಶಾಮು:**— ಆಂ ? ಇಷ್ಟು ಕಷ್ಟಬಟ್ಟು ಸ್ಫೂರ್ತಿಗೊಂಡು ಬರೆದ ಕವನದ ಒಳಗಿನ ಹೆಸರನ್ನು ಹೇಳುವದಿಲ್ಲವೆ ?... .......ಚೆನ್ನೆ, ನನ್ನ ಮಾವಿನ ಹೆಣ್ಣೆ, ನನ್ನ ಮಾವಿನ ಹಣ್ಣೆ, ಹಣ್ಣಿನಂತೆ ರುಚಿಯಾ ಈ ಕವನವನು ರುಚಿಸು. (ಮಿಸಲನಿ ತೆಗೆದುಕೊಂಡು) ಇತ್ತ ಬಾ, ಈ ಕವನವನ್ನು ನಾನು ಹೇಳಿದಂತೆಯೇ ಅನ್ನು. (ಶಾನು ತಿರುವಲು ಕವಿತೆಯು ಸಿಗುವದಿಲ್ಲ. ಎಳಂಟು ಸಾರೆನೋಡಿ...... ಆಶ್ಚರ್ಯದಿಂದಲೂ ನಾಚಿಕೆಯಿಂದಲೂ) [ಸ್ವಗತ] ಎಲಾ ! ಅನುಕ್ರಮಣಿಯೊಳಗ ನಮ್ಮ ಹೆಸರಿಲ್ಲಾ ! ಒಳಗ ನಮ್ಮ ಕವಿತಾ ಇಲ್ಲ ! ಎನಿದು ? ನನ್ನ ಕವಿತಾ ಹಾಕಿಯೇ ಇಲ್ಲ ! ಎಂತಹ ಅಪಮಾನವು !...........ಆತು, ನಮ್ಮಾಕಿ ಕಲೀದ ಇದ್ದದ್ದ ಗುಣಾ ಆತು. ನನ್ನ ಮರ್ಯಾದಿ ಕಾಯ್ದ್ಹಳು ಮಾರಾಯಳು.......... (ಮಾಸಿಕವನ್ನು ತೆಗೆದುಕೊಂಡು) [ಪ್ರಕಾಶ] (ನಾಚಿಗೆಯಿಂದ)

ಪ್ರಿಯೆ, ನನ್ನ ಕವನವು ಮುಂದಿನ ಸಲ ಬರಲಿಹುದು. (ಗೌರವದಿಂದ) ಇಕೊ, ಇದರಲ್ಲಿ ನಿನ್ನ ಗಂಡನ ಲೇಖವಿದೆ. ಅದನ್ನಾದರೂ ತೋರಿಸುವೆನು. ಇತ್ತ ಬಾ. (ಹಾನು ತಿರುವಹತ್ತುವನು. ಅದೂ ಸಿಗುವದಿಲ್ಲ.) ಯಲಾ ಇವನ! ಕಡಿಕೆ Deceive ಮಾಡಿದರಲ್ಲ! Cheated, I am cheated.

(ನಾಚಿಕೆಯಿಂದ ಹೆಂಡತಿಯನ್ನು ನೋಡುತ್ತ ನಿಲ್ಲುವನು.)

ಶಾಂತಾ:— (ನಗುತ್ತ) ಯಾಕ? ಛಾಪಿಸಿ ಬಂದಿಲ್ಲೇನು?

ಶಾಮು:— ಇಲ್ಲಾ, ಮುಂದಿನ ಸಾರೆ ಹಾಕತಾರಂತ (ಸ್ವಗತ) ಹೇ ಭಗವಂತಾ! ಈ ಕವಿತೆ ಬರೆಯುವ ಹುಚ್ಚನ್ನು ನನ್ನಲ್ಲಿ ಏಕೆತ್ತ ಊರಿದೆ. ಈ ಕವಿತೆ ಬರೆಯುವದೂ ಬೇಡಾ, ಇವರು ಛಾಪಿಸುವದೂ ಬೇಡಾ. (ಪ್ರಕಾಶ) ಆತು, ತಾಟುಮಣಿ ಹಾಕನಡಿ. (ಶಾಂತಾ ಮುಂದೆ ಹೋಗುವಳು)

[ತೆರೆ]

---

# ನಳೋಪಾಖ್ಯಾನ



**ಪಾತ್ರಗಳು:**

೧. ರಾಯರು:- ಅದೇ ಹೊಸದಾಗಿ ಸಂಸಾರವೆಂಬ ನೀರ-ಕ್ಷೀರ ಸಾಗರದಲ್ಲಿ ತೇಲಿಬಿದ್ದ ರಾಜಹಂಸ

೨. ಹೊರಗೆ (ಕೂತು) ಇರುವುದರಿಂದ ಒಳಗೆ ಬಾರದೆ ಮರೆಯಲ್ಲಿಯೇ ಮಲ್ಲಿನಾಥಿಯನ್ನು ಮಾಡುತ್ತಿರುವ ರಾಯರ ರಾಣಿ

(ದೃಶ್ಯ:— ಎದುರಿಗೆ ಕಾಣಿಸುತ್ತಿರುವುದೇ ರಾಯರ ಪ್ರಯೋಗಶಾಲೆ. ಅರ್ಥಾತ್ ಪಾಕಶಾಲೆ. ಕುರುಕ್ಷೇತ್ರಕ್ಕಿಳಿದ ಅರ್ಜುನನಂತೆ ರಾಯರು ಮಲ್ಲಗಂಟು ಹಾಕಿ ಪಾಕಸಿದ್ಧತೆಗೆ ತೊಳೇರಿಸಿ, ಅಂದರೆ ಮೈಮೇಲಿನ ಅಂಗಿ ತೆಗೆದು, ಒಲೆಯೊಡನೆ ಗುದುಮುರಿಕೆ ನಡಿಸಿದ್ದಾರೆ. ಒಲೆಯ ಸುತ್ತಲೂ ನೂರಾಯೆಂಟು ಪಾತ್ರೆಗಳನ್ನು ಹರಡಿದ್ದಾರೆ. ಒಮ್ಮೆ ಓಡಾಡಿದಾಗ ಹತ್ತೆಂಟು ಪಾತ್ರೆಗಳು ತಾಕಲಾಡಿ ಮೊಸರು ಹಾಲು ಎಣ್ಣೆಗಳ ಪೂರ ಹರಿಯುತ್ತದೆ. ಒಲೆ ಒಮ್ಮೆ ಉರಿಯುತ್ತಿದೆ, ಒಮ್ಮೆ ಆರುತ್ತದೆ)

**ಹೆಂಡತಿ:**— (ಗದ್ದರಿಸುವ ದನಿಯಲ್ಲಿ) ಏನದು ?............ಮತ್ತೆ ನೀರು ಚಲ್ಲಿದಿರಲ್ಲ ?

**ರಾಯರು:**— ಏನಿಲ್ಲ .. ....ನೀರು. ನೀರು ಹರಿದಾಂಗ ಹರಿಯಿತು (ಗಾಬರಿಗೊಂಡು ಹಿಂದೆ ಮುಂದೆ ನೋಡುತ್ತ ಬಳಿಯಲು ಹೋಗುವವರು ಬರುವದಿಲ್ಲ. ಥೂ, ಥೂ, ಒಳಗೆ ಯಾಕ ಮೋರೆ ಹಾಕತಿ ? ಇಲ್ಲಿಯೇ ದೇವರು ಕೂತಾರ ಅಡಿಗೆ ಮನೆಯೊಳಗೆಲ್ಲ ಮೈಲಿಗೆ ಕಲಿಸಬೇಡ ಮಾರಾಯ್ತಿ ! ನಿಮ್ಮ ಅಪ್ಪ ಅವ್ವ ಮಡಿಮೈಲಿಗೆ ಕಲಿಸೇ ಇಲ್ಲೇನು ? ನಿನಗ ?

**ಹೆಂಡತಿ:**— ಸಾಕು ನಿಮ್ಮ ಲಕ್ಚರು ಪಲ್ಯಾಕ ಒಗ್ಗರಣಿಗೆ ಇಟ್ಟಿರೇನು?

**ರಾಯರು:**— ಸ್ವಲ್ಪ ತಡಿ. ಮೊದಲು ಈ ಅಗ್ನಿನಾರಾಯಣನನ್ನ ಮೊದಲು ಮಾತಾಡಸತೀನಿ. (ಒಲೆಯ ಮೇಲೆ ಪಾತ್ರೆ ಇಟ್ಟು ಜೋರಿನಿಂದಾ ಊದಿ

ಊದಿ, ಸುತ್ತೆಲ್ಲ ಹೊಗೆ ಇಡುಗಿ ಉಸಿರುಗಟ್ಟಿಹೋಗುವುದು. ಖೊಯರ್, ಖೊಯರ್, ಎಂದು ಕೆಮ್ಮುತ್ತ) ಆಂ, ಮೊದಲನೇ ಬಾರಿ ಗಾಂಜಾ ಸೇದಿದ ಹಾಂಗ ಆಗತದ ನೋಡು, ನಿಂತಿರು. ಮೊದಲು ಸದ್ಯಕ್ಕ ಕಲೆಕ್ಟರರಿಗೆ ಒಂದು ಕಂಪ್ಲೇಂಟೆ ಬರೆದು ಹಾಕಿಯೇ ಅಡಿಗೆ ಕೂಡತೀನಿ ನನ್ನ ಕಿಸೆದಾಗಿನ ಪೆನ್ನು ತಾ ಇಲ್ಲೆ (ಹೆಂಡತಿ ಸುಮ್ಮನಿರಲು) ಪೆನ್ನು ತಾ ಅಂದೆ ಫೌಂಟನ್ನಪೆನ್ನ........

**ಹೆಂಡತಿ:**— ಹ್ಯಾಂಗ ಕೊಡಲಿ ಅಂದೆ!

**ರಾಯರು:**— ಅಂದರ ಓಹೋ! ಹೌದಲ್ಲ........ನಿಲ್ಲು ಹಾಂಗಾದರ ನಾನ...........

**ಹೆಂಡತಿ:**—ಸಾಕು ಮೂರು ದಿವಸ ಅಡಿಗೆ ಮಾಡಿ ಹಾಕಬೇಕಾದರ ನಿಮಗ ಕಲೆಕ್ಟರು, ಗವ್ಹರ್ನರು ಎಲ್ಲಾರು ಬರಬೇಕು ಮೇಲ ಕೆಲ್ಸಕ್ಕ. ಹನ್ನೆರಡೂ ತಿಂಗಳು ನಾವು ಹೆಂಗ ಮಾಡಬೇಕು?

**ರಾಯರು:**— ಹ! ಹ!! ನಿನ್ನ ಕುಶಲ ಪ್ರಶ್ನೆಗೆ ಹೇಗೆ ಉತ್ತರ ಕೊಡಲಿ ರಾಣಿ?..........ತಿಂಗಳದೊಳಗ ಮೂರು ದಿವಸ ನಾನು ಕ್ಯಾಜುಅಲ್ ಲೀವ್ ತಗೆದುಕೊಂಡಾಗ ನೀನೇ ಕಚೇರಿ ನಡೆಸುವ ಪ್ರಸಂಗ ಬಂದು ಆಗ ತಾನೆ ನಿನ್ನ ಪ್ರಶ್ನೆಗೆ-ಉತ್ತರ ದೊರೆಯುಬಹುದು.

**ಹೆಂಡತಿ:** — ಇರಲಿ—ಮೊದಲು ಬಾಯೊಳಗ ಊದುಗೊಳಿವೆ ಇಟ್ಟು-ಕೊಳ್ರಿ.

**ರಾಯರು:**— ಅಂದರ? ಕಲೆಕ್ಟರಗ ಅರ್ಜೀ ಹಾಕೊದು ಬ್ಯಾಡಾ ಅಂತಿಯೇನು? ಅಲ್ಲಾ. ಮೊದಲು ಮಳಿಗಾಲ ದಿವಸ ಕಟ್ಟಿಗೆಯಲ್ಲಾ ಹಸಿ ಕಿಚ್ಚು ಮತ್ತ ಹ್ಯಾಲ ಕಂಟ್ರೋಲ! ಅಲ್ಲ ಕಟ್ಟಿಗಿ ಸ್ವಲ್ಪ ಸಣ್ಣ ಆದರೂ ಒಡೆದುಕೊಡಬಾರದ............ಹೌದು ಹೌದು ಒಪ್ಪಿಕೊಂಡೆ. ಕ್ಷಮಿಸು ನೀನು ನಿತ್ಯ ತಕರಾರು ಮಾಡುತ್ತಿದ್ದಿ. ಕಟ್ಟಿಗೆ ಚಕ್ಕಿಯ ಹಾಗೆ ಒಡಿಸಿರಿ ಅಂತ........ ಇನ್ನ ಮ್ಯಾಲೆ ನಾನೇ ಸ್ವತಃ ಪರಶುರಾಮ ಆಗತೀನಿ. ಕ್ಷತ್ರಿಯರನ್ನು ನುಚ್ಚು ನೂರು ಮಾಡಿದ ಹಾಂಗ ಕಟಿಗೆ ಚೂರು ಚೂರು ಮಾಡಿ ಒಗೆಯತೀನಿ. ಏನೂ ಈಗ...............(ಮುಂದಿನ ಹೆಜ್ಜೆ ಹಿಂತೆಗೆದು) ಹೌದಲ್ಲ ಕಚೇರಿಗೆ ಹೊತ್ತಾಗತದ. ಏನಾದರೂ ಆವೇಶ ಬರೂದಕ್ಕ....ಆಫೀಸ ಟಾಯಿಮ್ ಆಗಿಬಿಟ್ಟಿರತದ.

**ಹೆಂಡತಿ:**— ಪಾತ್ರೆ ಸುಟ್ಟು ಹೋಗತದ, ಮೊದಲು ಒಗ ರಣಿ ಕಾಸಿರಿ

**ರಾಯರು:**— ವಾ ! ಅಷ್ಟು ಕಾಳಜೀ ಇಲ್ಲೇನು ನನಗ? ಒಲಿಯೊಳಗ ಉರಿ ಇದ್ದರ ಪಾತ್ರಿ ಸುಡಬೇಕು..........ಹಾಗಾದರೆ ಉರಿ ಆಗಲಿಕ್ಕೆ ಏನು ಮಾಡಬೇಕು? ಚಿಮಣಿ ಎಣ್ಣಿ (ಎಂದು ವಟಗುಡುತ್ತ ಅಚೆಯ ಮೂಲಿಯೊಳಗಿನ ಮಾಡದಲ್ಲಿದ್ದ ಬಾಟಲಿ ತಂದು ನೋಡುವನು.) ಬರಿದೋ ಬರಿದು ತೆರವೋ ತೆರವು. ಈ ಸಾರೆ ಚಿಮಣಿ ಎಣ್ಣಿ ತಂದಿಯೇ ಇಲ್ಲೇನು ?.......ಓಹೊ ಮುಂದಿನ ಸರತಿ ಮೊದಲನೇ ತಾರಿಖಕ್ಕ ! ಅಲ್ಲಿಯ ವರೆಗೆ? ಸ್ವಯಂ ಜ್ಯೋತಿಯಿಂದಲೇ ಮನೆಯೊಳಗಿನ ಸಂಸಾರ ಮಾಡಬೇಕಂತೇನು? ಇಲ್ಲಾ, ಹೀಗೆ ಸುಮ್ಮನೇ ಕೂತರ ಸರಕಾರದವರು ಕೇಳೋದಿಲ್ಲ ಡೆಪ್ಯುಟೇಶನ್ನಾ ಒಯ್ಯಲಿಕ್ಕೆ ಬೇಕು

**ಹೆಂಡತಿ:**— (ಮತ್ತೆ ಏನು? ಎಂದು ಆಕ್ರೋಶ ಮಾಡಲು) ಈಗಲ್ಲ ಆಮೇಲಿನ ಸಂಗತಿ ಹೇಳಿವೆ........ಒಲಿ ಉರಿ ಮಾಡಲಿಕ್ಕೆ ಏನು ಉಪಾಯ ಮಾಡಬೇಕಾಯಿತಿನ್ನ ? ಒಲಿಗೆ ಕಾಗದವನ್ನಾದರೂ ಹಚ್ಚಬೇಕು ಅಂದರ ಪೇಪರ ಕಂಟ್ರೋಲು. ಇದ್ದ ಸ್ವಲ್ಪ ಕಾಗದಾ ಮೊನ್ನೆ ಕಿರಾಣಿ ಅಂಗಡಿಗೆ ಹಾಕಿಬಿಟ್ಟೆ.... ಪರಮೇಶ್ವರಾ, ಎಲ್ಲರಿಗೂ ನಿನ್ನಂತ ಒಂದು ಮೂರನೇ ಕಣ್ಣು ದಯಪಾಲಿಸಿದ್ದರೆ ಈ ಕಟಿಗೆ ಕಂಟ್ರೋಲಿನ ದಿನಗಳಲ್ಲಿ ಎಷ್ಟು ಸುಸೂತ್ರವಾಗುತ್ತಿತ್ತು; ಸಂಸಾರಕ್ಕೆ! ಏನು ಕಂಟ್ರೋಲೋ ಏನೊ! ಸುಸೂತ್ರ ನಮ್ಮ ತಂದಿತಾಯಿನೆ ಬರ್ಥ ಕಂಟ್ರೋಲ ಮಾಡಿಬಿಟ್ಟಿದ್ದರೆ ಇಂದಿನ ನಳೋಪಾಖ್ಯಾನ ಆದರೂ ತಪ್ಪುತ್ತಿತ್ತು.

**ಹೆಂಡತಿ:**— ಕಚೇರಿಗೆ ಹೊತ್ತು ಆಗಲಿಲ್ಲೇನು ನಿಮಗಿನ್ನೂ ? ನಾವು ಅಡಿಗೆ ಮಾಡುವ ಮುಂವೆ ಅಷ್ಟೇ ಇರತವ ನಿಮ್ಮ ಅವಸರ. ಈಗಲಾದರೂ ತಿಳಿಯಿತ್ರೋ ಇಲ್ಲೊ ಒಂವ. ಅಡಿಗೆ ಆಗಬೇಕಾದರ ಎಷ್ಟು ಕಷ್ಟ ಅದ ಅನ್ನೋದು.

**ರಾಯರು:**— ಒಪ್ಪಿದೆ ಮಾರಾಯ್ತಿ ಒಪ್ಪಿದೆ. ಹೀಗೆ ಪರಸ್ಪರ ಸ್ಥಳಾಂತರ ಆಗದ ಹೊರತು ಒಬ್ಬರ ಕಷ್ಟ, ನಿಷ್ಠುರ ಇನ್ನೊಬ್ಬರಿಗೆ ತಿಳಿಯಲಿಕ್ಕೆ ಸಾಧ್ಯ ಆಗೂದಿಲ್ಲ. ಅದಕ್ಕೆ ನಾನು ಅಂತೀನಿ.

**ಹೆಂಡತಿ;**— ನೀವೇನು ಅಂತೀರಿ?

**ರಾಯರು:**— ಹಾಗಾದರೆ ನೀನೇನು ಅಂತಿ ?

**ಹೆಂಡತಿ:**— ಒಗ್ಗರಣೆ ಆಯಿತಿಲ್ಲೊ ನೋಡಿರಿ ಅಂತೀನಿ.

**ರಾಯರು:**— ಅಲ್ಲಾ ಸುಸೂತ್ರ ಖಾನಾವಳಿಯಿಂದ ಒಂದು ತಾಟು ತಂಪು ಬಿಡಬೇಕು ಅಂತೀನಿ.

**ಹೆಂಡತಿ:**— ಸುಡ್ಡಿ, ಹಿಂಡು ಹೊಲೇರು ಉಂಡ ತಾಟಿನೊಳಗೆ ಊಟಾ ಮಾಡಬೇಕು ಇನ್ನ? ಥಣ್ಣಗೆ ಒಂದಿಷ್ಟು ಉಪ್ಪು ತುಪ್ಪ ಅವಲಕ್ಕಿ ಹಚ್ಚಿ ಹಾಕಿಬಿಡ್ರಿ ನನಗೆ..........(ಸ್ವಗತ) ಏನಾದರೂ ಮೂರು ದಿವಸ ತಿಂದರೆ ಬಿದ್ದರಾಯಿತು.

**ರಾಯರು:**— That's an idea! ಜೀವನದಲ್ಲಿ ವೈವಿಧ್ಯ ಬೇಕು ಬೇಕು. ಇವೊತ್ತು ಬೇಕಾದರೆ ಚಹಾ ಅವಲಕ್ಕಿ ಮೇಲೆಯೇ ಕಥಾ ಸಾಗಿಸ್ಲೋ ಣೇನು? ಹೌದು, Variety is the spices fo life. ವೈವಿಧ್ಯವೇ ಜೀವನದ ಮಸಾಲೆ. ಉತ್ತಮ ಮಸಾಲೆ, ಅವಲಕ್ಕಿ ಹಚ್ಚತೀನಿ.

**ಹೆಂಡತಿ:**— ಹೂ. ನಿಮ್ಮ ಕೈಯಾಗ ಲಗಾಮು ಬಂದಮೇಲೆ ರಥಾ ಹ್ಯಾಂಗಾದರೂ ಸಾಗತದ. ನಾವು ಅಡಿಗೆ ಮಾಡೋ ಮುಂದ ಕೂದಲೆಳೆ ಅಷ್ಟು ಹೆಚ್ಚು ಕಡಿಮೆ ಆದರ ಬ್ರಹ್ಮೇತಿನೇ ಬರತದ.

**ರಾಯರು:**— (ಹೆಂಡತಿಯ ಮಾತಿನ ಕಡೆಗೆ ಲಕ್ಷವೇ ಇಲ್ಲದೆ ಎಲ್ಲ ಡಬ್ಬಿಗಳನ್ನು ಅಲ್ಲಾಡಿಸುತ್ತ) ಥೂ, ಥೂ! ಏನು ಸಂಸಾರ ಅದು ಅಂತೀನಿ. ಕಂಟ್ರೋಲ ಇಲ್ಲದ ಅವಲಕ್ಕಿ ಆದರೂ ಮನೆಯಲ್ಲಿ ಇರಬಾರದೇ?

**ಹೆಂಡತಿ:**— ತಂದು ಹಾಕಿರಿ ಅಂದರೆ ಗಳಾಗಳಾ ಅಳೋದು, ಮತ್ತೆ ಅದು ಇಲ್ಲೇನು, ಇದು ಇಲ್ಲೇನು?

**ರಾಯರು:**— ಕೊನೆಗೆ ಒಂದು ಹಿಡಿ ಅರಳಿಟ್ಟು? ಅದನ್ನಾದರೂ ತಿಂದು ನೀರು ಕುಡಿದು ಅಬ್ ಅಂದು ರಾಮಾ ಅಂತ ಮಲಗಿದರಾತು.

**ಹೆಂಡತಿ:**— ಇವೊತ್ತಿನಿಂದ ಕಚೇರಿಗೇನು ರಾಜಿರಾಮೆ ಏನು?

**ರಾಯರು:**— ನಿಮ್ಮ ಕಚೇರಿಯಿಂದ ರಜಾ ತೆಗೆದುಕೊಂಡಾಗ ನಾವು ನಮ್ಮ ಕಚೇರಿಗೆ ರಜಾ ತೆಗೆದುಕೊ ಬೇಕಾಗುತ್ತದೆ. ಇಲ್ಲದಿದ್ದರೆ ರಾಜಿ ನಾಮೆನೆ!........(ಮತ್ತೆ ಒಂದೆರಡು ಮಾಡಗಳನ್ನು ಹುಡುಕುತ್ತ) ಏನು? ಅರಳಿಟ್ಟೂ ತೀರಿ ಹೋಗೇದ?

**ಹೆಂಡತಿ:**— ತೀರಿ ಹೋಗಲಿಕ್ಕೆ ಮಾಡಿತ್ತಿಲ್ಲೆ!

**ರಾಯರು:**— ಆಯಿತು. ಅನ್ಯಥಾ ಶರಣಂ ನಾಸ್ತಿ. (ಬೆರುಗಚ್ಚಿ ಹಾಕಿ ಊದಲು ತೊಡಗುವನು, ಕೆಲ ಹೊತ್ತು ಆದಮೇಲೆ ಥಟ್ಟನೆ ಯೋಚನೆ ಹೊಳೆದು) That's good (ಎಂದು 'ಸ್ಟೋವ್' ತೆಗೆದುಕೊಂಡು ಬಂದು ಅಲ್ಲಾಡಿಸುವನು. ಎಣ್ಣೆ ಸಪ್ಪಳವಾಗುವದು.) ಆಯಿತು. ಸಾಕ್ಷಾತ್ಕಾರ ಆಯಿತು ಅಂದೆ.

**ಹೆಂಡತಿ:**— ಏನು, ಎಲ್ಲಾ ಬಿಟ್ಟು ದೇವರ ಧ್ಯಾನಕ್ಕ ಕೂತಿರೇನು?

**ರಾಯರು:**— ಅಗ್ನಿ ನಾರಾಯಣನ ಸಾಕ್ಷಾತ್ಕಾರ ಆಯಿತು, ಅಂದೆ. (ಎಂದವನೆ ಅದರೊಳಗಿನ ಎಲ್ಲ ಎಣ್ಣೆ ಸುರುವಿ ಕಡ್ಡಿ ಹಚ್ಚುವನು. ಭುಗ್ಗನೆ ಅಂಚಿಗು ವಂತೆ ಉರಿಯಹತ್ತುವದು.) ಆಂ! (ಗಾಬರಿಗೊಂಡು ನಿಲ್ಲುವನು.)

**ಹೆಂಡತಿ:**— ಏನಿದು, ಎಲ್ಲಿಯಾದರೂ,—

**ರಾಯರು:**— (ಗಾಬರಿಯಾಗಿಯೂ ಆಗದಂತೆ ನಟಿಸುತ್ತ) ಅಲ್ಲಾ, ಕಂಪನಿ ನಾಟಕದ 'ಕಂಸವಧ'ದೊಳಗ ದುರ್ಗಾ ಪ್ರತ್ಯಕ್ಷ ಆದ ಹಾಗೆ ಟ್ರಾನ್ಸ್ ಫರಿ ಸೀನರಿ ಆಯಿತು ನೋಡು. ಇನ್ನ ನೋಡು ಎರಡು ಮಿನಿಟಿನಲ್ಲಿ ನಳ-ಪಾಕ ಸಿದ್ಧ ಮಾಡತೀನಿ. (ಸುಡುತ್ತಿರುವ ಪಾತೇಲಿಯ ಮೇಲೆ ನೀರು ಸುರುವಲು 'ಛೊಯ್' ಎಂದು ಸಪ್ಪಳವಾಗುವದು) ಅಬಬ! ಕಾದ ತಲೆಗೆ ತಂಪು ಬಡಿದಾಗ ಹೀಗೆ ಆಗುತಿರಬೇಕು ನೋಡು.

**ಹೆಂಡತಿ:**— ಅಲ್ಲಾ, ಒಗ್ಗರಣಿಗೆ ಹಾಕೋದು ಬಿಟ್ಟು ನೀರು ಯಾಕೆ ಹಾಕಿದಿರಿ?

**ರಾಯರು:**— ಯಾಕೆ ಏನು ತಪ್ಪಾಯಿತು? ಯಾವುದಕ್ಕೂ ನೀರು ಬೇಕೇ ಬೇಕಲ್ಲೇನು?

**ಹೆಂಡತಿ:**— ಮೊದಲು ಒಗ್ಗರಣೆ ಹಾಕಿ, ಆ ಮೇಲೆ ಪಲ್ಲೈ ಹೆಚ್ಚಿ ಹಾಕಿರಿ.

**ರಾಯರು:**— ಪಲ್ಲೈ ಬೇಡ, ಝುಣಕಾ ಮಾಡತೇನೆ, ನುಸ್ತ 'ಪಿಟ್ಲೆ ಭಾತ್' ಖೂಪ ಖೂಪ ಖಾಯಿಂಗೆ.

**ಹೆಂಡತಿ:**— ಏನಾದರೂ ಮಾಡಿರಿ, ಮೊದಲು ಒಗ್ಗರಣೆ ಹಾಕಿರಿ ಅಂತೀನಿ.

**ರಾಯರು:**— ಒಗ್ಗರಣೆ ಅಂದರೇನು? ನಳೋಪಾಖ್ಯಾದ ಶ್ರೀಕಾರೇನು? ಮೊದಲು ಹಿಟ್ಟು ಹಾಕಿ. ಆ ಮೇಲೆ ಒಗ್ಗರಣೆ ಕೊಟ್ಟರೆ ಏನು ಆಗತದ? ಇವೊತ್ತು ನೋಡು ಆದರ್ಶವಾದ ನಳಪಾಕ ಮಾಡಿತೋರಿಸುತೀನಿ. ಇದರಲ್ಲೇ ನಮ್ಮ ಕೈವಾಡ ಕುದುರಿತೋ ಥಣ್ಣನೆ ಕಚೇರಿಗೆ ರಾಜೀನಾವೆು ಕೊಟ್ಟು ನಳಚಕ್ರವರ್ತಿ ಆಗಿಬಿಡತೀನಿ........ಏನಂದೀ? ಗಂಡಸರಿಗೆ ಅಡಿಗೆ ಬರುವದಿಲ್ಲ? ನಳ ಏನಿದ್ದ ಅಂತ ಮಾಡೀದಿ? ದಮಯಂತೀ ಗಂಡ ಇದ್ದ. ಒಂದು ಚಾನ್ಸ ಆದರೂ ಕೊಟ್ಟನೋಡು. ಹಾಗೇ ಮನಸ್ಸು ಹಾಕಿ ಅಡುಗೆ ಮಾಡಿಬಿಟ್ಟೆ ಅಂದರೆ ಯುದ್ಧೋತ್ತರ ಪುನರ್ರಚನೆಯಲ್ಲಿ ಎಲ್ಲ ವಿಶ್ವವಿದ್ಯಾಲಯಗಳಲ್ಲಿಯೂ ಬಿ. ಎ. ವರ್ಗಕ್ಕೆ ನಳಶಾಸ್ತ್ರವನ್ನು ಪ್ರಧಾನ ವಿಷಯವಾಗಿ ಹಚ್ಚುವಂತೆ ಮಾಡಿ ತೋರಿಸತೇನೆ........ಇನ್ನು ಮೇಲಿಂದ ಈ ಸಂಪ್ರದಾಯಬದ್ಧವಾದ "ಸ್ಟಿರಿಯೊ ಟಾಯಿಪ್ಸ" ಅಡಿಗೆ ಸಾಕುಮಾಡು. ಪ್ರತಿಯೊಂದು ಕ್ಷೇತ್ರದಲ್ಲಿಯೂ ಹೊಸ, ಹೊಸ ಸಂಶೋಧನೆಗಳಾಗಬೇಕು.

**ಹೆಂಡತಿ:**— ಸಾಕು ಹುಚ್ಚುಚ್ಚಾಗ. ಗಂಡಸರಿಗೆ ಏನು ತಿಳಿಯತದೆ ಅಡಿಗೆಯೊಳಗ?

**ರಾಯರು:**— ಹೌದ, ಮತ್ತೂ ಅದೇ ಮಾತ? ಗಂಡಸರಿಗೆ ಏನು ತಿಳಿಯುತದೆ ಅಡಿಗೆಯೊಳಗೆ ಅಂತ! ಅನ್ನಪೂರ್ಣೆ ಬರಿಕೈಯೊಳಗ ಸವಟು ಹಿಡಿದರೆ ಏನಾಯಿತು? ನಾಲಗೆಗೆ ರುಚಿ ಅನಬೇಕು ನಳಪಾಕ. ವಿರಾಟ ನಗರದಲ್ಲಿ ಕೈಯಲ್ಲಿ ಸವಟು ಹಿಡಿದು ಬಲ್ಲವನಾನ ಭೀಮಸೇನ ದ್ರೌಪದಿಯ ಗಂಡನಿದ್ದಿದ್ದಿಲ್ಲವೇ?............"ಸೂಪಶಾಸ್ತ್ರ" ಬರೆದ ಅಚ್ಚ ಕನ್ನಡ ಕವಿ ಮೂರನೆಯ ಮಂಗರಸ ಗಂಡಸಿದ್ದನೋ ಹೆಂಗುಸಿದ್ದನೋ? ಹೇಳು ಉತ್ತರ ಕೊಡು ಅಂದೆ.

**ಹೆಂಡತಿ:**— ಆಯಿತು. ನೀವೊಬ್ಬರು ನಾಲ್ಕನೆಯುವರು.

**ರಾಯರು:**— ಹೌದು ಅಂದೆ! ಮೂರನೆಯ ಮಂಗರಸನ ಸೂಪಶಾಸ್ತ್ರವನ್ನು ಪ್ರತ್ಯಕ್ಷ ರಂಗಭೂಮಿಗೆ ತಂದ ನಾನು ನಾಲ್ಕನೇ ಮಂಗರಸನಾದರೆ ತಪ್ಪೇನು?........ಇನ್ನು ಮೇಲಿನಿಂದ ನಾನು ಅಂತೀನಿ, ಧರ್ಮಕ್ಷೇತ್ರ, ಕುರುಕ್ಷೇತ್ರಗಳ ಜೊತೆಗೆ ಪಾಕಕ್ಷೇತ್ರವನ್ನೂ ಪುರುಷರೇ ಆಕ್ರಮಿಸಬೇಕು, ಅಂತ.

ಅಂದರೆನೇ ಯುದ್ಧೋತ್ತರ ಪುನರ್‍ರಚನೆಯಲ್ಲಿ ಹಿಂದುಸ್ಥಾನದಲ್ಲಿ ಉದ್ಯೋಗಗಳು ಅವಶ್ಯವಾಗಿ ಬೆಳೆಯಬೇಕಾದಾಗ ಪಾಕಶಾಸ್ತ್ರವನ್ನು ಒಂದು ಉದ್ಯಮವನ್ನಾಗಿ ಮಾಡಬೇಕು, ಅಂತ ಸರಕಾರಕ್ಕೆ ಸೂಚನಾ ಕಳಿಸತೇನೆ. ಪಾಕಶಾಸ್ತ್ರವನ್ನೇ ಕುರಿತು ನಮ್ಮಲ್ಲಿ ಅನೇಕ ಗ್ರಂಥಗಳ ರಚನೆ ಆಗಬೇಕು. ಪಾಕಶಾಸ್ತ್ರವನ್ನು ಕುರಿತು ನಮ್ಮಲ್ಲಿ ಅನೇಕ ಪ್ರಚಾರಾತ್ಮಕ ಪತ್ರಿಕೆಗಳು ಹೊರಡಬೇಕು. ಹಿಂದುಸ್ಥಾನವು ಸ್ವತಂತ್ರವಾಗಿ ಬಾಳಬೇಕಾದರೆ, ತರುಣ ಭಾರತೀಯರು ನಿರುದ್ಯೋಗವನ್ನು ಹೋಗಲಾಡಿಸಿ ನಿರಾಲಂಬಿಗಳಾಗಿ ಬದುಕಬೇಕಾದರೆ ಪ್ರತಿಯೊಬ್ಬ ಕನ್ನಡಿಗನು, ಪ್ರತಿಯೊಬ್ಬ ಭಾರತೀಯನು ಕೈಯಲ್ಲಿ ಸುಟ್ಟಗವನ್ನು ಧರಿಸಬೇಕು. ನಳನಾಗಬೇಕು, ಬಲ್ಲವನಾಗಬೇಕು, ಮಂಗರಸನಾಗಬೇಕು.... ಎಲ ಎಲ, ನೀರು ಸಳಮಳ ಕುದಿಯಲಿಕ್ಕೆ ಹತ್ತಿತಲ್ಲ! (ಎಂದು ಕಡಲೆಯ ಹಿಟ್ಟು ಹುಡುಕಾಡಹತ್ತುವನು.) ಕಡಲೀ ಹಿಟ್ಟು ಎಲ್ಲಿ ಅದೆ, ಕಡಲೀ ಹಿಟ್ಟು!.... (ಯಾವದೋ ಡಬ್ಬಿ ತೆಗೆದು ಕಡಲೆ ಹಿಟ್ಟೆಂದು ಸುರುವಲು, ಹೋಗಿ ವಾಸನೆ ನೋಡಿ) ನೋಡಿದ್ಯಾ! ಕಡಲೆಯ ಹಿಟ್ಟು ಅಂತ ಮೆಂತೇದ ಹಿಟ್ಟು ಹಾಕಿ ಬಿಡುತ್ತಿದ್ದೆ ನೋಡು. ಅಲ್ಲಾ, ಮನೆಯೊಳಗಿನ ಎಲ್ಲಾ ಹಿಟ್ಟಿಗೂ ಒಂದೊಂದು 'ಲೇಬಲ್' ಹಚ್ಚಿ ಯಾಕೆ ಇಡಬಾರದು? ಅಚ್ಚುಕಟ್ಟುತನಾ ಅಂದರೆ ಈ ಅಬಲೆಯರಿಗೆ ತಲೆಬೇನೆ! ಪ್ರತಿತಿಂಗಳಿಗೂ ಇನ್ನು ಮೇಲಿಂದ ಕಿಚನ್ ಇನ್‌ಸ್ಪೆಕ್ಶನ್ ಮಾಡತೀನಿ........ಏನಂದಿ? ಕಡಲೇ ಹಿಟ್ಟು ಇಲ್ಲ? ಮತ್ತೆ ಯಾವ ಹಿಟ್ಟು ಹಾಕು ಅಂತೀ?......... ಏನರಿ? ಬಾಜೂದವರ ಮನೆಯೊಳಗ ಕಡಾ ತರಬೇಕ? ನಾನ? ಕೈಯೊಳಗ ಪಾತ್ರೆ ಹಿಡಿದುಕೊಂಡು ಮುಂದಿಯ ಮನೆಯ ಹೆಣ್ಣು ಮಕ್ಕಳ ಮುಂದ ಮೂವತ್ತೆರಡು ಹಲ್ಲು ತೆರೆದು 'Lend and lease' ಕಡ್ಡಿ ಹಿಟ್ಟು Please. ಅಂತ ಕಡ ಕೇಳಲಿಕ್ಕೆ ಹೋಗಲ್ಯಾ!............ಅಂ? ಅವರೇ ಕೊಡಬೇಕಾಗೇದ! ನೀನ್ಯಾಕೆ ಅವರಿಗೆ ಕಡಾ ಕೊಟ್ಟಿದ್ದಿ? ಅಂತು ಇಂಟರನ್ಯಾಶನಲ್ ಟ್ರೇಡ ಪಾಲಿಸಿ ನೀವೂ ಕಲಿತೀರಿ ಅನಬಾರದ?........ ಕಡಲೇ ಬೇಳೆ ಇದ್ದರ ಕಡಲೆ ಹಿಟ್ಟು ಹ್ಯಾಗೆ ಮಾಡಂದಿ? ಹಲ್ಲೊಳಗೆ ಹಾಕಿ ನುರಿಸು ಅಂದ್ಯೋ, ಏನು ಗುದ್ದಿ ಪುಡಿ ಮಾಡು ಅಂದ್ಯೋ.............ಓಹೋ, ಗರತಿಯ ಹಾಡು ಹಾಡುತ್ತ ಹೆಂಗುಸಿನ ಸುದರ್ಶನ ಚಕ್ರ ಹಿಡಿ ಅಂತೀಯಾ?.... ಇಲ್ಲದಿದ್ದರೆ ಮಾಡಬೇಕೇನ? ಝುಣಕಾ. ಉತ್ತಮ ಪಿಟ್ಲೆ ಭಾತ...........

ಆಗಲಿ, ಬೀಸುವ ಕಲ್ಲು ಅದೇನೋ ಮತ್ತೆ ಬಗಲೊಳಗೆ ಬುಟ್ಟಿ ಇಟ್ಟುಕೊಂಡು ನೆರಮನೆಗೇ ಹೋಗಬೇಕೊ, ಕೊರಮಂಜಿಯ ಹಾಂಗ. (ಎಂದು, ಮತ್ತೆ ಅಡಕಲು ಡಬ್ಬಿಗಳನ್ನು ಹುಡುಕಿ ನೋಡ-ವಾಗ ಕಡಲೆಯ ಹಿಟ್ಟು ಸಿಗುತ್ತದೆ.) ' ಯುರೇಕಾ ! '............ನೋಡು ಸಂಶೋಧನೆ ಮಾಡಿದೆ. ಕಡಲೆ ಹಿಟ್ಟು ಹೌದಲ್ಲೋ ಮತ್ತೆ ? (ವಾಸನೆ ನೋಡಿ) ಹಾ—ಹೌದು (ಎಂದು, ಪಾತ್ರೆಯೊಳಗೆ ಹಿಟ್ಟೆಲ್ಲಾ ಸುರುವುವನು.)

**ಹೆಂಡತಿ:**— ಕೈ ಆಡಿಸಿರಿ ಲಗೂನೆ.

**ರಾಯರು:**— ಹಿಂಗೋ ! ಮತ್ತೆ ಅದಕ್ಕೂ ಒಂದು ಪರಿಭಾಷಾ ಬೇರೆ ಅದ ಏನು ?

**ಹೆಂಡತಿ:**—ಇಲ್ಲ ಬೇಗನೆ ಕೈಯಾಡಿಸಿರಿ.

**ರಾಯರು:**— (ಸವಟಿನಿಂದ ಕೈಯಾಡಿಸುತ್ತ) ಇನ್ನು ವಗ್ಗರಣಿ ಬೇರೆ ಕಾಸಬೇಕ. ಒಗ್ಗರಣೆ ಕಾಸೋದು !............ಅಂದರೆ ಹೇಗೆ ಕಾಸೋದು ಅಂತ........ಯಾಕೆ ಕೇಳಿಸೀತೇನು ?

**ಹೆಂಡತಿ:**— ಕೇಳಿಸಿತು ಸಂಶೋಧಕರಿಗೆ ಒಗ್ಗರಣೆ ಕಾಸಲಿಕ್ಕೆ ಗೊತ್ತಿಲ್ಲಾ ಅಂಬೋದು ಕೇಳಿಸಿತು. ಒಲೆಯೊಳಗೆ ಸವಟು ಚಾಚಿ ಒಂದಿಷ್ಟು ಎಣ್ಣೇಕಾಳು ಸುರುವಿರಿ.

**ರಾಯರು:**— ಒಲೆಯೊಳಗೆ ಸವಟು ಚಾಚಿರಿ............ಸರಿ, ಚಾಚಿದೆ. (ಸವಟು ಇಟ್ಟು) ಎಣ್ಣೇಕಾಳು ಸುರುವಿರಿ........(ತಲೆ ತುರಿಸಿಕೊಳ್ಳುತ) ಎಣ್ಣೇಕಾಳು ಅಂದರೇನು ? ಇದೇನೋ ಹೊಸಾ ಶಬ್ದಾನೆ ಹೇಳಿದೆಲ್ಲ ?

**ಹೆಂಡತಿ:**— ಹೊಸ ಶಬ್ದ ಎಲ್ಲಿಂದ ಬರತದ ಮಣ್ಣಾಗ ? ಒಳ್ಳೇಎಣ್ಣೆ ಸಾಸವೆಕಾಳು ಹಾಕಿರಿ ಅಂದೆ.

**ರಾಯರು:**— ಓಹೋ, ಹೀಂಗೋ by linguistre rules of contraction ಒಳ್ಳೇ ಎಣ್ಣೆ ಸಾಸಿವೆಕಾಳು ಹೋಗಿ ಎಣ್ಣೇಕಾಳು ಆಯ್ತೇನು ?........ಸರಿ. (ಎಂದು ಎಣ್ಣೆ ಸುರುವಿ ಕಾಳುಹಾಕುವನು) ಆಯಿತು— ಎಣ್ಣೇಕಾಳು ಹಾಕಿದೆ ಸುರುವಲ್ಯಾ ?

**ಹೆಂಡತಿ:**— ಇದೇನು ಒಗ್ಗರಣೆ ಕಾಳಿನ ಸಪ್ಪಳ ಕೇಳಲೇ ಇಲ್ಲ ?

**ರಾಯರು:**— ಅಂದರೆ ?.... .......ಓಹೋ ಸಂಸಾರ ಕುಲುಮೆಯಲ್ಲಿ ಮಾನವ ಕುನ್ನಿಗಳು ಚಟಪಟ ಒದ್ದಾಡುವಂತೆ ಅವೂ ಒದ್ದಾಡಬೇಕಲ್ಲವೇ ? (**ಎಂದು ಮತ್ತೆ ಕಾಸುವನು**) ಅಲ್ಲಾ, ಇನ್ನು ಮೇಲೆ ಅನ್ನ ಯಾವಾಗ ಆಗ ಬೇಕು ಅಂತಿನಿ............ಐದು ಮಿನಿಟುಗಳಲ್ಲಿಯೇ ಅನ್ನ ಸಿದ್ಧವಾಗುವಂತಹ ಒಂದು ಯಂತ್ರವನ್ನು ಹುಡುಕಬಾರದೇ ಈ ವೈಜ್ಞಾನಿಕರು ಆದಕ್ಕೇನೆ ವಿಜ್ಞಾನದ ದುರುಪಯೋಗ ಮಾಡುತ್ತಾರೆ ಈ ಜನಗಳು ಅನ್ನೋದು. ಅಗ್ನಿ ಪ್ರಳಯವನ್ನುಂಟು ಮಾಡುವ ಮದ್ದು-ಗುಂಡು ಬಾಂಬುಗಳನ್ನು ಮಾಡುವುದು ಕ್ಕಿಂತ ಅಡುಗೆ ಮನೆಯಲ್ಲಿ ಉತ್ತಮೋತ್ತಮ ರಸಪಾಕ ಪಕ್ವಾನ್ನಗಳನ್ನು ನಿರ್ಮಾಣ ಮಾಡುವ ಇಂದ್ರಜಾಲ ವಿದ್ಯೆಯನ್ನು ಶೋಧಿಸಬಾರದೇ ?........ ಹೌದು ಹೌದು. ಅನ್ನಕ್ಕೆ ಇಡತೀನಿ (**ಎಂದವ ವಿಚಾರ ಮಗ್ನತೆಯಲ್ಲಿ ಅಕ್ಕಿ ಹಾಕಿ ನೀರು ಹಾಕುವದನ್ನು ಮರೆತು ಹಾಗೇ ಒಲೆಯ ಮೇಲೆ ಇಡುವನು**)ನವ ಮತವಾದ, ಸಮತಾವಾದ, ಎಂದ ಅನೇಕವಾದಗಳ ಯುಗವಿದು. ಸ್ತ್ರೀಯರ ಜೊತೆಗೆ ಪುರುಷರೂ ಪಾಕಶಾಸ್ತ್ರ ಪ್ರವೀಣರಾಗಬೇಕು. ಪ್ರತಿದಿನವೂ ಸ್ತ್ರೀಯರೇ ಒಲೆಯ ಮುಂದೆ ಕೂಡದೇ ಪುರುಷರು ತಮ್ಮ ತಮ್ಮ ಅರ್ಧಾಂಗಿಯೊಡನೆ ಅರ್ಧಭಾಗ ವಹಿಸಬೇಕು........ಹೌದು ಹೌದು, I am here for the cause of the depressed class. ನಮ್ಮಲ್ಲಿ ಸ್ತ್ರೀಸಮಾಜದಷ್ಟು ಹಿಂದುಳಿದ ಸಮಾಜ ಯಾವುದೂ ಇಲ್ಲ ಅಬಲೆ ಇಂದು ಸಬಲೆಯಾಗಿ ಅಡುಗೆಯ ಮನೆಯಿಂದ ನಡುಮನೆಗೆ, ನಡುಮನೆಯಿಂದ ಪಡಸಾಲೆಗೆ ಪಡ ಸಾಲೆಯಿಂದ ರಂಗಭೂಮಿಗೆ, ಅಲ್ಲಲ್ಲಿ ಸಮರಭೂಮಿಗೆ ಧುಮುಕಬೇಕು. ಅಂದ ರೇನೇ ನಮ್ಮಲ್ಲಿ ಸಮತಾವಾದವು ಸ್ಥಿರವಾಗಿ ನೆಲೆಗೊಳ್ಳುತ್ತದೆ.

**ಹೆಂಡತಿ:**— (**ಕೂಗಿಕೊಳುತ್ತಾ**) ಏನಿದು ವಾಸನೆ ! ಏನೋ ಹೊತ್ತಿದ ವಾಸನೆ ?

**ರಾಯರು:** — ಎಲ. ವಿಜ್ಞಾನದ ಇಂದ್ರಜಾಲವು ನನ್ನ ಕೈಯ್ಯಲ್ಲಿಯೇ ಇದೆಯೋ ಏನು ? ಆಗಲೇ ಅನ್ನದ ತಪ್ಪೇಲಿಯಿಂದ ಚಿನ್ನದ ಹೊಗೆ ! (**ಎಂದು ಮುಚ್ಚಳ ತೆಗೆಯುವನು**) My God ! My Godness ! ಹಣೇ ಬರಹ ! ಅನ್ನಕ್ಕೆ ನೀರೇ ಸುರುವಿಲ್ಲ. ಬರೀ ಅಕ್ಕೀನೇ ಇಟ್ಟುಬಿಟ್ಟೇನಿ...........ಏನೊ. ಹ್ಯಾಗೆ ಮಾಡೋದು ? (**ಹೊರಗೆ ಯಾರೋ ಕೂಗುವರು**)

**ಹೆಂಡತಿ:**— ಹ್ಯಾಗೇನು ಅನಾಯಸೇ ಏಕಾದಶಿ ಆಗೇದ ಇವತ್ತ. ಹೊರಗೆ ಯಾರೊ ಅಥಿತಿಗಳು ಬಂದ ಹಾಗೆ ಕಾಣತದೆ ನೋಡ್ರಿ.

**ರಾಯರು:**— ನಮ್ಮ ಅರಸದ ವಾಸನೆ ಬಡಿದೇಬಂದಂತೆ ಕಾಣತದೆ ಅವರೂ (ಹೊರಗೆ ಮತ್ತೆ ಕೂಗು) ಓ. ಓ! ಅವರು ಮನೆಯಲ್ಲಿಲ್ಲರೀ ಹೊರಗೆ ಹೋಗ್ಯಾರ ಹೊರಗೆ! ಇಲ್ಲಿಲ್ಲ-ಊರಿಗೆ ಹೋಗ್ಯಾರ ಊರಿಗೆ!............... (ಎದೆಯ ಮೇಲೆ ಕೈಯಾಡಿಸಿಕೊಳ್ಳುತ್ತ) ಹೋದನೇ ಪ್ರಾಣಿ. ಮೂರ್ಖ ನನ್ನ ಧ್ವನಿ ಆದರೂ ಹ್ಯಾಗೆ ಗೊತ್ತು ಹತ್ತಲಿಲ್ಲೊ. ಏನು ಅಡುಗೆಯ ಮನೆಯಿಂದ ಕೂಗಿದಾಗ ನನ್ನ ಧ್ವನಿನೇ ಬದಲಾಯಿತೋ?

**ಹೆಂಡತಿ:**— ನಿತ್ಯಾ ಇಂತಹ ನಳಪಾಕ ಮಾಡಿದರೆ ನೀವೇ ಬದಲಾಗ ತೀರಿ. ಸಾಕು ಹೊರಗೆ ಕೂಡ್ರಿ

**ರಾಯರು:**— ಅಂದರೆ? (ಎಂದು ಆಶ್ಚರ್ಯದಿಂದ ದಂಗುಬಡೆದು ಹೆಂಡತಿಯನ್ನು ನೋಡುವಾಗ—)

ತೆರೆ —

---

# ಅಪ್ಪ ಹೆಚ್ಚೊ? ಅವ್ವ ಹೆಚ್ಚೊ?



**ವಿಜಯಾ:**— ('ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ' ಎಂದು ಪಾಠಮಾಡುತ್ತಿರುವಳು)

**ರಾಘು:**— ಯೇ ವಿಜಯಾ, ಏನು ಒಂದೇ ಸವನೆ ಗುಂಗೀ ಹುಳದ ಹಾಂಗ ರಾಗ ಮಾಡಲಿಕ್ಕೆ ಹತ್ತೀಯೆ ? ನಾನು ಅಲ್ಜಿಬ್ರಾ ಮಾಡಬೇಕಾಗೇದ!

**ವಿಜಯಾ:**—ಅಲ್ಜಿಬ್ರಾನಾರ ಮಾಡು ಟೆಂಗಿನ ಜೂಬ್ರಾನಾರಮಾಡು. ನಾಯೇನು ನಿನಗೆ ತ್ರಾಸು ಕೊಡತೇನೊ ? ನಮ್ಮ ಅಕ್ಕವರು ನಾಳೆ ಗಾದೆಯ ಮಾತು ಪಾಠಮಾಡಿಕೊಂಡು ಬರಲಿಕ್ಕೆ ಹೇಳ್ಯಾರ.

**ರಾಘು:** – ಗಾದೀ ಮಾತು ಆತು, ಕುರ್ಚೀದ ಮಾತು ಆತು. ನನ್ನ ತಲೆಗೆ ತ್ರಾಸ ಆಗುತದ ತಗೀ. ಹೀಗೆ ನೀನು ಗೊಂದಲ ಹಾಕಿದರ ನಾನು ಗಣೀತ ಹ್ಯಾಗೆ ಮಾಡಬೇಕು ?

**ವಿಜಯಾ:**— ಓಹೋ ! ಭಾಸ್ಕರಾಚಾರ್ಯರ ಮರಿಗಳೇ ತಮ್ಮ ತಲೆಗೆ ತ್ರಾಸು ಆಗುತದ ಏನು ?

**ರಾಘು:**— ಹೌದು, ನೀನು ನಾಯಿಯ ಮರಿಯ ಹಾಂಗ ಒದರೋದು ಕಡಿಮೆಮಾಡು.

**ವಿಜಯಾ:**— ಅಲ್ಲೊ ರಾಘು, ' ತಾಯಿಗಿಂತ ಬಂಧು ಇಲ್ಲ ಅಂದ-ರೇನು ?

**ರಾಘು:**— ಹಾಗೆಲ್ಲಾ ಅನಬಾರದು ತಾಯಿಗಿಂತ ಬಂದು ಇಲ್ಲ ಅಂದರ ತಂದೆಗೆ ಅಪಮಾನ ಅಲ್ಲೇನು ? ತಂದೆಯೂ ಬಂಧು ಅಲ್ಲವೇನು ?

**ವಿಜಯಾ:**— ಹೌದು ಆದರೆ ತಾಯಿಗಿಂತ ಹೆಚ್ಚು ಅಲ್ಲಾ ಅಂತ.

---

* ಆಲ್ ಇಂಡಿಯಾ ರೇಡಿಯೋ, ಮುಂಬಯಿಯಲ್ಲಿ ಹಳ್ಳಿಯ ಬಂಧುಗಳ ಕಾರ್ಯಕ್ರಮದಲ್ಲಿ ಬಿತ್ತರಿಸಲ್ಪಟ್ಟಿದು.

**ರಾಘು**:— ಯಾರು ನಿಮ್ಮ ಅಕ್ಕವರು ಹೇಳಿದರು ಹೌದಲ್ಲೊ ! ಆ ಗಾದೆಯ ಮಾತು ಬರೆದವರು ಹೆಂಗಸರೇ ಇದ್ದಿರಬೇಕು. ನಾನೂ ಗಾದೆಯ ಮಾತು ಬರೀತೇನೆ. ತಂದೆಗಿಂತ ಬಂಧು ಇಲ್ಲ ಅಂತ.

**ವಿಜಯಾ**:— ಖರೇ ಹೇಳು ರಾಘು ತಾಯಿ ಹೆಚ್ಚೊ ತಂದೆ ಹೆಚ್ಚೊ !

**ರಾಘು**:— ನೀನೇ ಹೇಳು ನಿನಗೆ ಅವ್ವನ ಮೇಲೆ ಬಹಳ ಪ್ರೀತಿಯೊ ಅಪ್ಪನ ಮೇಲೆ ಬಹಳ ಪ್ರೀತಿಯೊ ?

**ವಿಜಯಾ**:— 'ತಾಯೆ ನಿನ್ನುಪಕಾರ ಮರೆಯೆ ನಾನೆಂತು ಮಾಯೆ-ಯುಳ್ಳಾಕೆ ನೀನಲೆಯ ಹಿತಬಂಧು' ಅಂತ ಕವಿತೆಯೊಳಗ ಹೇಳಿಲ್ಲೇನು ? ನೋಡು ನಮ್ಮ ಅವ್ವ ನಾವು ಸಣ್ಣ ಕೂಸು ಇದ್ದಾಗ ನಮ್ಮನ್ನು ಜೋಪಾನ ಮಾಡತಾಳ. ನಾನಂತೂ ಸಣ್ಣ ಕೂಸು ಇದ್ದಾಗ ಬೆಳತನಕ ಹಟಮಾಡುತಿದ್ದೆನಂತ.

**ರಾಘು**:— ಹೂಂ ! ನೆನಪು ಅದ ಏನು ನಿನಗ ?

**ವಿಜಯಾ**:— ಅಲ್ಲೊ ಮೊನ್ನೆ ಅವ್ವ ಹೇಳುತ್ತಿದ್ದಿಲ್ಲೇನು ? ನಾನು ಅಳಲಿಕ್ಕೆ ಹತ್ತಿದಕೂಡಲೆ ಅಪ್ಪ ಅವ್ವನ್ನ ಬಯ್ಯುತ್ತಿದ್ದನಂತ ಯಾಕೆ ಅಳಸತೀ ಅಂತ. ಆದರ ಒಂದು ದಿವಸ ಆದರೂ ನನ್ನ ಎತ್ತಿಕೊಂಡು ಆಡಿಸಿ, ಚುಕ್ಕು ತಟ್ಟುತಿದ್ದಿಲ್ಲ ಅಂತ.

**ರಾಘು**:— ಹೌದು, ಚುಕ್ಕು ತಟ್ಟಿ ಜೋಗುಳ ಹಾಡಲಿಕ್ಕೆ ಅಪ್ಪ ಅಂದರೇನು ಕೈಯೊಳಗ ಬಳೆ ಇಟ್ಟಾನೇನು ? ಚುಕ್ಕು ತಟ್ಟುವದು ಅವ್ವನ ಕೆಲಸ.

**ವಿಜಯಾ**:— ಹೌದು, ಚುಕ್ಕು ತಟ್ಟುವದು ಅವ್ವನ ಕೆಲಸ. ಎರಡೂ ಹೊತ್ತು ಅಡಿಗೆ, ಎರಡುಹೊತ್ತು ಚಹಾ, ಪಂಚಮಿಯಲ್ಲಿ ತಂಬಿಟ್ಟು, ದೀಪಾವಳಿಯಲ್ಲಿ ಚಕ್ಕಲಿ, ಕರಚೀಕಾಯಿ, ನವರಾತ್ರಿಯಲ್ಲಿ ಹೋಳಿಗೆ ಎಲ್ಲಾ ಮಾಡೋದು ಅವ್ವನ ಕೆಲಸ. ಅವ್ವನೆಂದರೇನು ಮನೆಯೊಳಗಿನ ಯಂತ್ರ ಏನು ?

**ರಾಘು**:— ಹೌದು, ಅಪ್ಪ ಮುಂಜಾನೆ ಎದ್ದು ಒಂದು ಕಪ್ಪು ಚಹಾ ಸುದ್ದಾ ಪೂರಾ ಕುಡಿಯದೆ ಕೆಲಸಕ್ಕೆ ಹೋಗಬೇಕು. ಹಸಿವೆ—ನೀರಡಿಕೆ ಅನ್ನದೆ ಕೆಲಸ ಮಾಡಬೇಕು. ಮಧ್ಯಾನ್ಹ ಒಂದುತಾಸು ನಿದ್ದೆಮಾಡಲಿಕ್ಕೆ ಸುದ್ಧಾ ಪುರಸತ್ತು ಇರುವದಿಲ್ಲ. ಅವ್ವ ನೋಡಿದರ ದಿನಾಲು ಮಧ್ಯಾನ್ಹ ಬರೇ ಘುರು ಘುರು ನಿದ್ದೀಮಾಡುತ್ತಾಳೆ. ಆವ್ಯಾಲೆ ಇಷ್ಟೆಲ್ಲಾ ಬೆವರು ಸೂಸಿ ದುಡಿದು

ಪಹಿಲಾಕ್ಕೊಮ್ಮೆ ಕೈತುಂಬ ಪಗಾರ ತಂದು ಅವ್ವನ ಕಡೆಗೆ ಕೊಡದಿದ್ದರೆ ಅವ್ವ ಕರ್ಚಿಕಾಯಿ ಚಕ್ಕುಲಿ ಹ್ಯಾಂಗ ಮಾಡತಾಳ ಹೇಳತೀನಿ.

**ವಿಜಯಾ:**— ಆದರೆ ಅವ್ವ ನೋಡು ಒಂದು ದಿವಸ ಆದ್ರು ಸಿಟ್ಟು ಮಾಡತಾಳೇನು ? ದೀಪಾವಳಿಯಲ್ಲಿ ಕೊಲು ಹಾಕಲಿಕ್ಕೆ ತೋಟಿ ಆಡಲಿಕ್ಕೆ ಹೋಗತೀನಿ ಅಂದರ ರುಚಿ ರುಚಿ ಫರಾಳ ಮಾಡಿಕೊಡತಾಳೆ. ಪಂಜ್ತಿಗೆ ಹೋಗತೀನಿ ಅಂದರ ಬುರುಬುರಿ ಕಲಸನ್ನ ಮಾಡಿಕೊಡತಾಳೆ. ಆದರೆ ಅಪ್ಪ ಮಧ್ಯಾನ್ಹದಲ್ಲಿ ಕೆಂಪು ಮೋರೆ ಮಾಡಿಕೊಂಡು ಮನೆಗೆ ಬಂದಾ ಅಂದರ ಮಾತನಾಡಲಿಕ್ಕೆ ಅಂಜಿಕೆ ಬರುತದ.

**ರಾಘು:**— ಆದರ ಅವ್ವ ಬರೇ ನನಗ ಜಡ್ಡಾದಾಗಷ್ಟು ಪ್ರೀತಿ ಮಾಡತಾಳ. ಒಂದು ದಿವಸ ಆದರೂ ಅಪ್ಪ ನಿನ್ನ ಹೊಡೆದದ್ದು ನೋಡೀಯೇನು ? ಅವ್ವ ನೋಡಿದರ ದಿನಕ್ಕೆ ಹತ್ತುಸಾರೆ ಬಾಯ್ ಬಾಯುವ ಹಾಂಗ ಸೋಟಿ ಹಿಂಡತಾಳ. ಮೊನ್ನಿನ ದಿವಸ ಮ್ಯಾಟಿನಿ ಸೀನಿಮಾಕ್ಕೆ ಅಂತ ಅಪ್ಪ ರೊಕ್ಕ ಕೊಟ್ಟು ಕಳಿಸಿದರೂ ಹೋಗಿ ಬಂದಮೇಲೆ ಯಾಕೆ ಹೋಗಿದ್ದಿ ಅಂತ ಅವ್ವ ಡುಬ್ಬ ಬಾಯೋಹಾಂಗ ಹೊಡದಳು. ಮತ್ತ ದಿನಕ್ಕೆ ಇಪ್ಪತ್ತುಸಾರೆ ಪೇಟಿಗೆ ಅಟ್ಟತಾಳ, ಒಮ್ಮೆ ಪಲ್ಯಾಕಾಯಿ, ಮತ್ತೊಮ್ಮೆ ಕಿರಾಣಿ ಮತ್ತೊಮ್ಮೆ ನಿನ್ನ ಹೊಸ ಪೋಲಕಾ ಪರಕಾರ ತರಲಿಕ್ಕೇ—ಹೀಗೆ ದಿನಾ ಓಡ್ಯಾಡಿ ಓಡ್ಯಾಡಿ ಕಾಲು ಸೋತುಹೋದರೂ ಮತ್ತೆ ಡುಬ್ಬ ಬಾಯೋಹಾಂಗ ಹೊಡಿಸಿಕೋ-ಬೇಕು. ಅಂದರ ?

**ವಿಜಯ:** — ಹೌದು, ನಿನಗೆ ಅಪ್ಪನೇ ಚಲೋ. ನನಗೆ ಅವ್ವನೇ ಚಲೋ.

**ರಾಘು:** — ಹಾಗಾರ ಇಬ್ಬರೂ ಚಲೋ ಅನ್ನು. ಒಬ್ಬರ್ನೇ ಚಲೋ ಅನ್ನಬೇಡ.

**ವಿಜಯಾ:**— ಹಾಗಾದರೆ ನಾನು ಗಾದೆಮಾತು ಪಾಠ ಮಾಡಬಾರ-ದೇನು ?

**ರಾಘು:**— ಹಾಗಾದ್ರೆ ಮಾಡು ಕಲಿಸಿದ ಅಕ್ಕವರಿಗೆ ಕೇಳು 'ಅಕ್ಕಾ ಅವರ ಎರಡು ಕಣ್ಣುಗಳಲ್ಲಿಯೂ ಯಾವ ಕಣ್ಣು ಹೆಚ್ಚಿನದು' ಅಂತ.

**ವಿಜಯಾ:**— ಊಹೂಂ! ಅಂತೂ ಅಕ್ಕವಕ ಕಣ್ಣಲ್ಲೇ ಬೊಟ್ಟು ಚುಚ್ಚಿದೆ ಅಲ್ಲಾ!

---

# ನಮ್ಮ ಪ್ರಕಟನೆಗಳು



| | | | | |
|---|---|---|---|---|
| ಪರಿತ್ಯಕ್ತೆ (ಪತ್ತೇದಾರಿ) | .... | ೧ | ೪ | ೦ |
| ಎನ್ಕೆ-ಏಕಾಂಕಗಳು | .... | ೨ | ೦ | ೦ |
| ವಾತ್ಸಾಯನ ಕಾಮಸೂತ್ರ | .... | ೬ | ೦ | ೦ |
| ನಪುಂಸಕತೆ (ಸಚಿತ್ರ) | .... | ೦ | ೫ | ೦ |
| ಭೂಮಿಗಿಳಿದ ತಾರೆ (ಅಚ್ಚಿನಲ್ಲಿದೆ).... | | | | |

**ವಿವರಗಳಿಗೆ ಬರೆಯಿರಿ.**

ಮನೋರಂಜನ ಪ್ರಕಾಶನ ಸಮಿತಿ,

**ಧಾರವಾಡ**